# ಮುನ್ನುಡಿ

'ಭಾರತರತ್ನ' ಜವಾಹಿರರ ಜೀವನ ಚರಿತ್ರೆಯನ್ನು ಬರೆಯುವ ಪ್ರಯತ್ನ ಒಂದು ಬಗೆಯ ಆರಾಧನೆಯ ಪ್ರಯತ್ನ. ಏಕೆಂದರೆ ನೆಹರೂರವರು ಸಾಮಾನ್ಯ ಮಾನವನ ಮಟ್ಟವನ್ನು ಮೀರಿದವರು; ಅವರ ಸಾಧನೆ ಅಂತಹ ಮಹತ್ವದ್ದು. ಜರೂಸಲೇಮಿನ ಒಂದು ಪತ್ರಿಕೆ ಹೇಳುವಂತೆ ನೆಹರೂರವರು ಅಮೆರಿಕದ ಅಣುಬಾಂಬಿನ ದುರ್ಮರಣದಿಂದ ಪ್ರಪಂಚವನ್ನು ಉದ್ಧಾರಮಾಡಲು ಹುಟ್ಟಿರುವ ಅವತಾರಪುರುಷರು, ಪ್ರಪಂಚದ ಶಾಂತಿದೂತರು. ಇಂತಹ ಮಹಾಪುರುಷರ ಜೀವನ ಚರಿತ್ರೆಯನ್ನು ಬರೆಯುವುದು ಒಂದು ಭಾಷಾಸೇವೆ ದೇಶಸೇವೆ ಮಾತ್ರವಲ್ಲ, ದೇವರ ಸೇವೆಯೂ ಅಹುದು ಎಂದುಕೊಂಡಿದ್ದೇನೆ.

ಈಗ ಕೇವಲ ಒಂದು ತಿಂಗಳ ಕೆಳಗೆ ದಿವಂಗತ ಶ್ರೀ|| ಕೆ. ತಮ್ಮಯ್ಯನವರ ಮಕ್ಕಳು ಬಂದು ತಮ್ಮ ತಂದೆಯವರು ನೆಹರೂರವರ ಜೀವನ ಚರಿತ್ರೆಯನ್ನು ಬರೆಸಬೇಕೆಂದಿದ್ದುದಾಗಿಯೂ ಆದರೆ ಆ ಆಸೆಯನ್ನು ಅವರು ನೆರವೇರಿಸಲಾರದೆ ಕಾಲವಾದುದರಿಂದ ಅವರ ಆತ್ಮದ ಪ್ರೀತ್ಯರ್ಥವಾಗಿ ನೆಹರೂರವರ ಜೀವನ ಚರಿತ್ರೆಯನ್ನು ಬರೆಸಿ ಪ್ರಕಟಿಸಬೇಕೆಂದಿರುವುದಾಗಿಯೂ, ಅದನ್ನು ಬರೆದುಕೊಡಬೇಕೆಂದೂ ನನ್ನನ್ನು ಕೇಳಿದರು. ನಾನು ಒಪ್ಪಿಕೊಂಡೆ. ಹಾಗೆ ಒಪ್ಪಿಕೊಂಡಾಗ ಅದಕ್ಕೆ ವ್ಯಯವಾಗುವ ಶ್ರಮದ ಬಗ್ಗೆ ನನ್ನ ಗಮನ ಹರಿಯಲಿಲ್ಲ. ಕೆಲಸ ಕೈಗೊಂಡ ಮೇಲೆ ಅದರ ಅರಿವಾಯಿತು. ಈ ಒಂದು ತಿಂಗಳಿನಲ್ಲಿ ನಾನು ನೆಹರೂರವರ ಬಗ್ಗೆ ಬರೆದಿರುವ ಅನೇಕ ಪುಸ್ತಕಗಳನ್ನು ಓದಿ, ಏಳೆಂಟುಸಾವಿರ ಪುಟಗಳನ್ನು ಮನನಮಾಡಿ, ಈ ಜೀವನ ಚರಿತ್ರೆಯನ್ನು ತಯಾರುಮಾಡಿದ್ದೇನೆ. ಇಷ್ಟು ಅಲ್ಪಕಾಲದಲ್ಲಿ ಇಂತಹ ದೊಡ್ಡ ಕೆಲಸ ಸಾಧಿಸಿರುವುದಕ್ಕಾಗಿ ನನಗೆ ಸಂತೋಷವಾಗಿದೆ.

ಕನ್ನಡದಲ್ಲಿ ಈಗಾಗಲೇ ಜವಾಹಿರಲಾಲರ ಜೀವನ ಚರಿತ್ರೆಗಳು ಬಂದಿವೆ. ಸ್ವಾತಂತ್ರ್ಯೋದಯದ ತರುಣದಲ್ಲಿ ಬರೆದವುಗಳು ಅವು. ಸ್ವಾತಂತ್ರ್ಯ ಬಂದ ಮೇಲೆ ನಡೆದ ಸಂಗತಿಗಳಿಗೆ ಅಲ್ಲಿ ಹೆಚ್ಚಾಗಿ ಅವಕಾಶ

ವಿರಲಿಲ್ಲ. ವಾಸ್ತವವಾಗಿ ನೆಹರೂರವರು ತಮ್ಮ ಜೀವಿತದ ಮೊದಲ ಅರವತ್ತು ವರ್ಷಗಳಲ್ಲಿ ಸಾಧಿಸಿರುವುದಕ್ಕಿಂತ ಹೆಚ್ಚಾದ ಶಾಶ್ವತವಾದ ಕೆಲಸವನ್ನು ಸ್ವಾತಂತ್ರ್ಯ ಬಂದಮೇಲಿನ ಈ ಏಳೆಂಟು ವರ್ಷಗಳಲ್ಲಿ ಸಾಧಿಸಿದ್ದಾರೆ. ಸ್ವಾತಂತ್ರ್ಯ ಬರುವಮುನ್ನ ಸ್ವಾತಂತ್ರ್ಯಸಾಧನೆಯ ಒಂದೇ ಗುರಿಗಾಗಿ ಕೆಲಸ ನಡೆಯಿತು. ಅದಾದಮೇಲೆ ಅವರು ನಡೆಸಿರುವ ಕಾರ್ಯಗಳು ಸರ್ವತೋಮುಖವಾದುವು. ನಿಜವಾದ ನೆಹರೂರವರನ್ನು ನಾವು ಪರಿಚಯಮಾಡಿಕೊಳ್ಳಬೇಕಾದರೆ ನೆಹರೂರವರ ಸ್ವಾತಂತ್ರ್ಯ ನಂತರದ ಸಾಧನೆಯನ್ನು ಅರಿಯಬೇಕಾಗುತ್ತದೆ. ಅಂತಹ ನಿಜವಾದ ನೆಹರೂರವರನ್ನು ಪರಿಚಯಮಾಡಿಸುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ನೆಹರೂರವರ ಬಾಲ್ಯದಿಂದ ಮಹಾಪ್ರಧಾನಿಯಾಗುವವರೆಗಿನ ಜೀವನ ಚರಿತ್ರೆಗೆ ಎಪ್ಪತ್ತೈದು ಪುಟಗಳಷ್ಟನ್ನು ವಿನಿಯೋಗಿಸಿದ್ದರೆ, ಅದರ ಮುಂದಿನ ಚರಿತ್ರೆಯನ್ನು ಸುಮಾರು ನೂರು ಪುಟಗಳಲ್ಲಿ ಬರೆಯಲಾಗಿದೆ. ನೆಹರೂರವರ ವ್ಯಕ್ತಿತ್ವದ ಪೂರ್ಣ ಪರಿಚಯವನ್ನು ಮಾಡಿಕೊಡುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ಈಗತಾನೇ ಬಾಲ್ಯವನ್ನು ಕಳೆದು ಯೌವನಕ್ಕೆ ಕಾಲಿಡುತ್ತಿರುವ ೧೨ರಿಂದ ೧೬ ವರ್ಷದ ಮಕ್ಕಳಿಗೆ ಇಂತಹ ಮಹಾ ವ್ಯಕ್ತಿಯ ಪರಿಚಯ ಆವಶ್ಯಕವಾಗುತ್ತದೆ. ರೂಪುಗೊಳ್ಳುತ್ತಿರುವ ಅವರ ಭಾವೀಜೀವನದ ಗೊತ್ತುಗುರಿಗಳು ಸರಿಯಾದ ದಾರಿಯಲ್ಲಿ ನಡೆದು, ಇಂತಹ ಆದರ್ಶದಲ್ಲಿ ಅವರು ಜೀವನದ ಸಮಸ್ಯೆಗಳನ್ನೆದುರಿಸಲೂ ದೇಶಸೇವೆಯನ್ನು ಮಾಡಲೂ ಸಾಧ್ಯವಾಗುತ್ತದೆ. ಪುಷ್ಟಿಗೊಂಡು ಬೆಳೆಯುತ್ತಿರುವ ದೇಶಕ್ಕೆ ಈಗ ಅದರ ಆವಶ್ಯಕತೆ ಇನ್ನೂ ಹೆಚ್ಚು.

ನೆಹರೂರವರ ಸ್ವಾತಂತ್ರ್ಯಸಾಧನೆಯ ಕಾರ್ಯಚಟುವಟಿಕೆಗಳನ್ನು 'ಮಹಾಪ್ರಧಾನಿಯಾಗುವವರೆಗೆ' ಎಂಬ ಅಧ್ಯಾಯದಲ್ಲಿ ಕೊಟ್ಟಿದೆ. ಅದರಲ್ಲಿ ಜೀವನದ ಒಂದೊಂದು ಸಂಗತಿಯೂ ನೆಹರೂರವರ ವ್ಯಕ್ತಿತ್ವ ರೂಪಗೊಳ್ಳುವುದಕ್ಕೆ ಹೇಗೆ ಸಹಾಯಮಾಡಿತು—ಎಂಬುದನ್ನು ತಿಳಿಸಿದೆ. ತಂದೆ, ತಾಯಿ, ಹೆಂಡತಿ—ಈ ಸಂಸಾರ ಎಂತಹುದು, ನೆಹರೂರವರಿಗೆ ಅದರ ಬಲವೆಷ್ಟಿತ್ತು ಎಂಬುದನ್ನು 'ನೆಹರೂರವರ ಸಂಸಾರ'ದ ಅಧ್ಯಾಯ ನಿರೂಪಿಸುತ್ತದೆ. ಅವರು ಜೀವನದಲ್ಲಿ ಗೆದ್ದುಬಂದ ಗಂಡಾಂತರಗಳನ್ನು

'ವಿಷ ನಿಮಿಷಗಳು' ಎಂಬ ಅಧ್ಯಾಯದಲ್ಲಿಯೂ, ವ್ಯಕ್ತಿಯ ಸ್ವಭಾವ, ನಡವಳಿಕೆ, ಪಾಂಡಿತ್ಯ, ಸಂಸ್ಕೃತಿ—ಮೊದಲಾದುವನ್ನು ತಿಳಿಸುವ ಪ್ರಕರಣಗಳನ್ನು 'ರಸ ನಿಮಿಷಗಳು' ಎಂಬ ಅಧ್ಯಾಯದಲ್ಲಿಯೂ ಉದಾಹರಿಸಿದೆ. ಮಹಾತ್ಮಾ ಗಾಂಧಿಯವರು ನೆಹರೂರವರ ಜೀವನವನ್ನು ಹೇಗೆ ರೂಪಿಸಿದರೆಂಬುದನ್ನೂ ಪರಸ್ಪರ ಸಂಬಂಧವನ್ನೂ 'ಗಾಂಧೀಜಿ ಮತ್ತು ನೆಹರು' ಎಂಬ ಭಾಗ ತಿಳಿಸುತ್ತದೆ. ಸಾಹಿತ್ಯಕ್ಷೇತ್ರದಲ್ಲಿ ನೆಹರೂರವರ ಸ್ಥಾನವನ್ನೂ ಅವರ ಭಾಷಣ ಕಲೆಯನ್ನೂ ಒಂದೊಂದು ಪ್ರಕರಣದಲ್ಲಿ ತಿಳಿಸಲಾಗಿದೆ. ವಿದೇಶಾಂಗ ಮಂತ್ರಿಯಾಗಿ ನೆಹರೂರವರು ಸಾಧಿಸಿದ ವಿಶ್ವಚರಿತ್ರೆಯ ಪ್ರಕರಣಗಳನ್ನು ಒಂದು ಭಾಗದಲ್ಲೂ, ಮಹಾ ಪ್ರಧಾನಿಯಾಗಿ ನಲವತ್ತು ಕೋಟಿ ಪ್ರಜೆಗಳ ಕಲ್ಯಾಣಕ್ಕಾಗಿ ದುಡಿಯುತ್ತಿರುವ ಮತ್ತು ಸಾಧಿಸುತ್ತಿರುವ ಪ್ರಯೋಗಸಾಧನೆಗಳನ್ನು ಇನ್ನೊಂದು ಭಾಗದಲ್ಲೂ ವಿವರಿಸಿದೆ. ನೆಹರೂರವರ ಪ್ರಪಂಚ ಪರ್ಯಟನ ಮತ್ತು ಪ್ರವಾಸಗಳಿಂದ ಸಾಧಿತವಾಗಿರುವ ದೇಶೀಯ ವಿದೇಶೀಯ ಸಾಧನೆಗಳನ್ನು ಒಂದು ಅಧ್ಯಾಯ ತಿಳಿಸುತ್ತದೆ. ಜಗತ್ತನ್ನೇ ಆಕರ್ಷಿಸಿರುವ ಪಂಚಶೀಲದ ಬಗ್ಗೆ ಒಂದು ಅಧ್ಯಾಯವಿದೆ. ಹೀಗೆ ನೆಹರೂರವರು ಹುಟ್ಟಿದಾಗಿನಿಂದ ಅವರು ರಷ್ಯಾ ಪ್ರವಾಸವನ್ನು ಮುಗಿಸಿಬಂದಮೇಲೆ ಅವರ ಎಲ್ಲ ಸಾಧನೆಯ ಮೆಚ್ಚಿಕೆಗಾಗಿ ಅಧ್ಯಕ್ಷ ರಾಜೇಂದ್ರ ಪ್ರಸಾದರು 'ಭಾರತರತ್ನ'ವೆಂಬ ಬಿರುದನ್ನು ದಯಪಾಲಿಸಿರುವವರೆಗಿನ ಜೀವನ ಚರಿತ್ರೆಯನ್ನು ಈ ಪುಸ್ತಕದಲ್ಲಿ ಕೊಡಲಾಗಿದೆ. ಇತ್ತೀಚಿನ ಘಟನೆಗಳನ್ನುಳ್ಳ ಪುಸ್ತಕ ಕನ್ನಡದಲ್ಲಿಲ್ಲದಿರುವುದರ ಕೊರತೆಯನ್ನು ಈ ಪುಸ್ತಕ ನಿವಾರಿಸುತ್ತದೆ. ಎಲ್ಲ ದೃಷ್ಟಿಕೋಣಗಳಿಂದ ನೆಹರೂರವರ ಜೀವನವನ್ನು ಅರ್ಥಮಾಡಿಕೊಳ್ಳಬೇಕೆಂದಿರುವವರಿಗೆ ಕನ್ನಡದಲ್ಲಿರುವ ಪುಸ್ತಕ ಈಗ ಇದೊಂದೇ ಎಂದರೆ ಅದು ಹೆಮ್ಮೆಯ ಮಾತಾಗಲಾರದೆಂದು ಭಾವಿಸುತ್ತೇನೆ.

ನೆಹರೂರವರು ದೊಡ್ಡವರು. ಅವರ ಚರಿತ್ರೆ ಇನ್ನೂ ದೊಡ್ಡದು. ಅವರು ಬರೆದ ಆತ್ಮಕತೆಯೇ ಎಂಟುನೂರು ಪುಟಗಳಷ್ಟಿದೆ. ಅದೂ ೧೯೩೬ನೆಯ ಇಸವಿಯವರೆಗಿನ ಘಟನೆಗಳು ಮಾತ್ರ. ಅಲ್ಲಿಯವರೆಗಿನ ಕತೆಗೆ ಆ ಆತ್ಮಕತೆಯೇ ಆಧಾರ. ಶ್ರೀ|| ಸಿ. ಅಶ್ವತ್ಥನಾರಾಯಣರಾಯರು

ಪ್ರಕಟಿಸಿರುವ ಆತ್ಮಕತೆಯಿಂದಲೂ ಶ್ರೀ॥ ಕಂದಾಡೆ ಕೃಷ್ಣಯ್ಯಂಗಾರ್ ಮತ್ತು ಶ್ರೀ॥ ಎ. ಕೆ. ಪುಟ್ಟರಾಮು ಇವರುಗಳು ಬರೆದಿರುವ ಜವಾಹಿರ ಲಾಲರ ಜೀವನ ಚರಿತ್ರೆಯ ಪುಸ್ತಕಗಳಿಂದಲೂ ನೆಹರೂರವರಿಗೆ ಅರವತ್ತು ವರ್ಷಗಳಾದಾಗ ಸಮರ್ಪಿಸಿದ 'ಅಭಿನಂದನ್ ಗ್ರಂಥ್' ಪುಸ್ತಕದಿಂದಲೂ ನಾನು ತುಂಬಾ ಉಪಕಾರಪಡೆದಿದ್ದೇನೆ. ಕೆಲವು ಕಡೆ ಆ ಪುಸ್ತಕಗಳ ಭಾಗಗಳನ್ನೇ ಎತ್ತಿಕೊಟ್ಟಿದ್ದೇನೆ. ಈ ಲೇಖಕರಿಗೆ ನನ್ನ ಕೃತಜ್ಞತೆಯನ್ನು ಸೂಚಿಸುವುದು ನನ್ನ ಕರ್ತವ್ಯವಾಗಿದೆ.

ಈ ಪುಸ್ತಕವನ್ನು ಕೇವಲ ಅತ್ಯಲ್ಪ ಅವಧಿಯಲ್ಲಿ ಇಷ್ಟು ಅಂದವಾಗಿ ಅಚ್ಚುಮಾಡಿಕೊಟ್ಟಿರುವ ಬೆಂಗಳೂರು ಪ್ರೆಸ್ಸಿನವರಿಗೂ ನಾನು ಕೃತಜ್ಞನಾಗಿದ್ದೇನೆ.

ತಾ॥ ೨೫–೭–೧೯೫೫ **ಕೈನಾರ ರಾಜಾರಾವ್.**

# ವಿಷಯ ಸೂಚಿಕೆ

# ಚಿತ್ರಗಳು



---


ಮೇಲಿನ ಚಿತ್ರಗಳನ್ನು ಕೊಟ್ಟು ಉಪಕರಿಸಿರುವ ಈ ಕೆಳಗಿನ ವ್ಯಕ್ತಿ, ಸಂಸ್ಥೆಗಳವರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ.

ಚಿತ್ರ ೧: ಬೆಂಗಳೂರು ಪ್ರೆಸ್, ಬೆಂಗಳೂರು.

,, ೩: ಮೈಸೂರು ಸರ್ಕಾರದವರು.

,, ೨, ೪, ೫ ಮತ್ತು ೬: ಆರ್ಯಾವರ್ತ ಪ್ರಕಾಶನ ಗೃಹ, ಕಲ್ಕತ್ತ.

,, ೭: ಪಂಜಾಬ್ ಫೋಟೋ ಸರ್ವಿಸ್, ನ್ಯೂ ಡೆಲ್ಲಿ.

,, ೮: 'ಟಾಸ್' ರೆಪ್ರೆಸೆಂಟೇಟಿವ್ಸ್ ಇನ್ ಇಂಡಿಯಾ, ನ್ಯೂ ಡೆಲ್ಲಿ.

,, ೯: ಚೈನೀಸ್ ಎಂಬೆಸ್ಸಿ, ನ್ಯೂ ಡೆಲ್ಲಿ.

,, ೧೦: ಶ್ರೀ ಎಸ್. ಎಂ. ಸಾಗರ್, ಸಾಗರ್ ಫೋಟೋ ಸ್ಟುಡಿಯೋ, ಬೆಂಗಳೂರು.

,, ೧೧ (ಪಡಿಯಚ್ಚು): 'ಪ್ರಜಾವಾಣಿ', ಬೆಂಗಳೂರು.



ಮಹಾಪ್ರಧಾನಿ ಪಂಡಿತ ಜವಾಹಿರಲಾಲ್ ನೆಹರು

ಶ್ರೀ

# ಭಾರತರತ್ನ ಜವಾಹಿರ್

# ಜವಾಹಿರಲಾಲ ನೆಹರು

## ಅವರ

# ಜೀವನ ಚರಿತ್ರೆ

## ೧. ಮಹಾಪ್ರಧಾನಿಯಾಗುವವರೆಗೆ

ಜವಾಹಿರಲಾಲ ನೆಹರೂರವರು ಭರತ ಖಂಡಕ್ಕೆ ಮಾತ್ರವಲ್ಲ ಇಡೀ ಪ್ರಪಂಚಕ್ಕೇ ಮಾದರಿಯಾದ ಮಹಾವ್ಯಕ್ತಿ. ಶ್ರೀಮಂತರ ಮನೆತನದಲ್ಲಿ ಹುಟ್ಟಿ, ಯೂರೋಪಿಯನ್ನರ ಮಕ್ಕಳಂತೆ ದಾದಿ ದಾಸಿಯರ ಪಾಲನೆಯಲ್ಲಿ ಬೆಳೆದು, ಇಂಗ್ಲೆಂಡಿನಲ್ಲಿ ಎಂ.ಎ. ಮತ್ತು ಬಾರ್-ಅಟ್-ಲಾ ಪದವಿಗಳನ್ನು ಪಡೆದು ದೀನದಲಿತರನ್ನು ಹತ್ತಿರ ಸೇರಿಸುವುದಕ್ಕೇ ಹಿಂಜರಿಯುತ್ತಿದ್ದ ಆಗರ್ಭಶ್ರೀಮಂತರು. ಇಂತಹವರು ಕೃಷಿಕ, ಕಾರ್ಮಿಕ, ದೀನದಲಿತರಾದ ಹರಿಜನರು—ಇವರುಗಳ ಉದ್ಧಾರಕ್ಕಾಗಿ ಜೀವವನ್ನೇ ಮೀಸಲಾಗಿಟ್ಟಿದ್ದ ಗಾಂಧಿಯಂತಹ ಮಹಾತ್ಮರ ಪ್ರಭಾವಕ್ಕೆ ಒಳಗಾಗಿ ತಮ್ಮ ಶ್ರೀಮಂತಿಕೆಯನ್ನು ಮರೆತು ದಾಸ್ಯಶೃಂಖಲೆಯಲ್ಲಿ ಬಂಧಿತರಾಗಿದ್ದ ನಲವತ್ತು ಕೋಟಿ ಜನರ ಉದ್ಧಾರಕ್ಕೆಂದು ಟೊಂಕಕಟ್ಟಿ ನಿಂತರು. ಬಡವ ಬಲ್ಲಿದರು ಹರಿಜನ ಹಾರುವರು ಗಂಡಸರು ಹೆಂಗಸರು—ಎಂಬ ಭೇದ ಭಾವವನ್ನು ಮರೆತು ಭರತ ಖಂಡದ ಸಮಸ್ತ ಪ್ರಜೆಗಳಿಗೂ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟರು; ಮಹಾನುಭಾವರಾದರು. ಈ ಸ್ವಾತಂತ್ರ್ಯ ಸಮರದಲ್ಲಿ ಸತ್ಯ ಅಹಿಂಸೆಗಳ ಮುಂದೆ ಮದ್ದುಗುಂಡುಗಳು ನಿಷ್ಪ್ರಯೋಜಕವೆಂದು ಜಗತ್ತಿಗೇ ತೋರಿಸಿಕೊಟ್ಟ ವೀರರಿವರು. ಸ್ವಾತಂತ್ರ್ಯದ ಸವಿಯನ್ನೇ ಅರಿಯದ ನಲವತ್ತು ಕೋಟಿ ಪ್ರಜೆಗಳಲ್ಲಿ ಓಡಾಡಿ ಉಪನ್ಯಾಸ

ಗಳನ್ನು ಕೊಟ್ಟು ರಾಜಕೀಯ ಜಾಗೃತಿಯನ್ನುಂಟುಮಾಡಿ ಸ್ವಾತಂತ್ರ್ಯ ಸಮರದಲ್ಲಿ ಹಲವಾರು ಸಲ ಮೇಲಿಂದ ಮೇಲೆ ಜೈಲುವಾಸವನ್ನನುಭವಿಸಿ, ಖಾಯಿಲೆಯಲ್ಲಿದ್ದ ತಂದೆ ತಾಯಿ, ಕಡೆಗೆ ಹೆಂಡತಿಗೆ ಕೂಡ, ಸೆರೆಮನೆಯ ವಾಸದ ಕಾರಣ, ಸೇವೆಮಾಡಲಾಗದೆ ಅವರನ್ನು ಬಲಿಗೊಟ್ಟು ಭಾರತಕ್ಕೆ ಸ್ವಾತಂತ್ರ್ಯವನ್ನು ಸಾಧಿಸಿಕೊಟ್ಟವರು ಅವರು. ಭಾರತದ ವಿಭಜನೆ ಅನಿವಾರ್ಯವಾಗಿ, ಭಾರತ ಸ್ವಾತಂತ್ರ್ಯವನ್ನು ಪಡೆದ ಮೇಲೆ ರಾಜ್ಯದ ಸೂತ್ರಗಳನ್ನು ಕೈಲಿ ಹಿಡಿದುಕೊಂಡು ಕೋಮುವಾರು ರಕ್ತಪಾತವನ್ನು ನಿಲ್ಲಿಸಿ, ನಿರಾಶ್ರಿತರಿಗೆ ವಸತಿ ಉದ್ಯೋಗಗಳನ್ನು ಕಲ್ಪಿಸಿಕೊಟ್ಟು, ದೇಶೀಯ ರಾಜರ ಆಳ್ವಿಕೆಯಿಂದ ಖಂಡತುಂಡವಾಗಿದ್ದ ದೇಶವನ್ನು ಒಂದುಗೂಡಿಸಿ, ಮಾದರಿಯಾದ ರಾಜ್ಯಾಂಗವನ್ನು ರಚಿಸಿ, ಭಾರತವನ್ನು ಜಾತ್ಯಾತೀತ ಏಕೈಕ ರಾಷ್ಟ್ರವನ್ನಾಗಿ ಸಾರಿದವರು ಅವರು. ಸ್ವಾತಂತ್ರ್ಯ ಬಂದ ಏಳು ವರುಷಗಳಲ್ಲಿ ಆಹಾರದ ಅಭಾವವನ್ನು ನೀಗಿಸಿ, ಸಾಕಾಗುವಷ್ಟು ಬಟ್ಟೆಯುತ್ಪಾದನೆಯನ್ನು ಮಾಡಿಸಿ, ಪ್ರತಿ ಸಂಸಾರಕ್ಕೂ ಒಂದೊಂದು ಮನೆಯಿರುವಂತೆ ಬೃಹತ್ಪ್ರಮಾಣದಲ್ಲಿ ಗೃಹನಿರ್ಮಾಣಕಾರ್ಯಕ್ಕೆ ಅವರು ಈಗ ಕೈಹಾಕಿದ್ದಾರೆ. ಜಮೀನ್ದಾರಿಯನ್ನು ನಿರ್ಮೂಲವಮಾಡಿ ರೈತನಿಗೆ ಸ್ವಾತಂತ್ರ್ಯ ನೆಮ್ಮದಿಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಹೊಸ ಮದುವೆಯ ಕಾನೂನಿನಿಂದ ಹೆಂಗಸಿಗೆ ಸಮಾಜದಲ್ಲಿ ಗಂಡಸಿನ ಸಮಾನವಾದ ಹಕ್ಕು ಬಾಧ್ಯತೆಗಳನ್ನು ದೊರಕಿಸಿಕೊಟ್ಟಿದ್ದಾರೆ. ದೇಶದಲ್ಲಿ ಒಂದು ಹೊಸ ಹುರುಪನ್ನು ಹುಟ್ಟಿಸಿ ಹೊಸ ಮಾದರಿಯ ಸುಸಂಸ್ಕೃತವಾದ ಸಮಾಜವನ್ನೇ ಸೃಷ್ಟಿಮಾಡತೊಡಗಿದ್ದಾರೆ.

ನೆಹರೂರವರು ಜನ್ಮಭೂಮಿಯಾದ ಭಾರತಕ್ಕೆ ಇಂತಹ ಅಮೂಲ್ಯವಾದ ಸೇವೆಯನ್ನು ಸಲ್ಲಿಸುತ್ತಿರುವರಾದರೂ ವಿಶಾಲ ಪ್ರಪಂಚಕ್ಕೆ ಅವರು ಸಲ್ಲಿಸುತ್ತಿರುವ ಸೇವೆ ಇನ್ನೂ ಅತಿಶಯವಾದುದು. ಭಾರತಕ್ಕೆ ಸ್ವಾತಂತ್ರ್ಯ ಬಂದ ಕೂಡಲೇ ಅಮೇರಿಕವು ಅವರನ್ನು ಆಹ್ವಾನಿಸಿತು. ಅಲ್ಲಿಂದೀಚೆಗೆ ಆಹ್ವಾನಿತರಾಗಿ ಅವರು ಬರ್ಮಾ, ಚೀನ, ಇಂಡೊ-ಚೈನ, ರಷ್ಯಾ, ಪೋಲೆಂಡ್, ಯುಗೋಸ್ಲಾವಿಯಾ—ಮುಂತಾದ ದೇಶಗಳಲ್ಲಿ ಸಂಚರಿಸಿದ್ದಾರೆ; ಅಭೂತಪೂರ್ವ ಸ್ವಾಗತವನ್ನು ಪಡೆದಿದ್ದಾರೆ. ಈಗಿನ ಪ್ರಪಂಚ

ಅಮೇರಿಕ ರಷ್ಯಾಗಳು ಕಂಡುಹಿಡಿದಿರುವ ಆಟಂಬಾಂಬ್ ಹೈಡ್ರೊಜನ್ ಬಾಂಬ್‌ಗಳಂತಹ ಮಾರಕಾಸ್ತ್ರಗಳ ಭಯದಲ್ಲಿ ತತ್ತರಿಸುತ್ತಿವೆ; ಯುದ್ಧಭೀತಿಯಿಂದ ತಲ್ಲಣಿಸುತ್ತಿವೆ. ಅಂತಹ ಭೀತಿಯನ್ನು ನಿರ್ಮೂಲವಾಡುವುದಕ್ಕಾಗಿ ಪಂಚಶೀಲದ ಶಾಂತಿ ದೌತ್ಯವನ್ನು ವಹಿಸಿ ನೆಹರೂರವರು ಪ್ರಪಂಚದಲ್ಲಿ ಪ್ರವಾಸಮಾಡುತ್ತಿದ್ದಾರೆ. ನಾಶವಾಗುವ ಭಯದಿಂದ ನಡುಗುತ್ತಿರುವ ಪ್ರಪಂಚಕ್ಕೆ ಪರಸ್ಪರ ಸಹಕಾರದಿಂದ ನಿರ್ಭಯರಾಗಿ ಬಾಳನ್ನು ನಡೆಸಬಲ್ಲ ಸಹಬಾಳ್ವೆಯ ತತ್ತ್ವವನ್ನು ಸಾರುತ್ತಿದ್ದಾರೆ. ಪ್ರಪಂಚದ ಅರ್ಧಕ್ಕಿಂತ ಹೆಚ್ಚಿನ ಜನಸಂಖ್ಯೆಯುಳ್ಳ ರಾಷ್ಟ್ರಗಳವರು ಈಗಾಗಲೇ ಈ ಪಂಚಶೀಲದ ಶಾಂತ ತತ್ವಗಳನ್ನು ಒಪ್ಪಿಕೊಂಡಿದ್ದಾರೆ. ಉಳಿದ ಪ್ರಪಂಚದ ದೃಷ್ಟಿಯೂ ಈ ಕಡೆಗೇ ಹೊರಳುತ್ತಿದೆ.

ಹೀಗೆ ತಾಯ್ನಾಡಿನ ನಲವತ್ತು ಕೋಟಿ ಪ್ರಜೆಗಳ ಸ್ವಾತಂತ್ರ್ಯವನ್ನು ಶಾಂತಿಯಿಂದ ಸಾಧಿಸಿ ಯುದ್ಧಭೀತಿಯ ಅಶಾಂತಿಯಿಂದ ತೊಳಲುತ್ತಿರುವ ಪ್ರಪಂಚಕ್ಕೇ ಸಹಬಾಳ್ವೆಯ ಶಾಂತಿಮಾರ್ಗವನ್ನು ಸಾರುತ್ತಿರುವ ಈ ವ್ಯಕ್ತಿಯ ಜೀವನ ವೃತ್ತಾಂತವೇನು? ಅವನ ಸಾಧನೆಯ ಮಾರ್ಗ ಯಾವುದು? ತಪಶ್ಶಕ್ತಿ ಎಂತಹುದು? ಆತ್ಮಶಕ್ತಿಯ ಬಲ ಎಂತಹುದು?—ಎಂಬ ವಿಷಯಗಳು ಯಾರಿಗಾದರೂ ಕುತೂಹಲವನ್ನು ಕೆರಳಿಸುವಂತಹವುಗಳೇ. ಕೇವಲ ಭಾರತಕ್ಕಲ್ಲ ಇಡೀ ಪ್ರಪಂಚಕ್ಕೇ ಇಂತಹ ವ್ಯಕ್ತಿಯ ಜೀವನ ಚರಿತ್ರೆಯನ್ನು ತಿಳಿಯುವ ಆವಶ್ಯಕತೆ ಇದೆ. ಮೇಲಾಗಿ ಭಾರತದ ಪ್ರತಿಯೊಬ್ಬ ಪ್ರಜೆಗೂ ಇದರ ಆವಶ್ಯಕತೆ ಹೆಚ್ಚು. ಒಂದು ಜೀವಮಾನದಲ್ಲಿ ಕೇವಲ ನಮ್ಮಂತೆ ಮನುಷ್ಯನಾದ ಒಬ್ಬ ವ್ಯಕ್ತಿ ಇಂತಹ ಮಹತ್ಸಾಧನೆಯನ್ನು ಸಾಧಿಸಿದನೆಂದರೆ ಅಂತಹವನ ಜೀವನ ಸಮಸ್ತರಿಗೂ ಅನುಕರಣೀಯವೇ; ಬಾಲಕರಿಗೂ ಯುವಕರಿಗೂ ಒಂದು ಆದರ್ಶ, ಪ್ರೌಢರಿಗೆ ಮಾರ್ಗದರ್ಶಕ, ವಯಸ್ಸಾದವರಿಗೆ ಒಂದು ಮೆಚ್ಚಿಕೆ. ಅಂತಹವನ ಜೀವನ ಚರಿತ್ರೆ ಮಾನವ ಕುಲಕ್ಕೇ ಒಂದು ಮೇಲ್ಪಂಕ್ತಿ, ಭಾರತಕ್ಕೆ ಗೌರವ. ಅಂತಹ ಮಹಾವ್ಯಕ್ತಿಯಾದ ಜವಾಹಿರಲಾಲ ನೆಹರೂರವರ ಜೀವನ ಚರಿತ್ರೆಯನ್ನು, ಮುಖ್ಯ ಘಟನೆಗಳ ಜಾಡನ್ನು ಹಿಡಿದು, ಸಂಕ್ಷೇಪವಾಗಿ ಈ ಮುಂದೆ ಬರೆಯಲಾಗಿದೆ.

ನೆಹರೂರವರ ಹಿರಿಯರು ಕಾಶ್ಮೀರದಲ್ಲಿ ವಾಸಮಾಡುತ್ತಿದ್ದರು. ರಾಜ ಕೌಲರೆಂಬ ಅವರ ಹಿರಿಯರು ಬ್ರಾಹ್ಮಣರು. ಅವರು ಪರ್ಷಿಯನ್ ಮತ್ತು ಸಂಸ್ಕೃತಗಳಲ್ಲಿ ಹೆಸರುವಾಸಿಯಾದ ಪಂಡಿತರಾಗಿದ್ದರು. ಔರಂಗಜೇಬನ ಕಾಲಾನಂತರ ಮೊಗಲಾಯಿ ಸಿಂಹಾಸನವನ್ನೇರಿದ ಫರುಖ್ಸಿಯರನು ಕಾಶ್ಮೀರದಲ್ಲಿ ಪ್ರವಾಸಮಾಡುತ್ತಿದ್ದಾಗ ರಾಜ ಕೌಲರ ಪಾಂಡಿತ್ಯಕ್ಕೆ ಮೆಚ್ಚಿ ಅವರನ್ನು ದೆಹಲಿಗೆ ಕರೆಸಿಕೊಂಡನು. ಸುಮಾರು ೧೭೧೬ ರಲ್ಲಿ ರಾಜ ಕೌಲರು ದೆಹಲಿಗೆ ಬಂದು ನೆಲಸಿದರು. ನಾಲೆಯ ಪಕ್ಕದಲ್ಲಿ ಒಂದು ಮನೆಯೂ ಕೆಲವು ಗ್ರಾಮಗಳ ಜಹಗೀರಿಯೂ ಅವರಿಗೆ ಲಭಿಸಿದುವು. ನೆಹಾರ್ ಎಂದರೆ ಕಾಲುವೆ, ನಾಲಾ ಎಂದರ್ಥ. ಕ್ರಮೇಣ ಕೌಲ ಎಂಬ ಮನೆತನದ ಹೆಸರು ತಪ್ಪಿಹೋಗಿ, ನಾಲಾದ ನೆಹಾರ್ ಎಂಬ ಪದದಿಂದ ನೆಹರು ಎಂಬ ಹೆಸರು ಜವಾಹಿರಲಾಲರ ಮನೆತನಕ್ಕೆ ಅಂಟಿಕೊಂಡಿತು.

೧೮೫೭ನೆಯ ಇಸವಿಯ ಸಿಪಾಯಿ ದಂಗೆಯ ಕಾಲದಲ್ಲಿ ನೆಹರೂರವರ ಹಿರಿಯರು ಇದ್ದ ಆಸ್ತಿಯನ್ನೆಲ್ಲಾ ಕಳೆದುಕೊಂಡು ದೆಹಲಿಯನ್ನು ಬಿಟ್ಟು ಆಗ್ರಾ ಪಟ್ಟಣವನ್ನು ಸೇರಿದರು. ೧೮೬೧ರ ಮೇ ೬ನೆಯ ತಾರೀಖಿನಲ್ಲಿ ಜವಾಹಿರರ ತಂದೆಯವರಾದ ಮೋತೀಲಾಲ ನೆಹರೂರವರು ಹುಟ್ಟಿದರು. (ಅದೇ ದಿವಸದಲ್ಲೇ ಕವಿ ರವೀಂದ್ರನಾಥ ಠಾಕೂರರವರೂ ಹುಟ್ಟಿದುದು ಒಂದು ಸೋಜಿಗದ ಸಂಗತಿ.) ಆದರೆ ಮೋತೀಲಾಲರು ಹುಟ್ಟುವುದಕ್ಕೆ ಮೂರುತಿಂಗಳಿಗೆ ಮುಂಚೆ ಅವರ ತಂದೆಯವರು ತೀರಿಕೊಂಡಿದ್ದರು. ಅದರಿಂದ ಮೋತೀಲಾಲರು ಇಬ್ಬರು ಅಣ್ಣಂದಿರ ಆಶ್ರಯದಲ್ಲಿ ಬೆಳೆದರು. ಕಿರಿಯ ಅಣ್ಣಂದಿರಾದ ನಂದಲಾಲ ನೆಹರೂರವರು ಖೇತ್ರಿ ಸಂಸ್ಥಾನದಲ್ಲಿ ಹತ್ತುವರುಷ ದಿವಾನರಾಗಿದ್ದು ಆಮೇಲೆ ವಕೀಲಿ ವೃತ್ತಿ ಮಾಡುತ್ತಿದ್ದರು. ಮೋತೀಲಾಲರು ಇವರೊಡನೆ ವಾಸಿಸುತ್ತಿದ್ದರು. ನೂತನವಾಗಿ ಸ್ಥಾಪಿತವಾದ ಹೈಕೋರ್ಟು ದೆಹಲಿಯಿಂದ ಅಲಹಾಬಾದಿಗೆ ವರ್ಗಾಯಿಸಲ್ಪಟ್ಟಾಗ ಲಾಯರಾಗಿದ್ದ ನಂದಲಾಲ ನೆಹರೂರವರೂ ತಮ್ಮ ಸಂಸಾರವನ್ನು ಅಲಹಾಬಾದಿಗೆ ಬದಲಾಯಿಸಿದರು. ಅಲ್ಲಿಂದೀಚೆಗೆ ಅಲಹಾಬಾದೇ ನೆಹರೂರವರ ತೌರೂರಾಯಿತು.

ಮೋತೀಲಾಲ ನೆಹರೂರವರು ತುಂಬಾ ಮೇಧಾವಿಗಳು. ಚಿಕ್ಕ ವಯಸ್ಸಿನಲ್ಲಿಯೇ ಅವರು ಪರ್ಷಿಯನ್ ಭಾಷೆಯಲ್ಲಿ ಪಂಡಿತರಾಗಿದ್ದರೆಂದು ಎಷ್ಟೋಜನ ದೊಡ್ಡವರು ಅವರನ್ನು ಗೌರವದಿಂದ ಕಾಣುತ್ತಿದ್ದರು. ಅವರು ಇಂಗ್ಲಿಷನ್ನು ಕಲಿಯಲು ಅಭ್ಯಾಸಮಾಡಿದ್ದು ೧೦–೧೫ ವರ್ಷ ಗಳಾದ ಮೇಲೆ. ಬಿ.ಎ. ತರಗತಿಯವರೆಗೂ ಸುಸೂತ್ರವಾಗಿ ಬಂದವರು ಬಿ.ಎ. ಪರೀಕ್ಷೆಯಲ್ಲಿ ಒಂದು ಪ್ರಶ್ನೆಪತ್ರಿಕೆಗೆ ಸರಿಯಾದ ಉತ್ತರ ಬರೆಯ ಲಿಲ್ಲವೆಂದು ಉಳಿದ ಭಾಗದ ಪರೀಕ್ಷೆಗೆ ಹಾಜರಾಗಲಿಲ್ಲ. ಆದರೆ 'ಉದ್ಯೋಗಂ ಪುರುಷಲಕ್ಷಣಂ' ಎಂದುಕೊಂಡು ಒಂದು ಉದ್ಯೋಗ ವನ್ನು ನಡೆಸುವುದಕ್ಕಾಗಿ ಹೈಕೋರ್ಟು ವಕೀಲರ ಪರೀಕ್ಷೆಗೆ ಕುಳಿತು ಮೊದಲನೇ ಸ್ಥಾನವನ್ನು ಗಳಿಸಿ ಭಂಗಾರದ ಪದಕವನ್ನು ಪಡೆದರು. ಕಾನ್ಪುರದ ಡಿಸ್ಟ್ರಿಕ್ಟ್ ಕೋರ್ಟುಗಳಲ್ಲಿ ಅವರ ವಕೀಲಿತನವು ಪ್ರಾರಂಭ ವಾಯಿತು. ಅಲ್ಲಿ ಮೂರು ವರ್ಷಗಳ ಅಭ್ಯಾಸವಾದನಂತರ ಅಲಹಾ ಬಾದಿಗೆ ಬಂದರು. ಆ ಹೊತ್ತಿಗೆ ಅವರ ಅಣ್ಣಂದಿರಾದ ನಂದಲಾಲರು ಹಠಾತ್ತಾಗಿ ಕಾಲವಾದ್ದರಿಂದ ಸಂಸಾರದ ವಿಶಿಷ್ಟ ಜವಾಬ್ದಾರಿಯೂ ಇವರ ತಲೆಯಮೇಲೇ ಬಿತ್ತು.

ಮೋತೀಲಾಲರು ಯಾವ ಕೆಲಸವನ್ನಾದರೂ ಬಹು ಶ್ರದ್ಧೆಯಿಂದ ಮಾಡುತ್ತಿದ್ದುದರಿಂದ ವಕೀಲಿ ವೃತ್ತಿಯಲ್ಲಿ ಬಹು ಕೀರ್ತಿ ಪಡೆದು ಅಧಿಕ ಧನವನ್ನು ಗಳಿಸಿದರು. ಅಂದಿನ ಕಾಲದಲ್ಲಿ ಯೂರೋಪಿಯನ್ನರಂತೆ ಜೀವಿಸುವುದೇ ಶ್ರೀಮಂತಿಕೆಯ ಕುರುಹಾದ್ದರಿಂದ ದಿನದಿನಕ್ಕೆ ಹೆಚ್ಚುಹೆಚ್ಚು ಶ್ರೀಮಂತರಾಗುತ್ತಿದ್ದ ಮೋತೀಲಾಲರ ಸಂಸಾರ ಎಲ್ಲ ರೀತಿಗಳಲ್ಲೂ ಪಾಶ್ಚಾತ್ಯ ರೀತಿನೀತಿಗಳಂತೆಯೇ ಮಾರ್ಪಾಟಾಯಿತು. ಇಂತಹ ಮಾರ್ಪಾ ಟಾದ ಸಂಸಾರದಲ್ಲಿ ೧೮೮೯ರ ನವೆಂಬರ್ ೧೪ನೆಯ ತಾರೀಖಿನಲ್ಲಿ ಜವಾಹಿರಲಾಲ ನೆಹರೂರವರು ಮೋತೀಲಾಲರ ಏಕಮಾತ್ರ ಪುತ್ರರಾಗಿ ಜನಿಸಿದರು.

ಜವಾಹಿರಲಾಲ ನೆಹರೂರವರು ಆಗರ್ಭಶ್ರೀಮಂತರಾಗಿ ಹುಟ್ಟಿ ದಾದಿದಾಸಿಯರ ಶಿಶ್ರೂಷೆಯಲ್ಲಿ ಬೆಳೆದರು. ಅವರ ಮನೆ ಬಂದು ಹೋಗು ವವರ ಸಂತೋಷದ ನಗುವಿನಿಂದ ತುಂಬಿರುತ್ತಿತ್ತು. ಬಂದವರಲ್ಲಿ

ಅನೇಕರು ಜವಾಹಿರಲಾಲರನ್ನು ಎತ್ತಿಕೊಂಡು ಮುದ್ದಾಡುತ್ತಿದ್ದರು. ತಂದೆ ತಾಯಿಗಳಂತೂ ಅತಿಶಯವಾಗಿ ಪ್ರೀತಿಸುತ್ತಿದ್ದರು. ಜವಾಹಿರ ಲಾಲರಾದ ಮೇಲೆ ಹತ್ತುವರ್ಷಗಳು ಬೇರೆ ಮಕ್ಕಳೇ ಆಗದಿದ್ದುದರಿಂದ ತಂದೆತಾಯಿಗಳ ಪ್ರೀತ್ಯಾದರಗಳಿಗೆಲ್ಲಾ ಇವರೊಬ್ಬರೇ ಪೂರ್ಣಪಾತ್ರ ರಾಗಿದ್ದರು. ಚಿಕ್ಕಂದಿನಲ್ಲಿದ್ದಾಗ ಮೋತೀಲಾಲರ ಮುನ್ಷಿ ಮುಬಾರಕ್ ಆಲಿ ಎಂಬುವನು ಸಿಪಾಯಿದಂಗೆಯ ವಿವರಗಳನ್ನೂ ಸಾಹಸಕೃತ್ಯ ಗಳನ್ನೂ ಜವಾಹಿರರಿಗೆ ವಿವರಿಸಿ ಹೇಳುತ್ತಿದ್ದನು. ಈ ವಿವರಗಳನ್ನು ಜವಾಹಿರರು ಕಣ್ಣು ಬಿಟ್ಟುಕೊಂಡು ಸ್ತಬ್ಧರಾಗಿ ಕೇಳುತ್ತಿದ್ದರು. ಈ ಸ್ವಾತಂತ್ರ್ಯದ ಹೋರಾಟದ ಕತೆಗಳು ಜವಾಹಿರರ ಎಳೇ ಮನಸ್ಸಿನ ಮೇಲೆ ತುಂಬಾ ಪರಿಣಾಮ ಮಾಡಿದುವು. ಆತನು ಹಾಗೇ ಅರೇಬಿಯನ್ ನೈಟ್ಸ್ ಕತೆಗಳನ್ನೂ ಇತರ ಕತೆಗಳನ್ನೂ ಹೇಳುತ್ತಿದ್ದನು. ಅವನಂತೆಯೇ ಜವಾಹಿರರ ತಾಯಿ ಮತ್ತು ಅವರ ಹಿರಿಯಕ್ಕ ಬೀಬಿಯಮ್ಮ ಎಂಬುವರು ರಾಮಾಯಣ, ಮಹಾಭಾರತ ಮತ್ತು ಪ್ರಾಚೀನ ಹಿಂದೂ ಪುರಾಣ ಕತೆಗಳನ್ನು ಹೇಳುತ್ತಿದ್ದರು. ಈ ಮಹಾಕಾವ್ಯಗಳಲ್ಲಿ ಜವಾಹಿರರಿಗೆ ಆಸಕ್ತಿಯನ್ನು ಹುಟ್ಟಿಸಿದವರೇ ಇವರು. ವಿದ್ಯಾಭ್ಯಾಸವಂತೂ ಯೂರೋಪಿ ಯನ್ನರ ಮಕ್ಕಳಿಗೆ ದೊರಕುವ ರೀತಿಯಲ್ಲಿ ಶಾಲೆಯಲ್ಲಿಯೂ ಶಿಕ್ಷಕ ರಲ್ಲಿಯೂ ಸಂತತವಾಗಿ ನಡೆಯುತ್ತಿತ್ತು.

ಜವಾಹಿರರು ಹತ್ತುವರ್ಷದವರಾದಾಗ ಮೋತೀಲಾಲರು ಒಂದು ವಿಶಾಲವಾದ ನೂತನ ಗೃಹವನ್ನು ಕೊಂಡುಕೊಂಡರು. ಆ ಮನೆಗೆ 'ಆನಂದ ಭವನ'ವೆಂದು ಹೆಸರಿಟ್ಟರು. ನೆಹರು ಮನೆತನದಂತೆಯೇ ಈ 'ಆನಂದ ಭವನ'ವೂ 'ಸ್ವರಾಜ್ಯ ಭವನ'ವಾಗಿ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಮುಖಪಾತ್ರವನ್ನು ವಹಿಸಿದೆ. ಈ ಮನೆಗೆ ಬಂದ ಮೇಲೆ ಜವಾಹಿರರಿಗೆ ಹತ್ತುವರ್ಷವಾಗಿದ್ದಾಗ ಒಬ್ಬ ತಂಗಿ ಹುಟ್ಟಿದಳು. ಅವಳೇ ಪ್ರಸಿದ್ಧ ರಾಜಕಾರಿಣಿಯಾದ ವಿಜಯಲಕ್ಷ್ಮಿ ಪಂಡಿತ್. ನೆಹರೂ ರವರು ಇಂಗ್ಲೆಂಡಿನಲ್ಲಿ ಓದುತ್ತಿದ್ದಾಗ ಹುಟ್ಟಿದ ಎರಡನೆಯ ತಂಗಿಯ ಹೆಸರು ಕೃಷ್ಣೆ. ಆ ಮನೆಯ ವಿಶಾಲವಾದ ಕೊಳದಲ್ಲಿ ನೆಹರೂರವರು ಈಜುವುದನ್ನು ಚೆನ್ನಾಗಿ ಕಲಿತರು.

ನೆಹರೂರವರ ಹನ್ನೊಂದನೆಯ ವಯಸ್ಸಿನಲ್ಲಿ ಫರ್ಡಿನೆಂಡ್ ಟಿ. ಬ್ರೂಕ್ಸ್ ಎಂಬುವರನ್ನು ಮನೆಯ ಉಪಾಧ್ಯಾಯರನ್ನಾಗಿ ನೇಮಿಸಲಾಯಿತು. ಮೂರುವರ್ಷಗಳ ಕಾಲ ಅವರು ನೆಹರೂರವರಿಗೆ ಬೋಧಕರಾಗಿದ್ದರು. ಎಷ್ಟೋ ವಿಷಯಗಳಲ್ಲಿ ಅವರ ಪ್ರಭಾವ ನೆಹರೂರವರ ಮೇಲೆ ಬೆಳೆಯಿತು. ಅಸಂಖ್ಯಾತವಾದ ಪುಸ್ತಕಗಳನ್ನು ಓದುವ ವಾಚನಾಭಿರುಚಿಯನ್ನು ಹುಟ್ಟಿಸಿದವರು ಅವರು. ಮಕ್ಕಳ ಸಾಹಿತ್ಯ, ಪ್ರೌಢ ಸಾಹಿತ್ಯ, ಪ್ರಮುಖ ಕತೆ ಕಾದಂಬರಿಗಳು, ಹಾಸ್ಯದ ಪುಸ್ತಕಗಳು—ಹೀಗೆ ಗೊತ್ತುಗುರಿಯಿಲ್ಲದೆ ನೂರಾರು ಪುಸ್ತಕಗಳನ್ನು ಓದಿಸಿದವರು ಅವರು. ನೆಹರೂರವರು ಸಂಸ್ಕೃತವನ್ನೂ ಕಲಿತರು. ಅದರಲ್ಲಿಯೂ ಅವರಿಗೆ ಬೇರೆಯವರಿಂದ ಪಾಠವಾಗುತ್ತಿತ್ತು. ಅವರ ಪುಸ್ತಕಸಂಗ್ರಹದಲ್ಲಿ ಸಾಮವೇದದ ಪುಸ್ತಕ ಕೂಡ ಇತ್ತು. ಸಾಹಿತ್ಯದಲ್ಲಿ ಮಾತ್ರವಲ್ಲ ವಿಜ್ಞಾನದ ರಹಸ್ಯವನ್ನೂ ಮೊದಲು ವಿವರಿಸಿದವರು ಬ್ರೂಕ್ಸ್‌ರವರೇ. ಸಣ್ಣದೊಂದು ಪ್ರಯೋಗಶಾಲೆಯನ್ನು ಸ್ಥಾಪಿಸಿ ಭೌತ ರಸಾಯನಿಕ ಶಾಸ್ತ್ರಗಳಲ್ಲಿ ಪ್ರಯೋಗ ಪರೀಕ್ಷೆಗಳನ್ನು ಮಾಡಿಸುತ್ತಾ ತಮಾಷೆಯಾಗಿಯೇ ವೈಜ್ಞಾನಿಕ ತತ್ತ್ವಗಳನ್ನು ಅರಿವು ಮಾಡಿಕೊಡುತ್ತಿದ್ದವರು ಅವರು. ಈ ಬ್ರೂಕ್ಸ್‌ರವರು ಈ ವಿದ್ಯಾಭ್ಯಾಸದ ಜೊತೆಗೆ ಬ್ರಹ್ಮವಿದ್ಯೆ (Theosophy) ಯನ್ನು ಕೂಡ ಉಪದೇಶ ಮಾಡಿದರು. ಇದರಿಂದಾದ ಮಹತ್ಪರಿಣಾಮವನ್ನು ನೆಹರೂರವರು ಈ ರೀತಿ ಹೇಳಿದ್ದಾರೆ. "ಈ ವಿದ್ಯಾಭ್ಯಾಸದ ಜೊತೆಗೆ ಎಫ್. ಟಿ. ಬ್ರೂಕ್ಸ್‌ರವರು ನನ್ನಮೇಲೆ ಒಂದು ಹೊಸ ಪ್ರಭಾವವನ್ನು ಬೀರಿದರು. ಅದು ನನ್ನಲ್ಲಿ ಕ್ಷಣಕಾಲ ಮಹಾ ಪರಿಣಾಮವನ್ನುಂಟುಮಾಡಿತು. ಆ ಪ್ರಭಾವವೇ ಥಿಯಾಸಫಿ. ಅವರು ವಾರಕ್ಕೊಮ್ಮೆ ತಮ್ಮ ಕೊಟಡಿಯಲ್ಲಿ ಕೆಲವು ಥಿಯಾಸಫಿಷ್ಟರ ಸಭೆಯನ್ನು ಸೇರಿಸುತ್ತಿದ್ದರು. ಆಗ ನಾನೂ ಆ ಸಭೆಗೆ ಹೋಗುತ್ತಿದ್ದೆ. ಥಿಯಾಸಫಿಯ ಪರಿಭಾಷೆಯನ್ನೂ ಭಾವನೆಗಳನ್ನೂ ಕ್ರಮಕ್ರಮವಾಗಿ ಗ್ರಹಿಸಿದೆ. ಅಲ್ಲಿ, ಅವತಾರ, ನಾಕ್ಷತ್ರಿಕ ಮತ್ತು ಇತರ ಅಲೌಕಿಕ ಶರೀರಗಳು, ತೇಜೋಮಂಡಲ ಮತ್ತು ಕರ್ಮಸಿದ್ಧಾಂತ, ಇವುಗಳ ವಿಚಾರವಾಗಿ ದಾರ್ಶನಿಕ ಜಿಜ್ಞಾಸೆಗಳು ನಡೆಯುತ್ತಿದ್ದುವು. ಮ್ಯಾಡಂ

ಬ್ಲವಟ್ಸ್ಕಿಯುವರ ಮತ್ತು ಇತರ ಥಿಯಾಸಫಿಸ್ಟ್ ಮುಖಂಡರ ಗ್ರಂಥಗಳು, ಹಿಂದೂ ಶಾಸ್ತ್ರಗಳು, ಬೌದ್ಧರ ಧಮ್ಮಪದ ಪೈಥಾಗರಸ್ ಅಪಲೋನಿಯಸ್ ಮುಂತಾದ ಪಾಶ್ಚಾತ್ಯ ದಾರ್ಶನಿಕರ ಮತ್ತು ಅನುಭಾವಿಗಳ ಗ್ರಂಥಗಳು— ಇವೆಲ್ಲವುಗಳ ಪರಿಚಯವು ಚರ್ಚಾ ಸಮಯದಲ್ಲಿ ನನಗುಂಟಾಯಿತು. ಆ ಚರ್ಚೆಗಳಿಂದ ನನಗೆ ಹೆಚ್ಚೇನೂ ಅರ್ಥವಾಗಲಿಲ್ಲ. ಆದರೂ ಅವುಗಳ ರಹಸ್ಯಪೂರ್ಣವಾದ ಸ್ವಭಾವವು ನನ್ನನ್ನು ಬಹಳವಾಗಿ ಆಕರ್ಷಿಸಿತು. ವಿಶ್ವತತ್ತ್ವಗಳ ಮತ್ತು ರಹಸ್ಯಗಳ ಪ್ರಪಂಚಕ್ಕೆ ಇದೇ ಸುಲಭವಾದ ಮಾರ್ಗವೆಂದುಕೊಂಡೆ. ನನ್ನ ಜೀವಮಾನದಲ್ಲಿ ಮತ ಮತ್ತು ವಿಶ್ವದ ವಿಷಯವನ್ನು ಸಹಜ ಪ್ರೇರಣೆಯಿಂದ ಮತ್ತು ವಿಚಾರ ಬುದ್ಧಿಯಿಂದ ಆಲೋಚಿಸಿದುದು ಇದೇ ಮೊಟ್ಟಮೊದಲು. ಹಿಂದೂ ಮತವು ನನ್ನ ಭಾವನೆಯಲ್ಲಿ ಶ್ರೇಷ್ಠಸ್ಥಾನವನ್ನು ಪಡೆಯಿತು. ಕರ್ಮಭಾಗಕ್ಕಾಗಲೀ ಅಥವಾ ವ್ರತವಲ್ಲಿಗಳಿಗಾಗಲೀ ನನ್ನ ಮನ ಒಪ್ಪಲಿಲ್ಲ. ಉಪನಿಷತ್ತುಗಳು ಮತ್ತು ಭಗವದ್ಗೀತೆ ಈ ಗ್ರಂಥಗಳು ಮಹಾ ಪೂಜ್ಯವಾದುವು. ಆಗಾಗ ನಾನು ನಾಕ್ಷತ್ರಿಕ ಶರೀರಿಯಾದಂತೆ ಭಾವಿಸಿಕೊಂಡು ವಿಶಾಲವಾದ ಅಂತರಿಕ್ಷದಲ್ಲಿ ಹಾರಾಡುತ್ತಿದ್ದೆ. ಈ ಅನುಭವವು ನನ್ನ ಜೀವಮಾನದಲ್ಲಿ ಅನೇಕಸಲ ಒದಗಿದೆ.'' ಈ ಹಿನ್ನೆಲೆಯಲ್ಲಿ ಅಧ್ಯಾತ್ಮಜೀವಿಯಾದ ಮಹಾತ್ಮಾ ಗಾಂಧಿಯವರ ಬೋಧೆ ನೆಹರೂರವರ ಮೇಲೆ ಎಂತಹ ಪರಿಣಾಮ ಮಾಡಿತೆಂಬುದನ್ನು ಸೂಚಿಸುವ ಉದ್ದೇಶದಿಂದ ಈ ಮೇಲಿನ ಅವರ ಮಾತುಗಳನ್ನು ಉದ್ಧರಿಸಲಾಗಿದೆ. ನೆಹರೂರವರು ಇಂಗ್ಲೆಂಡಿಗೆ ವಿದ್ಯಾಭ್ಯಾಸಕ್ಕೆ ಹೋದುದರಿಂದ ಬ್ರೂಕ್ಸ್‌ರವರ ಸಂಬಂಧ ತಪ್ಪಿಹೋಯಿತು. ಆದರೂ ನೆಹರೂರವರು ತಮ್ಮ ಆತ್ಮಕಥೆಯಲ್ಲಿ ಬ್ರೂಕ್ಸ್‌ರನ್ನು ನೆನೆಯುತ್ತಾ ''ಬ್ರೂಕ್ಸ್‌ರವರು ನನ್ನ ಮೇಲೆ ಬೀರಿದ ಪ್ರಭಾವವು ಗಾಢವಾದುದು. ಅವರಿಗೂ ಮತ್ತು ಥಿಯಾಸಫಿಗೂ ನಾನು ಚಿರಋಣಿಯಾಗಿದ್ದೇನೆ''—ಎಂದು ಹೇಳಿ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದಾರೆ.

ಆ ಹೊತ್ತಿಗೆ ರಷ್ಯ-ಜಪಾನ್ ಯುದ್ಧ ಶುರುವಾಯಿತು. ಜಪಾನಿನ ಜಯದ ಸುದ್ದಿ ಬಂದಾಗ ನೆಹರೂರವರು ಉತ್ಸಾಹಗೊಳ್ಳುತ್ತಿದ್ದರು. ಆಗ

ರಾಷ್ಟ್ರೀಯ ಭಾವನೆಗಳು ಅವರ ಮನಸ್ಸಿನಲ್ಲಿ ಮೂಡಿದುವು. ನೆಹರೂ ರವರು ಆ ಕಾಲದಲ್ಲಿ ವೀರಸಾಹಸ ಕಾರ್ಯಗಳನ್ನು ನೆನೆಯುತ್ತಾ ಖಡ್ಗ ಧಾರಿಯಾಗಿ ಭಾರತದ ಬಂಧ ವಿಮೋಚನೆಗೆ ಹೋರಾಡುವ ಕನಸು ಕಾಣುತ್ತಾ ಐರೋಪ್ಯರ ದಬ್ಬಾಳಿಕೆಯಿಂದ ಮುಕ್ತವಾದ ಭಾರತವನ್ನೂ ಏಷ್ಯಾಖಂಡವನ್ನೂ ಧ್ಯಾನಿಸುತ್ತಿದ್ದರಂತೆ. ಕೇವಲ ಬಾಲಕನಾಗಿದ್ದ ನೆಹರೂರವರಲ್ಲಿಯೇ ಭಾರತವನ್ನು ದಾಸ್ಯದಿಂದ ಬಿಡುಗಡೆಮಾಡಬೇಕೆಂಬ ಆಸೆ ಅಂಕುರಿಸಿದ್ದಿತು.

೧೯೦೫ ನೆಯ ಇಸವಿ ಮೇ ತಿಂಗಳಲ್ಲಿ, ನೆಹರೂರವರಿಗೆ ಹದಿನೈದು ವರುಷವಾಗಿದ್ದಾಗ, ಮೋತೀಲಾಲನೆಹರೂರವರು ಸಂಸಾರ ಸಮೇತ ಇಂಗ್ಲೆಂಡಿಗೆ ಪ್ರಯಾಣಮಾಡಿ, ಜವಾಹಿರಲಾಲರನ್ನು ಲಂಡನ್ನಿನ ಹ್ಯಾರೋ ಶಾಲೆಗೆ ಸೇರಿಸಿದರು. ಜವಾಹಿರರು ಮೂರುವರ್ಷ ಹ್ಯಾರೋ ಶಾಲೆಯಲ್ಲಿ ಓದಿ ಬಹುಮಾನಿತರಾದರು. ಇಟಲಿಯ ಸ್ವಾತಂತ್ರ್ಯಕ್ಕಾಗಿ ಹೊಡೆದಾಡಿದ ಗರಿಬಾಲ್ಡಿ ಎಂಬುವನ ಜೀವನ ಚರಿತ್ರೆಯ ಒಂದು ಭಾಗದ ಪುಸ್ತಕ ಬಹುಮಾನವಾಗಿ ದೊರಕಿತು. ಅದನ್ನು ಓದುತ್ತಾ ಹೋದಂತೆಲ್ಲಾ ಇಟಲಿಯ ಸ್ವಾತಂತ್ರ್ಯಸಮರಕ್ಕೂ ಭಾರತೀಯ ಸ್ಥಿತಿಗತಿಗಳಿಗೂ ಸಾಮರಸ್ಯವಿದ್ದುದನ್ನು ಅವರು ಕಂಡುಕೊಂಡರು. ಹೀಗೆ ಬಾಲ್ಯ ದಿಂದಲೂ ಭಾರತದ ಬಂಧ ವಿಮೋಚನೆಯ ವಿಷಯ ನೆಹರೂರವರ ಮನಸ್ಸಿನಲ್ಲಿ ಮನೆಮಾಡಿಕೊಂಡಿದ್ದಿತು. ಎಲ್ಲ ದಲಿತ ದೇಶಗಳ ಸ್ವಾತಂತ್ರ್ಯಸಮರದಲ್ಲೂ ಅವರು ಭಾರತದ ಹೋಲಿಕೆಯನ್ನು ಕಾಣು ತ್ತಿದ್ದರು. ೧೯೦೭ರ ಅಕ್ಟೋಬರಿನಲ್ಲಿ ಅವರು ಹ್ಯಾರೋ ಶಾಲೆಯನ್ನು ಬಿಟ್ಟು ಕೇಂಬ್ರಿಡ್ಜಿನ ಟ್ರಿನಿಟಿ ಕಾಲೇಜನ್ನು ಸೇರಿ ರಸಾಯನ ಶಾಸ್ತ್ರ, ಭೂಗರ್ಭ ಶಾಸ್ತ್ರ ಮತ್ತು ಸಸ್ಯ ಶಾಸ್ತ್ರಗಳನ್ನು ವ್ಯಾಸಂಗಮಾಡಿ ಟ್ರೈಪಾಸ್ ಪ್ರಶಸ್ತಿಯನ್ನು ಪಡೆದರು. ಕೇಂಬ್ರಿಡ್ಜ್‌ನಲ್ಲಿ ಓದುತ್ತಿದ್ದಾಗಲೇ ಇಂಡಿಯನ್ ಸಿವಿಲ್ ಸರ್ವಿಸ್ಸಿಗೆ ಸೇರಬೇಕೆಂಬ ಯೋಚನೆ ಅವರ ಮನಸ್ಸಿನಲ್ಲಿತ್ತು. ಹಾಗೇನಾದರೂ ಅವರು ಸಿವಿಲ್ ಸರ್ವಿಸ್ಸಿಗೆ ಸೇರಿ ಸರ್ಕಾರದ ನೌಕರರಾಗಿದ್ದಿದ್ದರೆ ನೆಹರೂರವರ ಭವಿಷ್ಯವೂ ಭಾರತದ ಭವಿಷ್ಯವೂ ವ್ಯತ್ಯಾಸವಾಗುತ್ತಿದ್ದುದರಲ್ಲಿ ಸಂದೇಹವಿಲ್ಲ. ಆದರೆ ದೇವರ

ದಯದಿಂದ ಸಿವಿಲ್ ಸರ್ವಿಸ್ಸಿಗೆ ಸೇರಲು ಇರಬೇಕಾಗಿದ್ದ ಕನಿಷ್ಠ ವಯೋಪರಿಮಿತಿಯನ್ನು ನೆಹರೂರವರು ಮುಟ್ಟಿರಲಿಲ್ಲವಾದ್ದರಿಂದ ಅವರು ಸಿವಿಲಿಯನ್ ಆಗುವುದು ತಪ್ಪಿತು. ತಂದೆಯ ಇರಾದೆಯಂತೆ ಅವರ ವೃತ್ತಿಯನ್ನನುಸರಿಸಲು ನ್ಯಾಯಶಾಸ್ತ್ರದ ವ್ಯಾಸಂಗಕ್ಕೆ ಪ್ರಾರಂಭಮಾಡಿ ೧೯೧೨ರಲ್ಲಿ ಬಾರ್-ಅಟ್-ಲಾ ಪ್ರಶಸ್ತಿಯನ್ನು ಪಡೆದು ನೆಹರೂರವರು ಭಾರತಕ್ಕೆ ಹಿಂದಿರುಗಿ ಬಂದು ತಂದೆಗೆ ಸಹಾಯವಾಗಿರಲು ಹೈಕೋರ್ಟಿನ ವಕೀಲರಾದರು.

ಇಂಗ್ಲೆಂಡಿನಲ್ಲಿದ್ದಾಗ ನೆಹರೂರವರು ಸಭೆಗಳಲ್ಲಿ ಭಾಷಣ ಮಾಡುವ ಕಲೆಯನ್ನು ಅಭ್ಯಾಸಮಾಡಲಿಲ್ಲ. ಭಾರತೀಯರ ಮಜ್ಲಿಸ್ ಸಭೆಗಳಲ್ಲಿ ಕೂಡ ಅವರ ಮಾತುಗಾರಿಕೆ ಪರಿಣಾಮಕಾರಿಯಾಗಿರಲಿಲ್ಲ. ಮುಂದೆ ಪ್ರತಾಪಘಡದ ರೈತರ ಸಂಪರ್ಕದಲ್ಲಿ ಅವರು ಭಾಷಣಕಲೆಯನ್ನು ಕಲಿತರು, ನಿಸ್ಸೀಮರಾದರು.

ಆದರೆ ವಕೀಲಿತನದಲ್ಲಿ ನೆಹರೂರವರಿಗೆ ಹೆಚ್ಚು ಆಸಕ್ತಿಯಿರಲಿಲ್ಲ. ಬೇಸರವನ್ನು ಕಳೆಯಲು ಅವರು ಆಗಾಗ ಷಿಕಾರಿಗೆ ಹೋಗುತ್ತಿದ್ದರು. ಒಮ್ಮೆ ಅವರು ಕಾಶ್ಮೀರ ಪ್ರಾಂತದಲ್ಲಿ ಒಂದು ಕರಡಿಯನ್ನು ಕೊಂದು ಬಿಟ್ಟಿದ್ದರು. ಇನ್ನೊಮ್ಮೆ ಒಂದು ಸಣ್ಣ ಜಿಂಕೆಯು ಅವರ ಗುಂಡೇಟಿಗೆ ಬಲಿಯಾಯಿತು. ಆ ಸಾಧುವಾದ ಬಡಜಂತು ಮಾರಕವಾಗಿ ಗಾಯಗೊಂಡು ಅವರ ಕಾಲಮೇಲೆ ಬಿದ್ದಾಗ ಅದರ ಕಂಬನಿತುಂಬಿದ ಕಣ್ಣುಗಳು ಅವರನ್ನೇ ನೋಡುತ್ತಿರುವಂತೆ ಭಾಸವಾಯಿತು. ಆ ಕರುಣಾಜನಕವಾದ ದೃಶ್ಯ ಅವರ ಹೃದಯದಲ್ಲಿ ಹೊಕ್ಕು ನಿಂತುಬಿಟ್ಟಿತು. ಆ ಪ್ರಸಂಗವು ಅವರ ಮೃಗಯಾ ವಿಹಾರದ ಆಸಕ್ತಿಯನ್ನು ಮುಗಿಸಿಬಿಟ್ಟಿತು.

ಈ ಹೊತ್ತಿಗೆ ಮೊದಲನೆಯ ಮಹಾ ಯುದ್ಧವು ಪ್ರಾರಂಭವಾಗಿ ನೆಹರೂರವರ ಮನವನ್ನು ಸೆಳೆಯಿತು. ಶ್ರೀಮತಿ ಆನಿ ಬೆಸೆಂಟರಿಗೆ ಜೈಲುವಾಸ ಪ್ರಾಪ್ತವಾಯಿತು. ಪತ್ರಿಕೆಗಳು ಈ ಘಟನೆಯ ಬಗೆ ಟೀಕೆ ಮಾಡಿದುವು. ಪತ್ರಿಕೆಗಳ ಬಾಯನ್ನು ಮುಚ್ಚಿಸುವುದಕ್ಕಾಗಿ ಹೊಸದಾಗಿ ಬಂದಿದ್ದ ಕಾನೂನನ್ನು ಖಂಡಿಸಲು ಸಭೆ ಸೇರಿದ್ದಿತು. ಆ ಸಭೆಯಲ್ಲಿ ನೆಹರೂರವರು ಮಾತನಾಡಿದರು. ಹಿಂದೂಸ್ಥಾನಿ ಭಾಷೆಯಲ್ಲಿ ಮಾತನಾಡ



ಜವಾಹಿರ್‌ಲಾಲ್, ಬಾರ್-ಅಟ್-ಲಾ

ಲಾರೆನೆಂಬ ಅಧೈರ್ಯದಿಂದ ಅವರು ಅಂದು ಇಂಗ್ಲಿಷಿನಲ್ಲಿಯೇ ಮಾತ ನಾಡಿದರು. ಇದು ನೆಹರೂರವರ ರಾಜಕೀಯದ ಪ್ರಪ್ರಥಮ ಭಾಷಣ. ಭಾಷಣ ಮುಗಿದ ಕೂಡಲೆ ಡಾ॥ ತೇಜ್ ಬಹದ್ದೂರ್ ಸಪ್ರುರವರು ಉಪನ್ಯಾಸವೇದಿಕೆಯನ್ನು ಹತ್ತಿ ಬಂದು ಸಂತೋಷದಿಂದ ನೆಹರೂರವರನ್ನು ತಬ್ಬಿ ಮುದ್ದಾಡಿದರು. ಭಾಷಣ ಚೆನ್ನಾಗಿತ್ತೆಂಬ ಕಾರಣದಿಂದಲ್ಲ, ಭಾರತದ ಚಳುವಳಿಯಲ್ಲಿ ಕೆಲಸ ಮಾಡಲು ಹೊಸ ಗೆಳೆಯ ಸಿಕ್ಕಿದನೆಂದು.

೧೯೧೬ ರ ಕ್ರಿಸ್‌ಮಸ್‌ನಲ್ಲಿ ನಡೆದ ಲಕ್ನೋ ಕಾಂಗ್ರೆಸ್ಸಿನಲ್ಲಿ ನೆಹರೂ ರವರು ಮೊಟ್ಟಮೊದಲನೆಯದಾಗಿ ಗಾಂಧಿಯವರನ್ನು ನೋಡಿದರು; ಅವರ ಭಾಷಣಗಳನ್ನು ಕೇಳಿದರು, ಮೆಚ್ಚಿಕೊಂಡರು. ಇದಕ್ಕೆ ಮೊದಲೇ ಗಾಂಧಿಯವರು ದಕ್ಷಿಣ ಆಫ್ರಿಕದಲ್ಲಿ ಹೂಡಿದ್ದ ಧೀರ ಸಂಗ್ರಾಮಕ್ಕಾಗಿ ನೆಹರೂರವರು ಅವರನ್ನು ಮೆಚ್ಚಿಕೊಂಡಿದ್ದರು. ಚಂಪಾರಣ್ಯದಲ್ಲಿ ಪ್ಲಾಂಟರು ಕೂಲಿಗಾರರುಗಳ ಪರವಾಗಿ ಹೂಡಿದ ಕಾರ್ಯಕ್ರಮದಿಂದ ಜಯವನ್ನು ಗಳಿಸಿದ್ದುದು ನೆಹರು ಅಂತಹ ಯುವಕ ಕಾರ್ಯಕರ್ತರಲ್ಲಿ ಉತ್ಸಾಹವನ್ನು ತುಂಬಿತ್ತು. ಆದರೆ ಅವರನ್ನು ನೆಹರೂರವರು ವ್ಯಕ್ತಿಶಃ ಕಂಡದ್ದು ಈಗಲೇ. ಅವರ ವ್ಯಕ್ತಿತ್ವ ನೆಹರೂರವರ ಮನಸ್ಸನ್ನು ಸೂರೆ ಗೊಂಡಿತು. ಅವರ ಭಾಷಣಗಳನ್ನು ಕೇಳಿದಮೇಲೆ ನೆಹರೂರವರು ಕಾಲೇಜಿನ ದಿನಗಳಲ್ಲಿ ಕಲಿತ ಸಮತಾವಾದದ ಭಾವನೆಗಳು ಮಾಸುತ್ತಾ ಹೋಗಿ ಹೊಸಬಗೆಯ ರಾಷ್ಟ್ರೀಯತಾ ಭಾವನೆಗಳು ಅವರ ಮನಸ್ಸಿನಲ್ಲಿ ಸುಳಿಯತೊಡಗಿದುವು.

ಈ ವೇಳೆಗೆ ನೆಹರೂರವರಿಗೆ ಇಪ್ಪತ್ತೇಳನೆಯ ವರುಷ ನಡೆಯು ತ್ತಿತ್ತು. ಮೋತೀಲಾಲರು ಮಗನಿಗೆ ಮದುವೆ ಮಾಡಬೇಕೆಂದು ನಿಷ್ಕರ್ಷಿಸಿ ದರು. ದೆಹಲಿಯ ಶ್ರೀಮಂತ ಮನೆತನದ ಶ್ರೀಮತಿ ಕಮಲಾದೇವಿಯನ್ನು ಸೊಸೆಯಾಗಿ ಆರಿಸಿದರು. ಮದುವೆಗೆ ನಾಲ್ಕು ತಿಂಗಳ ಹಿಂದಿನಿಂದಲೂ ಮನೆಯಲ್ಲಿ ಸಡಗರವೋ ಸಡಗರ. ಲಕ್ಷಾಂತರ ರೂಪಾಯಿಯ ನಗ ನಾಣ್ಯಗಳನ್ನು ಕೊಳ್ಳುವ ಮತ್ತು ಮಾದರಿಯಂತೆ ಒಡವೆ ವಸ್ತ್ರಗಳನ್ನು ಮಾಡಿಸಲು ಅಕ್ಕಸಾಲಿಗಳು, ಜವಾಹಿರಿ ವ್ಯಾಪಾರಿಗಳು, ಬಟ್ಟೆ ಹೊಲಿಯುವ ದರ್ಜಿಗಳು—ಇವರುಗಳ ಓಡಾಟವೇ ಓಡಾಟವಾಗಿತ್ತು. ೧೯೧೬ ನೇ

ಇಸವಿ ವಸಂತ ಪಂಚಮಿಯ ದಿನ ಮುಹೂರ್ತ ಗೊತ್ತುಮಾಡಿದ್ದರು. ಮೋತೀಲಾಲರು ಸಮಸ್ತ ಬಂಧು ಬಳಗ ಮಿತ್ರರುಗಳ ಸಮೇತ ಒಂದು ಸ್ಪೆಷಲ್ ಟ್ರೈನನ್ನು ಮಾಡಿಕೊಂಡು ಮದುವೆಗೆ ಒಂದುವಾರ ಮುಂಚೆಯೇ ದೆಹಲಿಯಲ್ಲಿ ಬಂದಿಳಿದರು. ಬೀಗರ ಕಡೆಯವರು ವಿಶಾಲವಾದ ದೊಡ್ಡ ದೊಡ್ಡ ಬಂಗಲೆಗಳನ್ನು ಬೀಗರಿಗೆಂದು ಗೊತ್ತುಮಾಡಿದ್ದರೂ ಅವುಗಳು ಸಾಕಾಗದೆ ಅನೇಕ ಡೇರೆಗಳನ್ನು ಹೊಡೆಸಬೇಕಾಯಿತು. ಅಂತೂ ಮದುವೆ ಹತ್ತು ದಿವಸಗಳ ಕಾಲ ಮಹಾ ವಿಜೃಂಭಣೆಯಿಂದ ನೆರವೇರಿತು. ಮದುವೆ ಯಾದ ಕೂಡಲೆ ನೆಹರೂರವರು ಕಮಲಾದೇವಿಯೊಡನೆ ಮದುವೆಯ ಸಂತೋಷದ ದಿನಗಳನ್ನು ಕಳೆಯಲು ಕಾಶ್ಮೀರಕ್ಕೆ ಹೋದರು. ವಸಂತ ಋತುವನ್ನು ದಂಪತಿಗಳು ಕಾಶ್ಮೀರದಲ್ಲಿ ಕಳೆದು ಅಲಹಾಬಾದಿಗೆ ಹಿಂದಿರು ಗಿದರು.

೧೯೧೯ ರಲ್ಲಿ ರೌಲತ್ ಆಕ್ಟ್ ಜಾರಿಗೆ ಬರಬೇಕಾಗಿತ್ತು. ಶಾಸನ ಸಭೆ ಯಲ್ಲಿದ್ದ ಗಾಂಧಿಯವರು ಈ ಮಸೂದೆಗಳಿಗೆ ಒಪ್ಪಿಗೆ ಕೊಡಬೇಡಿರೆಂದು ವೈಸರಾಯರನ್ನು ಕೇಳಿಕೊಂಡರು. ಅವರು ಒಪ್ಪದಿದ್ದುದರಿಂದ ಗಾಂಧಿ ಯವರು ನಾಯಕತ್ವವನ್ನು ವಹಿಸಿ ಶಾಸನಗಳನ್ನು ಉಲ್ಲಂಘಿಸುವ ಸತ್ಯಾಗ್ರಹವನ್ನು ಶುರುಮಾಡಿದರು. ನೆಹರೂರವರೂ ಅದರಲ್ಲಿ ಭಾಗವಹಿಸ ಬೇಕೆಂದು ನಿರ್ಧರಿಸಿದರು. ಆಗ ನಡೆದ ಒಂದು ಪ್ರಕರಣ ಮೋತೀಲಾಲ ರಿಗೆ ಜವಾಹಿರರ ಮೇಲಿದ್ದ ಅಪಾರವಾದ ಪ್ರೀತಿಯನ್ನು ಸೂಚಿಸುತ್ತದೆ. ಶ್ರೀಮಂತಿಕೆಯ ಹಂಸತೂಲಿಕಾತಲ್ಪದಲ್ಲಿ ನಿದ್ರಿಸುತ್ತಿದ್ದ ಜವಾಹಿರರು ಸೆರೆಮನೆಯನ್ನು ಸೇರಿ ಬರೀನೆಲದ ಮೇಲೆ ಮಲಗುವ ಪ್ರಸಂಗ ಬಂದರೆ ಎಷ್ಟು ಕಷ್ಟಪಡಬಹುದು— ಎಂಬುದನ್ನು ಮೋತೀಲಾಲರು ಎಷ್ಟು ಊಹಿಸಿದರೂ ಅರಿಯಲಾರದೆ ತಾವೇ ಬರೀನೆಲದ ಮೇಲೆ ಮಲಗಿ ಕೆಲವು ರಾತ್ರಿಗಳನ್ನು ಕಳೆದರಂತೆ. ಆಮೇಲೆ ನೆಹರೂರವರು ಜೈಲಿಗೆ ಹೋಗು ವುದು ಸಹಿಸದಾದ್ದರಿಂದ ಗಾಂಧೀಜಿಯವರನ್ನು ಅಲಹಾಬಾದಿಗೆ ಬರಮಾಡಿ ಕೊಂಡು ಅವರಿಂದ ಜವಾಹಿರರಿಗೆ ಬುದ್ಧಿಮಾತನ್ನು ಹೇಳಿಸಿದರು. ಗಾಂಧೀಜಿ ಯವರು ಜವಾಹಿರರಿಗೆ ಯಾವ ಕಾರ್ಯದಲ್ಲೂ ದುಡುಕಬಾರದೆಂದೂ ತಂದೆತಾಯಿಗಳ ಮನಸ್ಸನ್ನು ನೋಯಿಸಬಾರದೆಂದೂ ಬುದ್ಧಿವಾದ ಹೇಳಿದ

ಮೇಲೆ ನೆಹರೂರವರು ಆ ಸತ್ಯಾಗ್ರಹದಲ್ಲಿ ಭಾಗವಹಿಸುವುದು ನಿಂತು ಹೋಯಿತು.

ಜಲಿಯನ್‌ವಾಲಾಬಾಗ್ ರಕ್ತಪಾತದ ಪ್ರಕರಣ ಇಂಗ್ಲಿಷ್ ಮಿಲಿಟರಿ ಅಧಿಕಾರಿಗಳ ದೌರ್ಜನ್ಯದ ಪರಮಾವಧಿಯ ಕುರುಹು. ಅದರ ಸಾರ್ವಜನಿಕ ತನಿಖೆಗೆ ಮೋತೀಲಾಲರೂ, ಸಿ. ಆರ್. ದಾಸರೂ ಮುಖ್ಯ ಮೇಲ್ವಿಚಾರಕರಾಗಿದ್ದರು. ಗಾಂಧಿಜಿಯವರು ಸೂಕ್ತವಾದ ಸಲಹೆಗಳನ್ನು ಕೊಡುತ್ತಾ ಬೆಂಬಲಿಗರಾಗಿ ನಿಂತರು. ಸಿ. ಆರ್. ದಾಸರವರು ನೆಹರೂ ರವರ ಸಹಾಯವನ್ನೂ ಕೋರಿದರು. ವಿಚಾರಣೆ ಮುಂದುವರಿದಹಾಗೆಲ್ಲಾ ನಿರುಪಾಯರಾದ ಪ್ರಜೆಗಳ ಮೇಲೆ ಸೈನಿಕರು ನಡೆಸಿದ ಪೈಶಾಚಿಕ ದೌರ್ಜನ್ಯ ಅರಿವಾಗುತ್ತಾ ಬಂದು ಸ್ವಾತಂತ್ರ್ಯಸಮರವನ್ನು ಇನ್ನೂ ತ್ವರಿತಗೊಳಿಸಿ ಶತಾಯ ಗತಾಯ ಸ್ವಾತಂತ್ರ್ಯವನ್ನು ದೊರಕಿಸಿಯೇಬೇಕೆಂಬ ನಿರ್ಧಾರಕ್ಕೆ ನೆಹರೂರವರು ಬಂದರು. ಪಂಜಾಬ್ ವಿಚಾರಣೆಯಲ್ಲಿ ಗಾಂಧೀಜಿಯವರ ಬಹುಮುಖವಾದ ಸತ್ವದ ಅರಿವು ನೆಹರೂರವರಿಗಾಯಿತು. ಮುಂದಿನ ಘಟನೆಗಳನ್ನು ವಿವೇಚಿಸಿದವರಿಗೆ ಗಾಂಧೀಜಿಯವರ ಉಪದೇಶಗಳಲ್ಲಿ ಅಡಗಿದ್ದ ದೂರದೃಷ್ಟಿ ಅರಿವಾಗಿದೆ. ಅದರಿಂದ ನೆಹರೂ ರವರಿಗೆ ಗಾಂಧೀಜಿಯವರ ಜ್ಞಾನದೃಷ್ಟಿಯಲ್ಲಿ ನಂಬಿಕೆಯು ದೃಢವಾಗಿ ನಿಂತು ದಿನದಿನಕ್ಕೆ ಅಭಿವೃದ್ಧಿಯಾಗುತ್ತಾ ಬಂತು.

೧೯೨೦ರ ಜೂನಿನಲ್ಲಿ ಒಂದು ಮುಖ್ಯವಾದ ಘಟನೆ ನಡೆಯಿತು. ನೆಹರೂರವರ ಜೀವನದಲ್ಲಾದ ಮಹತ್ತರ ಪರಿಣಾಮದ ದೃಷ್ಟಿಯಿಂದ ಇದು ಅತಿ ಮುಖ್ಯವಾದುದು. ಪ್ರತಾಪಘಡ ಜಿಲ್ಲೆಯ ರೈತರು ತಾಲ್ಲೂಕು ದಾರರಿಂದ ತಮಗಾಗುತ್ತಿರುವ ಕಿರುಕುಳವನ್ನು ತಪ್ಪಿಸಲು ಏನಾದರೂ ಮಾಡಬೇಕೆಂದೂ ನೆಹರೂರವರೇ ಖುದ್ದಾಗಿ ಬಂದು ಅಲ್ಲಿಯ ಸ್ಥಿತಿಗತಿ ಗಳನ್ನು ನೋಡಬೇಕೆಂದೂ ಪ್ರಾರ್ಥಿಸಿಕೊಂಡರು. ನೆಹರೂರವರು ಅಲ್ಲಿಗೆ ಹೋದರು. ಹಳ್ಳಿಯವರು ಇವರಿಗೆ ಅಭೂತಪೂರ್ವ ಸ್ವಾಗತ ನೀಡಿದರು. ಸುತ್ತಮುತ್ತಲಿನ ಹಳ್ಳಿಗಳೆಲ್ಲ ಬರಿದಾಗಿ ಜನ ಅಸಂಖ್ಯಾತವಾಗಿ ಸಭೆ ಸೇರು ತ್ತಿದ್ದರು. ಗಂಡಸರು ಹೆಂಗಸರು ಮಕ್ಕಳು ಎಲ್ಲರೂ ಸೇರುತ್ತಿದ್ದರು. ಹೊಟ್ಟೆಗಿಲ್ಲದೆ ಕೃಶವಾಗಿರುವ ದೇಹ, ಚಿಂದಿ ಚಿಂದಿಯಾದ ಬಟ್ಟೆಗಳು

ಹೀಗೆ ಅವರ ಸ್ಥಿತಿ ಇದ್ದರೂ ಅವರ ಉತ್ಸಾಹವನ್ನು ಕಂಡ ನೆಹರೂರವರ ಮನಸ್ಸು ಕರಗಿತು. ಆ ಘಟನೆಯನ್ನು ಕುರಿತು ನೆಹರೂರವರೇ ಹೀಗೆ ಬರೆದಿದ್ದಾರೆ. "ಅವರು ನಮಗೆ ತಮ್ಮ ಪ್ರೇಮವನ್ನು ನೀಡಿದರು. ಪ್ರೇಮದ ಮತ್ತು ಆಸೆಯ ಕಣ್ಣುಗಳಿಂದ ನಮ್ಮನ್ನು ನೋಡಿದರು. ಯೋಗಕ್ಷೇಮವನ್ನು ತಮಗೆಂದು ಹೊತ್ತುತಂದವರೆಂದೂ ನೆಮ್ಮದಿಯನೆಲೆಗೆ ತಮ್ಮನ್ನು ನಿಲ್ಲಿಸುವ ಮಾರ್ಗದರ್ಶಕರೆಂದೂ ನಮ್ಮನ್ನವರು ಭಾವಿಸಿದರು. ಅವರ ಪಾಡನ್ನೂ ನಾವು ಬಂದುದಕ್ಕಾಗಿ ಅವರು ತೋರಿದ ಕೃತಜ್ಞತೆಯನ್ನೂ ಕಂಡು ನನಗೆ ಅವಮಾನವೂ ದುಃಖವೂ ಏಕಕಾಲದಲ್ಲಿ ಉಂಟಾದುವು. ನಾವು ನೆಮ್ಮದಿಯಾಗಿ ಸಂತೃಪ್ತ ಜೀವನವನ್ನು ನಡೆಸುತ್ತಿದ್ದೇವಲ್ಲಾ, ನಗರದ ನಮ್ಮ ಸಂಕುಚಿತ ರಾಜಕೀಯವು ಭಾರತದ ಹಳ್ಳಿಗಳಲ್ಲಿರುವ ಅಸಂಖ್ಯ ಅರೆಬೆತ್ತಲೆ ಗಂಡು-ಹೆಣ್ಣು ಮಕ್ಕಳನ್ನು ಸಂಪೂರ್ಣವಾಗಿ ಉಪೇಕ್ಷಿಸಿದೆಯಲ್ಲಾ ಎಂದು ಅವಮಾನವಾಯಿತು. ಭಾರತದ ಅವನತಿ ಮತ್ತು ನುಂಗುತ್ತಿರುವ ಬಡತನಗಳನ್ನು ಕಂಡು ದುಃಖವಾಯಿತು. ನಗ್ನಳಾದ, ಹೊಟ್ಟೆಗಿಲ್ಲದ, ತುಳಿಯಲ್ಪಟ್ಟ ಮತ್ತು ಅತ್ಯಂತ ದುಃಖಿಸಿಯಾದ ಭಾರತ ಮಾತೆಯ ಹೊಸ ಚಿತ್ರವೊಂದು ನನ್ನೆದುರು ರೂಪಗೊಂಡು ಎದ್ದು ನಿಲ್ಲುವಂತೆ ಭಾಸವಾಯಿತು. ದೂರದ ನಗರದಿಂದ ಸುಮ್ಮನೆ ಬಂದ ನಮ್ಮಲ್ಲಿ ರೈತರು ತೋರಿಸಿದ ಅಗಾಧವಾದ ನಂಬಿಕೆಯು ನನ್ನನ್ನು ಇರುಕಿನಲ್ಲಿ ಸಿಕ್ಕಿಸಿ ನಾನು ಹೊರಬೇಕಾದ ಕಷ್ಟವಾದ ಹೊಸ ಜವಾಬ್ದಾರಿಯನ್ನು ಜ್ಞಾಪಿಸಿತು. ಈ ಜವಾಬ್ದಾರಿಯು ನನ್ನನ್ನು ಹೆದರಿಸಿತು." ನೆಹರೂರವರು ಅಂದೇ ರೈತರ ಏಳಿಗೆಗಾಗಿ ದುಡಿಯಬೇಕೆಂದು ಮನಸ್ಸುಮಾಡಿದರು. ಇಂದು ಅವರು ಜಮೀನ್ದಾರಿಯನ್ನು ರದ್ದುಮಾಡುವಾಗಲೂ ಹಳ್ಳಿಗಳ ಉದ್ಧಾರಕ್ಕಾಗಿ ಹೂಡಿರುವ ಸಾಮೂಹಿಕ ಗ್ರಾಮೋದ್ಧಾರ ಕಾರ್ಯಗಳ ಯೋಜನೆಗಳಲ್ಲಿಯೂ ಈ ಸಂಘಟನೆ ಬೆನ್ನೆಲುಬಿನಂತೆ ನಿಂತಿದೆ.

ರೈತರ ಮಧ್ಯೆ ಓಡಾಡುವಾಗ ನೆಹರೂರವರಿಗೆ ಆಶ್ಚರ್ಯವನ್ನುಂಟುಮಾಡಿದ ಸಂಗತಿಯೆಂದರೆ ಅವರಿಗೆ ಗಾಂಧಿಯವರೂ ಮತ್ತು ಇತರ ದೇಶಪ್ರೇಮಿಗಳೂ ನಡೆಸುತ್ತಿರುವ ಸ್ವಾತಂತ್ರ್ಯಸಂಗ್ರಾಮದ ಬಗ್ಗೆ ಸ್ವಲ್ಪವೂ ತಿಳಿವಳಿಕೆಯಿಲ್ಲದಿದ್ದುದು. ಗಾಂಧಿಯವರು ಎಲ್ಲ ಮುಂದಾಳುಗಳಿಗೂ, ನೀವು

ಹಳ್ಳಿಗಳಿಗೆ ಹೋಗಿ ಜನಾನುರಾಗವನ್ನು ಸಂಪಾದಿಸಿ, ದೇಶದ ಸ್ವಾತಂತ್ರ್ಯದ ಸಮರಕ್ಕೆ ಹಳ್ಳಿಗರ ಬೆಂಬಲವನ್ನೂ ಸಹಾನುಭೂತಿಯನ್ನೂ ಸಂಪಾದಿಸಿರಿ— ಎಂದು ಹೇಳುತ್ತಿದ್ದ ಅವರ ಮಾತಿನ ಸತ್ಯತೆ ನೆಹರೂರವರಿಗೆ ಅಲ್ಲಿ ಅರಿವಾಯಿತು. ಅವರು ಹಳ್ಳಿಯವರಿಗೆ ಗಾಂಧಿಯವರನ್ನೂ ಸ್ವಾತಂತ್ರ್ಯದ ಚಳುವಳಿಯ ಬೆಳವಣಿಗೆಯನ್ನೂ ಮುಂದಟ್ಟುಮಾಡಿಕೊಟ್ಟು ಸ್ವಾತಂತ್ರ್ಯ ಸಮರದಲ್ಲಿ ಅವರೂ ಭಾಗಿಗಳಾಗುವಂತೆ ಮಾಡಿದರು. ರೈತರೊಡನೆ ತಿರುಗಾಡುವಾಗ ಅವರು ಬಿಸಿಲು ಮಳೆ ಛಳಿಗಾಳಿಗಳ ತೀವ್ರತೆಯ ಅನುಭವವನ್ನು ಪಡೆದು ದೇಹಕ್ಕೆ ಪ್ರಕೃತಿಯ ಪ್ರಕೋಪವನ್ನು ಎದುರಿಸುವ ಶಕ್ತಿಯನ್ನು ಸಂಪಾದಿಸಿಕೊಂಡರು. ಇದು ಅವರಿಗೆ ಮುಂದೆ ಜೈಲುವಾಸಗಳಲ್ಲಿ ತುಂಬಾ ಸಹಾಯಮಾಡಿತು. ಈ ರೈತರ ಸಂಪರ್ಕದಿಂದ ಆದ ಇನ್ನೊಂದು ಉಪಕಾರವೆಂದರೆ ಅವರು ಇವರಿಗೆ ಭಾಷಣಮಾಡುವ ತಯಾರಿಯನ್ನು ಕೊಟ್ಟದ್ದು. ಆ ರೈತರು ನೆಹರೂರವರಲ್ಲಿದ್ದ ಲಜ್ಜೆಯನ್ನು ಕಳೆದರು. ಸಭೆಗಳಲ್ಲಿ ಮಾತನಾಡುವುದನ್ನು ಕಲಿಸಿದರು. ಅವರಲ್ಲಿದ್ದ "ಹಿಂದೂಸ್ತಾನಿಯಲ್ಲಿ ಮಾತನಾಡಬಲ್ಲೆನೇ" ಎಂಬ ಸಂದೇಹವನ್ನು ನಿವಾರಿಸಿ, ಯಾವ ಹೊತ್ತಿನಲ್ಲಾದರೂ ಯಾವ ವಿಷಯದ ಮೇಲಾದರೂ ಯಾವ ಪೂರ್ವಸಿದ್ಧತೆಯೂ ಇಲ್ಲದೆ ಧೈರ್ಯವಾಗಿ ನಿರರ್ಗಳವಾಗಿ ಭಾಷಣಮಾಡಬಲ್ಲೆನೆಂಬ ನಂಬಿಕೆಯನ್ನು ಹುಟ್ಟಿಸಿತು. ಈ ಕಲೆ ಅವರ ಜೀವನದಲ್ಲಿ ಮಹತ್ವಪೂರ್ಣವಾದ ಪ್ರತಿಫಲವನ್ನು ಕೊಟ್ಟಿದೆ ಮತ್ತು ಕೊಡುತ್ತಲಿದೆ. ಈ ರೈತಚಳುವಳಿಯಿಂದ ಭೀತರಾಗಿ ಸರ್ಕಾರದವರು ಒಂದು ಒಕ್ಕಲು ಕಾನೂನನ್ನು ತಂದರು. ಅದರಿಂದ ರೈತನಿಗೆ ಜೀವಾವಧಿ ಅನುಭೋಗವನ್ನು ಕೊಡುವಷ್ಟು ಮಾತ್ರ ಉಪಕಾರವಾಯಿತು.

೧೯೨೦–೨೧ ರಲ್ಲಿ ಅಸಹಕಾರ ಚಳುವಳಿ ಭರಾಟೆಯಿಂದ ಸಾಗಿತು. ಕಾಂಗ್ರೆಸ್ಸಿನ ದೃಷ್ಟಿಯೇ ಅಂದಿನಿಂದ ಬದಲಾವಣೆ ಹೊಂದಿತು. ವೇಷ ಭೂಷಣಗಳಲ್ಲಿಯೂ ಭಾಷೆಯಲ್ಲಿಯೂ ಐರೋಪ್ಯರ ಅನುಕರಣ ತಿರಸ್ಕೃತವಾಗಿ ಭಾರತೀಯತ್ವಕ್ಕೆ ಪುರಸ್ಕಾರವು ದೊರೆಯಿತು. ಪರದೇಶೀ ವಸ್ತ್ರ ವಸ್ತುಗಳಿಗೆ ಬಹಿಷ್ಕಾರ, ಖಾದೀವಸ್ತ್ರ ಧಾರಣೆಗೆ ಮಾನ್ಯತೆ ಇವು ಪ್ರಾರಂಭವಾಯಿತು. ಹಿಂದೂಸ್ಥಾನೀ ಭಾಷೆಗೆ ಪ್ರಾಧಾನ್ಯತೆ ದೊರಕಿದ್ದೂ

ಈ ಕಾಲದಲ್ಲೇ. ಯೋಧರು ಯುದ್ಧಸನ್ನದ್ಧರಾಗುವಂತೆ ಅಸಹಕಾರ ಚಳುವಳಿಯಲ್ಲಿ ಸೇರಬಯುಸಿದವರೆಲ್ಲರೂ ತಮ್ಮ ತಮ್ಮ ಗೃಹಕೃತ್ಯ ವಿಚಾರಗಳಲ್ಲಿ ವ್ಯವಸ್ಥೆಯನ್ನು ಮಾಡಿಕೊಂಡರು. ಮೋತೀಲಾಲ ನೆಹರೂರವರೂ ಕೂಡ ತಾ॥ ೧೦–೫–೧೯೨೧ ರಲ್ಲಿ ತಮ್ಮ ಮಗಳು ವಿಜಯಲಕ್ಷ್ಮಿಯ ಮದುವೆಯನ್ನು ಹೆಚ್ಚು ಆಡಂಬರವಿಲ್ಲದಂತೆ ಮಾಡಿ ಮುಗಿಸಿದರು. ಆಮೇಲೆ ಜವಾಹಿರಲಾಲರು ಅಸಹಕಾರ ಚಳುವಳಿಯಲ್ಲಿ ಧುಮುಕಿದರು. ಈ ಅಸಹಕಾರ ಚಳುವಳಿಯಲ್ಲಿ ಕೂಡ ಗಾಂಧಿಯವರು ಭಗವದ್ಗೀತೆಯ ನಿಷ್ಕಾಮಕರ್ಮದ ತತ್ತ್ವವನ್ನು ಪ್ರತಿಪಾದಿಸಿದ್ದರು. ಮೊದಮೊದಲು ಅಸಹಕಾರವು ಹೆಚ್ಚು ಪರಿಣಾಮಕಾರಿಯಾಗಲಾರದೆಂದು ವಾದಿಸುತ್ತಿದ್ದ ನೆಹರೂರವರು ಕೂಡ ಈ ಚಳುವಳಿಯ ಅಧ್ಯಾತ್ಮಿಕತೆಯನ್ನು ಒಪ್ಪಿಕೊಂಡರು. ಅಂದಿನ ಅವರ ಅಭಿಪ್ರಾಯದ ಬಗ್ಗೆ ನೆಹರೂರವರು ಹೀಗೆ ಹೇಳಿದ್ದಾರೆ. "ನಮ್ಮ ಅಸಹಕಾರ ಚಳುವಳಿ ಮತ್ತು ಸತ್ಯಾಗ್ರಹಗಳ ನೈತಿಕ ಮತ್ತು ಧಾರ್ಮಿಕ ಮುಖವನ್ನು ನಾನು ಮೆಚ್ಚಿದೆ. ....ಭಾರತದಲ್ಲಿ ನಮ್ಮ ಪರಿಸ್ಥಿತಿ, ನಮ್ಮ ಹಿನ್ನೆಲೆ ಮತ್ತು ಸಂಪ್ರದಾಯಗಳು ಇವುಗಳ ಸಮಾಲೋಚನೆಯಿಂದ ಅಹಿಂಸೆಯೇ ಸರಿಯಾದ ನೀತಿಯೆಂಬ ನಂಬಿಕೆಯು ನನ್ನಲ್ಲಿ ಬಲಿಯಿತು. ಮತೀಯ ಸಂಕುಚಿತಾರ್ಥವಿಲ್ಲದಂತೆ, ರಾಜನೀತಿಯನ್ನು ಆಧ್ಯಾತ್ಮಿಕವಾಗಿ ತಿದ್ದುವುದು ಒಳ್ಳೆಯ ಎಣಿಕೆಯೆಂದು ಬಗೆದೆ. ಯೋಗ್ಯವಾದ ಗುರಿಯನ್ನು ಮುಟ್ಟಲು ಯೋಗ್ಯವಾದ ಸಾಧನವೇ ಇರಬೇಕು. ಇದು ಒಳ್ಳೆಯ ನೀತಿಸೂತ್ರವೆಂದು ತೋರಿತಲ್ಲದೆ, ದೃಢವಾದ ಮತ್ತು ಕ್ರಿಯಾತ್ಮಕವಾದ ರಾಜನೀತಿಯೂ ಹೌದೆಂದು ತೋರಿತು.... ನಾನು ಬಯಸಿದ ರಾಷ್ಟ್ರೀಯ ಸ್ವಾತಂತ್ರ್ಯದ ಗುರಿ—ಬಡಜನತೆಯ ಸುಲಿಗೆಯ ಕೊನೆ, ನನ್ನ ನೈತಿಕ ಭಾವನೆಗೆ ಒಂದು ತೃಪ್ತಿಕರವಾದ ಸಾಧನ ಮತ್ತು ಆತ್ಮೀಯ ಸ್ವಾತಂತ್ರ್ಯದ ಭಾವನೆ— ಇವುಗಳನ್ನು ಅಸಹಕಾರ ಚಳುವಳಿಯು ನೀಡಿತು. ಆ ಮಹಾ ಆತ್ಮೀಯ ಸಂತೃಪ್ತಿ ಲಭಿಸಿದುದರಿಂದ ಸೋಲಿನ ಸಂಭವವನ್ನೂ ಚಿಂತಿಸಲಿಲ್ಲ. ಏಕೆಂದರೆ ಇಂತಹ ಸೋಲು ತಾತ್ಕಾಲಿಕವಾದುದು. ಭಗವದ್ಗೀತೆಯ ದಾರ್ಶನಿಕ ಭಾಗವು ನನಗೆ ಅರ್ಥವಾಗಲಿಲ್ಲ; ಅಥವಾ ಅದು ನನ್ನನ್ನು ಸೆಳೆಯಲಿಲ್ಲ.

ಗಾಂಧಿಜಿಯವರು ದಿನವಹಿ ಸಾಯಂಕಾಲ ಆಶ್ರಮ ಪ್ರಾರ್ಥನೆಯಲ್ಲಿ ಹಾಡುತ್ತಿದ್ದ ಗೀತಾ ಶ್ಲೋಕಗಳನ್ನು ಓದಲು ಇಷ್ಟಪಡುತ್ತಿದ್ದೆ. ಮಾನವನು ಹೇಗಿರಬೇಕೆಂಬುದನ್ನು ಆ ಶ್ಲೋಕಗಳು ನಿರೂಪಿಸುವುವು. ಉದ್ದೇಶ ಸಾಧನೆಗಾಗಿ ಒಬ್ಬನು ಶಾಂತವಾಗಿಯೂ ಗಂಭೀರವಾಗಿಯೂ ಅಚಲ ನಾಗಿಯೂ ದುಡಿಯಬೇಕು; ಅದರ ಫಲಾಫಲಗಳನ್ನು ಲೆಕ್ಕಿಸಕೂಡದು. ನನ್ನಲ್ಲಿ ಹೆಚ್ಚು ಶಾಂತತೆಯಾಗಲೀ ಫಲಾಫಲಗಳ ಉಪೇಕ್ಷೆಯಾಗಲೀ ಈ ಮೊದಲು ಇಲ್ಲದಿದ್ದುದರಿಂದ ಈ ಆದರ್ಶಕ್ಕೆ ನನ್ನ ಮನಸ್ಸು ಒಲಿಯಿತು ಎಂದು ತೋರುತ್ತದೆ.'' ಕ್ರಮೇಣ ಗಾಂಧಿಜಿಯವರ ಆಧ್ಯಾತ್ಮಿಕತೆ ಹೇಗೆ ನೆಹರೂರವರ ಮನಸ್ಸನ್ನು ಸೆರೆಹಿಡಿಯಿತು ಎಂಬುದನ್ನು ಈ ಮಾತುಗಳು ತೋರಿಸುತ್ತವೆ.

ನೆಹರೂರವರು ಅಸಹಕಾರ ಚಳುವಳಿಯಲ್ಲಿ ಸರ್ವವನ್ನೂ ಮರೆತರು. ತಂದೆತಾಯಿಗಳ ಮೇಲಿನ ಅಭಿಮಾನವು ಆಳವಾಗಿದ್ದರೂ, ಹೆಂಡತಿ ಮಗಳ ಮೇಲಿನ ಪ್ರೇಮವು ಅಗಾಧವಾಗಿದ್ದರೂ ಅವರನ್ನೆಲ್ಲಾ ಮರೆತರು. ಇವರು ತೋರಿದ ಅನಾದರಣೆಗೆ ಬೇರೆ ಯಾವ ಸಂಸಾರದಲ್ಲಾದರೂ ಆಗಿದ್ದರೆ ಒಡಕು ಹುಟ್ಟಿಕೊಳ್ಳುತ್ತಿತ್ತು. ಆದರೆ ಅವರ ತಂದೆ ತಾಯಿಗಳೂ, ಹೆಂಡತಿಯೂ ದೇಶಪ್ರೇಮಿಗಳಾದ್ದರಿಂದ ಅಂತಹ ಅಸಮಾಧಾನದ ಸಂಗತಿಯೇನೂ ನಡೆಯಲಿಲ್ಲ. ಗಾಂಧಿಯವರು 'ಹಳ್ಳಿಗಳಿಗೆ ಮರಳಿ' ಎಂದು ಆಜ್ಞೆಮಾಡಿದ್ದರು. ನೆಹರೂರವರು ಹಳ್ಳಿಗಳಿಗೆ ಹೋದರು, ಭಾಷಣಗಳನ್ನು ಮಾಡಿದರು, ಜನತೆಯಲ್ಲಿ ಉತ್ಸಾಹವನ್ನು ಹುಟ್ಟಿಸಿದರು. ಅವರ ಉತ್ಸಾಹದಿಂದ ಇವರಲ್ಲೂ ಒಂದು ವಿದ್ಯುತ್ ಸಂಚಾರ ವಾದಂತಾಯಿತು. ಜನತೆಯ ಮೇಲೆ ಸ್ಫೂರ್ತಿಯನ್ನು ಬೀರುವ ಶಕ್ತಿಯೇನೆಂಬುದನ್ನು ತಿಳಿದುಕೊಂಡರು. ಗುಂಪಿನ ಮನೋಧರ್ಮ ವನ್ನರಿತರು. ನಗರ ಮತ್ತು ಹಳ್ಳಿಗಳ ಜನತೆಗಿರುವ ವ್ಯತ್ಯಾಸವನ್ನರಿತು ಅವರೊಡನೆ ಧೂಳಿನಲ್ಲೂ ಅನಾನುಕೂಲಗಳ ಮಧ್ಯದಲ್ಲೂ ನೆಮ್ಮದಿಯಾಗಿರು ವುದನ್ನು ಅಭ್ಯಾಸಮಾಡಿಕೊಂಡರು. ಗುಂಪನ್ನು ಅವರು ಒಪ್ಪಿದರು, ಗುಂಪು ಅವರನ್ನು ಮೆಚ್ಚಿಕೊಂಡಿತು. ಅನೇಕ ವಿಷಯಗಳಲ್ಲಿ ಅವರಿಗಿದ್ದ ಜಂಭವು ಈಗ ಮಾಯವಾಯಿತು. ಈ ಚಳುವಳಿಗಳಿಂದ ಉದ್ರಿಕ್ತವಾದ

ಸರ್ಕಾರವು ಕಾಂಗ್ರೆಸ್ಸಿಗೆ ಬಹಿಷ್ಕಾರವನ್ನು ಹಾಕಿತು. ಜವಾಹಿರರು ಇದರಿಂದ ಕಾಂಗ್ರೆಸ್ಸಿನ ಚಟುವಟಿಕೆಗಳು ನಿಲ್ಲುವುದಿಲ್ಲವೆಂದು ಘೋಷಿಸಿ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಒಂದು ದಿನ ಕಾಂಗ್ರೆಸ್ ಕಚೇರಿಯಲ್ಲಿ ನೆಹರೂರವರು ಕೆಲಸಮಾಡುತ್ತಾ ಕುಳಿತಿದ್ದಾಗ ದಸ್ತಗಿರಿಯಾಗಿ ಆರು ತಿಂಗಳ ಸೆರೆಮನೆಯ ವಾಸ ವಿಧಾಯಕವಾಯಿತು. ಆದರೆ ಚೌರಿಚೌರ ವೆಂಬ ಗ್ರಾಮದಲ್ಲಿ ಹಳ್ಳಿಗರ ಗುಂಪೊಂದು ಪೋಲೀಸರನ್ನು ಠಾಣೆಯಲ್ಲಿಟ್ಟು ಸುಟ್ಟುಹಾಕಿದುದರಿಂದ ಅಹಿಂಸೆಯ ಕಾರ್ಯಕ್ರಮದಲ್ಲಿ ಹಿಂಸೆಯಾಯಿ ತೆಂದು ಗಾಂಧಿಯವರು ಸತ್ಯಾಗ್ರಹವನ್ನು ನಿಲ್ಲಿಸಬೇಕೆಂದು ಆಜ್ಞೆಮಾಡಿ ದರು. ಚಳುವಳಿ ನಿಂತುದರಿಂದ ನೆಹರೂರವರಿಗೂ ಮೂರು ತಿಂಗಳ ಸೆರೆವಾಸದಲ್ಲೇ ಬಿಡುಗಡೆಯಾಯಿತು. ಜೈಲಿನಿಂದ ಹೊರಗೆ ಬಂದೊಡನೆ ನೆಹರೂರವರು ವಿದೇಶೀ ಬಟ್ಟೆಗಳ ಬಹಿಷ್ಕಾರದ ಚಳುವಳಿ ಹೂಡಿದರು. ಅದರಿಂದ, ಬಿಡುಗಡೆಯಾದ ಆರು ವಾರಗಳಲ್ಲೇ ಪುನಃ ದಸ್ತಗಿರಿಯಾಗ ಲ್ಪಟ್ಟು ಒಂದು ವರ್ಷ ಒಂಭತ್ತು ತಿಂಗಳ ಶಿಕ್ಷೆಗೆ ಗುರಿಯಾಗಬೇಕಾಯಿತು. ಇದು ನೆಹರೂರವರ ಎರಡನೆಯ ಜೈಲುಯಾತ್ರೆ. ಶಿಕ್ಷೆಯನ್ನು ಅನುಭವಿಸು ವುದಕ್ಕಾಗಿ ನೆಹರೂರವರು ಲಕ್ನೋ ಜೈಲನ್ನು ಪ್ರವೇಶಿಸಿದರು.

ಮೋತೀಲಾಲರವರೂ ಕೂಡ ಆಗ ಆ ಜೈಲಿನಲ್ಲೇ ಇದ್ದರು. ಜವಾಹಿರರು ಬೆಳಗಾಗುತ್ತಲೂ ಅವರ ವಿಶಾಲವಾದ ಕೊಠಡಿಯನ್ನು ಗುಡಿಸಿ, ತೊಳೆದು ಓರಣವಾಗಿಡುವುದು, ತಂದೆಯವರ ಮತ್ತು ಅವರ ಬಟ್ಟೆಗಳನ್ನು ಒಗೆಯುವುದು, ಮತ್ತು ನೂಲುವುದು, ಇನ್ನೂ ಬಿಡುವಿನ ಕಾಲಗಳಲ್ಲಿ ಸ್ವಯಂಸೇವಕರಿಗೂ ಮತ್ತು ಅವಿದ್ಯಾವಂತ ಸೆರೆಯಾಳು ಗಳಿಗೂ ತರಗತಿಗಳನ್ನು ತೆರೆದು ಹಿಂದಿ ಉರ್ದು ಮತ್ತು ಇತರ ತಿಳಿ ವಳಿಕೆಯ ಪಾಠಗಳನ್ನು ಹೇಳಿಕೊಡುವುದು—ಹೀಗೆ ವಿರಾಮವಿಲ್ಲದೆ ಕೆಲಸ ಮಾಡುತ್ತಿದ್ದರು. ಕಟ್ಟುಪಾಡುಗಳು ಹೆಚ್ಚಿದಾಗ ಈ ಶಾಲೆಗಳನ್ನು ನಡೆಸು ವುದು ನಿಂತುಹೋಯಿತು. ಬರಬರುತ್ತ ಸೆರೆಮನೆಯ ಕೆಲಸ ಒಂದೇ ಜಾಡನ್ನು ಹಿಡಿಯಿತು; ವ್ಯಾಯಾಮ ಮತ್ತು ಓದು. ವ್ಯಾಯಾಮಕ್ಕಾಗಿ ನೊಗಕಟ್ಟಿದ ಎತ್ತುಗಳಂತೆ ಇಬ್ಬಿಬ್ಬರು ಅಂಗಳದ ಬಾವಿಯಿಂದ ದೊಡ್ಡ ತೊಗಲಿನ ಚೀಲದಲ್ಲಿ ನೀರನ್ನು ಸೇದಿ ತರಕಾರಿ ಗಿಡಗಳಿಗೆ ಹಾಕುತ್ತಿದ್ದರು.

ಉಳಿದ ಕಾಲಗಳಲ್ಲಿ ಓದುತ್ತಿದ್ದರು. ತಾ॥ ೩೧–೧–೧೯೨೩ ರಂದು ನೆಹರೂ ರವರು ಬಿಡುಗಡೆಯಾದರು.

ಸೆರೆಮನೆಯಿಂದ ಬಿಡುಗಡೆ ಹೊಂದಿದಮೇಲೆ ಅಲಹಾಬಾದಿನ ಪೌರಸಭೆಯ ಅಧ್ಯಕ್ಷರಾಗಿ ನೆಹರೂರವರು ಚುನಾಯಿತರಾದರು. ಹಾಗೆಯೇ ಪ್ರಾಂತ ಕಾಂಗ್ರೆಸ್ಸಿನ ಕಾರ್ಯದರ್ಶಿಯಾಗಿಯೂ ಮತ್ತು ಅಖಿಲ ಭಾರತ ಕಾಂಗ್ರೆಸ್ಸಿನ ಕಾರ್ಯದರ್ಶಿಯಾಗಿಯೂ ಚುನಾಯಿತರಾದರು. ಈ ವಿವಿಧ ಕಾರ್ಯಗಳಿಗಾಗಿ ಅವರು ದಿನಂಪ್ರತಿ ಹದಿನೈದು ಘಂಟೆಗಳ ಕಾಲ ದುಡಿಯ ಬೇಕಾಯಿತು. ದಿನದಿನಕ್ಕೆ ಅವರು ಜೀವನದ ಮಟ್ಟವನ್ನು ಕಡಿಮೆ ಮಾಡಿ ಕೊಂಡರು. ಶ್ರೀಮಂತಿಕೆಯ ಕುರುಹುಗಳು ಕಡಿಮೆಯಾಗಿ ಸರಳವಾದ ಜೀವನವನ್ನು ನಡಸಲು ಷುರುಮಾಡಿದರು. ಮನೆಯಲ್ಲಿ ಆಳುಕಾಳುಗಳ ಸಂಖ್ಯೆ ಕಡಿಮೆಯಾಯಿತು. ಗಂಡಹೆಂಡಿರ ಖರ್ಚುವೆಚ್ಚಗಳು ಅತಿ ಮಿತವಾಗಿದ್ದುವು. ಖಾದೀಬಟ್ಟೆಯ ಉಡಿಗೆ, ಮೂರನೆಯ ತರಗತಿಯ ಪ್ರಯಾಣ ಇವು ತುಂಬಾ ಮಿತವ್ಯಯವನ್ನು ತಂದುವು. ಆದರೂ ನೆಹರೂ ರವರಿಗೆ ತಂದೆಯ ಆದಾಯದ ಮೇಲೆಯೇ ಜೀವನವನ್ನು ನಡೆಸುವುದಕ್ಕೆ ಸಂಕೋಚವಾಯಿತು. ೧೯೨೪ ರಲ್ಲಿ ಕಾಂಗ್ರೆಸ್ ಕಾರ್ಯದರ್ಶಿಗಳಿಗೆ ಸಂಬಳ ಕೊಡಬೇಕೆಂಬ ಸೂಚನೆ ಬಂತು. ತನ್ನ ರಿಕ್ತದೆಶೆಯನ್ನು ಅರಿತು ಜವಾಹಿರಲಾಲರು, ಆ ಸೂಚನೆಗೆ ಬೆಂಬಲವನ್ನು ಕೊಟ್ಟರು. ಆದರೆ ಮೋತೀಲಾಲರು ಕಾಂಗ್ರೆಸ್ಸಿನಲ್ಲಿ ಸಂಬಳದ ನೌಕರನಾಗಿರುವುದು ಸರಿಯಲ್ಲ ವೆಂದು ಆಕ್ಷೇಪಿಸಿದರು. ತನಗೆ ಹಣದ ಆವಶ್ಯಕತೆ ತೀವ್ರವಾಗಿದ್ದರೂ, ಕಾಂಗ್ರೆಸ್ಸಿನಿಂದ ಸಂಬಳ ತೆಗೆದುಕೊಂಡು ದುಡಿಯುವುದು ಮಾನಕ್ಕೆ ಕಡಿಮೆಯೆಂದು ನೆಹರೂರವರು ಆಗ ಅದನ್ನು ನಿರಾಕರಿಸಿದರು.

ಈ ಸಮಯದಲ್ಲಿ ನೆಹರೂರವರು ನಾಭಾ ಸಂಸ್ಥಾನಕ್ಕೆ ಹೋಗ ಬೇಕಾಯಿತು. ಅಲ್ಲಿ ಒಂದು ಪಂಗಡದ ಸಿಕ್ ಜನರು ಸತ್ಯಾಗ್ರಹವನ್ನು ಹೂಡಿದ್ದರು. ತಮ್ಮ ದೇವಸ್ಥಾನಗಳಲ್ಲಿ ಪಾರುಪತ್ಯೇದಾರರಾದ ಮಹಂತರ ಅನ್ಯಾಯಗಳನ್ನು ಪ್ರತಿಭಟಿಸಲು ಈ ಸತ್ಯಾಗ್ರಹ ಏರ್ಪಟ್ಟಿತ್ತು. ಸರ್ಕಾರ ಮಹಂತರ ಪಕ್ಷವನ್ನು ವಹಿಸಿತ್ತು. ಸಿಕ್ಕರು ಕಾಂಗ್ರೆಸ್ ಕಾರ್ಯದರ್ಶಿ ಯಾಗಿದ್ದ ನೆಹರೂರವರನ್ನು ಆಹ್ವಾನಿಸಿದರು. ಆದರೆ ಆ ಹೊತ್ತಿಗೆ ನಾಭಾ

ಸಂಸ್ಥಾನದ ರಾಜರು ಪದಚ್ಯುತರಾಗಿ ಇಂಗ್ಲಿಷ್ ಅಧಿಕಾರಿಯು ಆಡಳಿತ ವನ್ನು ನಡೆಸುತ್ತಿದ್ದನು. ಜವಾಹಿರರು ಆಗ ಆ ಸಂಸ್ಥಾನವನ್ನು ಪ್ರವೇಶಿಸ ಕೂಡದೆಂದು ಆಜ್ಞೆ ಹೊರಟಿತು. ಜವಾಹಿರರು ಆ ಆಜ್ಞೆಯನ್ನು ಉಲ್ಲಂಘಿಸಿ ನಾಭಾ ಪ್ರದೇಶವನ್ನು ಪ್ರವೇಶಿಸಿ ದಸ್ತಗಿರಿಯಾದರು. ಬೇರೆ ಕಡೆಗಳಲ್ಲಿ ದಸ್ತಗಿರಿಯಾದಾಗ ಸರ್ಕಾರದ ಅಧಿಕಾರಿಗಳು ಅವರಲ್ಲಿ ಗೌರವದಿಂದ ನಡೆದುಕೊಂಡಿದ್ದರು. ಆದರೆ ನಾಭಾದಲ್ಲಿ ನೆಹರು ಮತ್ತು ಅವರೊಡನಿದ್ದ ಸಂತಾನಂ ಇಬ್ಬರ ಕೈಗಳನ್ನೂ ಸೇರಿಸಿ ಬೇಡಿಹಾಕಿ, ಸರಪಣಿಗಳಿಂದ ಬಂಧಿಸಿ ಊರಿನ ಬೀದಿಗಳಲ್ಲಿ—ನಾಯಿಗಳನ್ನು ಕರೆದುಕೊಂಡುಹೋಗುವ ಹಾಗೆ— ಕರೆದುಕೊಂಡುಹೋದರು. ಹೀಗೇ ಅವರು ನಾಭಾವನ್ನು ತಲಪಿ ಹದಿನೈದು ದಿನಗಳ ವಿಚಾರಣೆಗೊಳಪಟ್ಟು ಎರಡೂವರೆ ವರ್ಷದ ಕಾರಾಗೃಹ ಶಿಕ್ಷೆ ವಿಧಿಸಲ್ಪಟ್ಟು, ಕಡೆಗೆ ಜೈಲಿಗೆ ಹೋದ ಸಂಜೆಯೇ ಬಿಡುಗಡೆಯಾದರು. ನಾಭಾದ ಅಧಿಕಾರಿಗೆ ನೆಹರೂರವರ ಸ್ಥಾನಮಾನ ಗಳು ತಿಳಿದಿರಲಿಲ್ಲವೆಂದು ತೋರುತ್ತದೆ. ಭಾರತದ ರಾಜಕೀಯರಂಗದಲ್ಲಿ ನೆಹರೂರವರಿಗಿದ್ದ ವಿಶಿಷ್ಟ ಸ್ಥಾನ ಗೌರವಗಳ ಅರಿವಾದ ಕೂಡಲೇ ಅವನು ಅವರನ್ನು ಬಿಡುಗಡೆಮಾಡಿ ನಾಭಾ ಸಂಸ್ಥಾನವನ್ನು ಬಿಟ್ಟು ಹೊರಡ ಬೇಕೆಂದು ಆಜ್ಞೆಮಾಡಿದನು. ಈ ಕೈಬೇಡಿ ಪ್ರಕರಣ ನೆಹರೂರವರ ಮನಸ್ಸನ್ನು ನಾಟಿತು. ಸಂಸ್ಥಾನದ ಆಡಳಿತದ ಮೇಲೆ ಅಸಮಾಧಾನ ಬೆಳೆಯುವುದಕ್ಕೆ ಇದು ಕಾರಣವಾಯಿತು.

ನಾಭಾದಿಂದ ಹಿಂದಿರುಗಿದಮೇಲೆ ನೆಹರೂರವರು ವಿಷಮಶೀತ ಜ್ವರದಿಂದ ನರಳಿದರು. ಇದುವರೆಗೆ ಖಾಯಿಲೆ ಬೀಳುವುದು, ಹಾಸಿಗೆ ಹಿಡಿಯುವುದು, ದೇಹದೌರ್ಬಲ್ಯ—ಇವುಗಳೇನೆಂಬುದರ ಅರಿವೇ ಅವರಿ ಗಿರಲಿಲ್ಲ. ಈ ಖಾಯಿಲೆಯ ಅನುಭವ ಅವರ ಮನಸ್ಸಿನ ಮೇಲೆ ಮಹತ್ತರ ವಾದ ಪರಿಣಾಮವನ್ನುಂಟುಮಾಡಿತು. ಆ ಪರಿಣಾಮವನ್ನು ಕುರಿತು ಅವರು ಈ ರೀತಿ ಹೇಳಿದ್ದಾರೆ. "ರೋಗದ ಅವಧಿಯಲ್ಲಿ ನಾನು ಸುತ್ತಣ ಇರುವಿನಿಂದಲೂ ನನ್ನ ದಿನದಿನದ ಕಾರ್ಯಗಳಿಂದಲೂ ಬಹು ದೂರವಾಗಿ ಬಿಟ್ಟಿದ್ದೆ. ಎಲ್ಲವನ್ನೂ ದೂರದಿಂದ 'ಬೇರೆ' ಎಂಬ ಭಾವನೆಯಿಂದ ನೋಡು ತ್ತಿದ್ದೆ. ಮರಗಿಡಗಳಿಂದ ದೂರವಾಗಿದ್ದು ಇಡೀ ಕಾಡನ್ನೇ ಕಾಣುತ್ತಿದ್ದೇ

ನೆಂಬ ಅರಿವುಂಟಾಯಿತು; ನನ್ನ ಬಗೆಯು ತಿಳಿಯಾಗಿಯೂ ಹಿಂದೆಂದೂ ಇಲ್ಲದಷ್ಟು ಶಾಂತವಾಗಿಯೂ ಇದ್ದಂತೆ ತೋರುತ್ತಿತ್ತು. ಈ ಅನುಭವವು ಅಥವಾ ಇಂಥದೊಂದು ಅನುಭವವು ಸಾಮಾನ್ಯವಾಗಿ ರೋಗಗ್ರಸ್ತರಾಗಿ ಪಾರಾದವರೆಲ್ಲರ ಬಾಳಿನಲ್ಲೂ ಉಂಟಾಗುವುದು. ಆದರೆ ನನಗೆ ಅದು ಒಂದು ಬಗೆಯ ಆಧ್ಯಾತ್ಮಿಕ ಅನುಭವವಾಯಿತು–ಇದನ್ನು ಮತದ ಸಂಕುಚಿತಾರ್ಥದಲ್ಲಿ ಭಾವಿಸಿಲ್ಲ. ಇದು ನನ್ನ ಮೇಲೆ ಮಹಾಪರಿಣಾಮವನ್ನುಂಟು ಮಾಡಿತು. ರಾಜನೀತಿಯ ರಾಗಾವಸ್ಥೆಯನ್ನು ದಾಟಿದವನಂತೆ ನನ್ನನ್ನು ಭಾವಿಸಿಕೊಂಡೆ. ಬಾಹ್ಯೋದ್ದೇಶಗಳನ್ನೂ, ನನ್ನನ್ನು ಕ್ರಿಯಾರಂಗದಲ್ಲಿ ಪ್ರೇರಿಸಿದ ಬುಗ್ಗೆಗಳನ್ನೂ ಸ್ಪಷ್ಟವಾಗಿ ಕಾಣಲು ಸಾಧ್ಯವಾಯಿತು. ಈ ಸ್ಪಷ್ಟತೆಯೊಂದಿಗೆ ಪರಿಪ್ರಶ್ನೆಮಾಡುವ ಬಗೆಯು ಕೆರಳಿತು. ಈ ಪ್ರಶ್ನೆಗಳಿಗೆ ತೃಪ್ತಿಕರವಾದ ಉತ್ತರ ದೊರಕಲಿಲ್ಲ. ಆದರೆ ನಿತ್ಯವೂ ಜೀವನ ಮತ್ತು ರಾಜನೀತಿಯನ್ನು ಕುರಿತ ಮತೀಯ ದೃಷ್ಟಿಯಿಂದ ಹೆಚ್ಚು ಹೆಚ್ಚಾಗಿ ದೂರವಾಗುತ್ತಾ ಬಂದೆ. ಈ ಅನುಭವವನ್ನು ಹೆಚ್ಚಾಗಿ ಬರೆಯಲಾರೆ. ನುಡಿಗೆ ನಿಲುಕದ ಸಂವೇದನೆಯದು. ....ಅದು ನನ್ನ ಮೇಲೂ ನನ್ನ ವಿಚಾರಮಾಡುವ ರೀತಿಯ ಮೇಲೂ ನಿರಂತರ ಪರಿಣಾಮ ಮಾಡಿತೆಂದು ಚೆನ್ನಾಗಿ ಬಲ್ಲೆ. ಮುಂದಿನ ಎರಡು ವರ್ಷಗಳವರೆಗೆ ನಾನು ಈ ನಿರ್ಲಿಪ್ತತೆಯ ಬಗೆಯಿಂದಲೇ ಕಾರ್ಯಗಳಲ್ಲಿ ತೊಡಗುತ್ತಿದ್ದೆ.'' ಖಾಯಿಲೆ ಬೀಳುವುದು ಎಲ್ಲರ ಜೀವನದಲ್ಲಿಯೂ ನಡೆಯುವ ಒಂದು ಘಟನೆ. ಆದರೆ ಅಂತಹ ಘಟನೆಯಿಂದ ಪ್ರಪಂಚಕ್ಕೂ ತನಗೂ ಯೋಗಿಯಂತೆ ಭೇದವೆಣಿಸಿಕೊಂಡು ನಿರ್ಲಿಪ್ತತೆಯಿಂದ ಕೆಲಸಮಾಡುವ ಹೊಸ ದಾರಿಯನ್ನು ಕಂಡುಕೊಳ್ಳುವವರೆಷ್ಟು ಮಂದಿ? ಜವಾಹಿರಲಾಲ ನೆಹರೂರವರು ಜೀವನದಲ್ಲಿ ನಡೆದ ಒಂದೊಂದು ಅನುಭವದಿಂದಲೂ ಒಂದೊಂದು ಹೊಸ ಬೆಳಕನ್ನು ಕಂಡು ಜೀವನವನ್ನು ಉತ್ತಮಗೊಳಿಸಿಕೊಳ್ಳುತ್ತಾ ಕ್ರಮೇಣ ಹೇಗೆ ಮಹಾವ್ಯಕ್ತಿಯಾಗಿ ಮೆರೆಯುತ್ತಿದ್ದಾರೆ ಎಂಬುದಕ್ಕೆ ಇದೊಂದು ಉತ್ತಮವಾದ ಉದಾಹರಣೆ.

ಬರಬರುತ್ತಾ ಕಮಲಾನೆಹರೂರವರ ಆರೋಗ್ಯ ಕೆಡುತ್ತಾ ಬಂತು. ಸ್ವಿಟ್ಜರ್ಲೆಂಡಿನಲ್ಲಿ ಅವರಿಗೆ ಮುಂದಿನ ಚಿಕಿತ್ಸೆ ನಡೆಯಬೇಕೆಂದು ಗೊತ್ತಾ

ಯಿತು. ಅದರಂತೆ ೧೯೨೬ ರ ಮಾರ್ಚಿ ತಿಂಗಳಲ್ಲಿ ನೆಹರೂರವರು ಹೆಂಡತಿ, ಮಗಳು ಇಂದಿರಾ, ತಂಗಿ ವಿಜಯಲಕ್ಷ್ಮಿ ಮತ್ತು ಭಾವ ರಣಜಿತ್ ಎಸ್. ಪಂಡಿತರೊಡನೆ ಸ್ವಿಟ್ಜರ್ಲೆಂಡಿಗೆ ಪ್ರಯಾಣ ಬೆಳೆಸಿದರು. ಅವರ ಕಿರಿಯ ತಂಗಿ ಕೃಷ್ಣಾ — ನೆಹರೂರವರು ಕೇಂಬ್ರಿಡ್ಜ್‌ನಲ್ಲಿ ಓದುತ್ತಿದ್ದಾಗ ಹುಟ್ಟಿದವಳು—ಕೂಡ ಅಲ್ಲಿ ಅವರನ್ನು ಸೇರಿದಳು. ಬರಬರುತ್ತ ಕಮಲಳಿಗೆ ಆರೋಗ್ಯ ಉತ್ತಮಗೊಂದಲು ನೆಹರೂರವರು ಫ್ರಾನ್ಸ್, ಇಂಗ್ಲೆಂಡ್, ಜರ್ಮನಿಗಳಲ್ಲಿ ಸುತ್ತಾಡಿದರು. ಬೇಕಾದಹಾಗೆ ಓದುವುದು, ಯೂರೋಪಿನ ರಾಜಕೀಯ ಘಟನಾವಳಿಗಳನ್ನು ಅರ್ಥಮಾಡಿಕೊಳ್ಳಲು ಆ ರಾಜಕೀಯದ ಘಟನಾವಳಿಯ ಸರಣಿಯನ್ನು ಹಿಡಿದು ಚಿಂತಿಸುವುದು, ಲೀಗ್ ಆಫ್ ನೇಷನ್ಸ್ ಮಹಾಸಭೆಯ ಕಾರ್ಯಕಲಾಪಗಳನ್ನು ತಿಳಿಯುವುದು, ಅಂತರರಾಷ್ಟ್ರೀಯ ಕೂಲಿಕಾರರ ಕಚೇರಿಗಳ ವಿದ್ಯಮಾನಗಳನ್ನು ವೀಕ್ಷಿಸುವುದು—ಹೀಗೆ ಯೂರೋಪಿನ ವಿದ್ಯಮಾನಗಳನ್ನು ತಿಳಿದುಕೊಂಡರು. ಯೂರೋಪಿನಲ್ಲಿ ನೆಲೆಸಿದ್ದ ಭಾರತೀಯರನ್ನು ಭೇಟಿಮಾಡಿ ವಿಚಾರ ವಿನಿಮಯ ನಡೆಸಿದರು. ಅನೇಕ ಐರೋಪ್ಯರನ್ನೂ ಅಮೇರಿಕನ್ನರನ್ನೂ ಸಂದರ್ಶಿಸಿದರು. ಗಾಂಧೀಜಿಯವರಿಂದ ಪರಿಚಯ ಪತ್ರ ಪಡೆದು ಫ್ರಾನ್ಸಿನ ಪ್ರಸಿದ್ಧ ಸಾಹಿತಿ ರೋಮರೋಲಾರವರನ್ನು ಭೇಟಿ ಮಾಡಿದರು. ಜರ್ಮನಿಯ ತರುಣಕವಿ ಮತ್ತು ನಾಟಕಕಾರರಾದ ಅರ್ನಾಸ್ಟ್ ಟಾಲರ್‌ರವರನ್ನೂ, ನ್ಯೂಯಾರ್ಕಿನ ಪೌರಸ್ವಾತಂತ್ರ್ಯ ಸಂಘದ ರೋಜರ್ ಬಾಲ್ಡ್‌ವಿನ್ನರನ್ನೂ, ಅಮೇರಿಕದಲ್ಲಿ ನೆಲಸಿರುವ ಭಾರತದ ಸಾಹಿತಿ ಧನಗೋಪಾಲ ಮುಖರ್ಜಿಯವರನ್ನೂ, ಯೂರೋಪಿನಲ್ಲಿ ನೆಲೆಸಿದ್ದ ಭಾರತದ ರಾಜಕೀಯ ದೇಶಭ್ರಷ್ಟರನೇಕರನ್ನೂ ಸಂಧಿಸಿ ಮಾತುಕತೆ ನಡೆಸಿದರು. ವಿ. ಚಟ್ಟೋಪಾಧ್ಯಾಯರವರೂ, ಎಂ. ಎನ್. ರಾಯ್‌ರವರೂ ನೆಹರೂರವರ ಮನಸ್ಸಿನ ಮೇಲೆ ತುಂಬಾ ಪರಿಣಾಮವನ್ನುಂಟು ಮಾಡಿದರೆಂದು ಅವರೇ ಹೇಳಿಕೊಂಡಿದ್ದಾರೆ. ಇಂತಹ ಒಂದೊಂದು ಭೇಟಿ ಒಂದೊಂದು ಚರ್ಚೆಗಳಿಂದಲೂ ನೆಹರೂರವರ ಬೌದ್ಧಿಕ ಸಂಪತ್ತು ಹೆಚ್ಚಿತು, ಅನುಭವ ವಿಶಾಲವಾಯಿತು.

೧೯೨೬ ರ ಕೊನೆಯಲ್ಲಿ ನೆಹರೂರವರು ಬರ್ಲಿನ್ನಿನಲ್ಲಿದ್ದಾಗ

ಪ್ರಪಂಚದ ಅಧೀನರಾಷ್ಟ್ರಗಳ ಸಮ್ಮೇಳನವೊಂದು ಬ್ರಸೆಲ್ಸ್‌ನಲ್ಲಿ ನಡೆಯು ವುದೆಂದು ಗೊತ್ತಾಯಿತು. ಭಾರತವೂ ಅದರಲ್ಲಿ ಭಾಗವಹಿಸುವುದು ಆವಶ್ಯಕವೆಂದು ತೋರಿ ನೆಹರೂರವರು ಭಾರತಕ್ಕೆ ಕಾಗದ ಬರೆದರು. ಉತ್ತರವಾಗಿ ಭಾರತೀಯ ಕಾಂಗ್ರೆಸ್ಸು ನೆಹರೂರವರನ್ನೇ ಅದರ ಪ್ರತಿನಿಧಿ ಯನ್ನಾಗಿ ನೇಮಿಸಿತು. ೧೯೨೭ನೆಯ ಫೆಬ್ರುವರಿಯಲ್ಲಿ ನಡೆದ ಈ ಸಮ್ಮೇ ಳನದಲ್ಲಿ ಭಾರತದ ಪ್ರತಿನಿಧಿಯಾಗಿ ನೆಹರೂರವರು ಭಾಗವಹಿಸಿದರು. ಈ ಸಮ್ಮೇಳನ ಬಹಳತಃ ಕಮ್ಯೂನಿಸ್ಟರ ಬೆಂಬಲದಿಂದಲೇ ಪ್ರಾರಂಭ ವಾದುದಾಗಿತ್ತು. ಕೋ–ಮಿನ್–ಟಾಂಗಿನ ಐರೋಪ್ಯ ಪ್ರತಿನಿಧಿಗಳೂ, ಮೆಕ್ಸಿಕೋದ ಪ್ರತಿನಿಧಿ, ಜಾವ, ಇಂಡೋಚೈನ, ಪ್ಯಾಲೆಸ್ಟೈನ್, ಸಿರಿಯ, ಈಜಿಪ್ಟ್, ಉತ್ತರ ಆಫ್ರಿಕದ ಅರಬ್ಬಿಯರೂ, ಆಫ್ರಿಕದ ನೀಗ್ರೋಗಳ ಪ್ರತಿನಿಧಿಗಳೂ ಭಾಗವಹಿಸಿದ್ದರು. ಈ ಸಮ್ಮೇಳನಗಳೂ, ಆಮೇಲೆ ನಡೆದ ಸಂಸ್ಥೆಯ ಅಧಿವೇಶನಗಳೂ, ವಸಾಹತುಗಳ ಮತ್ತು ದಾಸ್ಯಕ್ಕೀಡಾದ ಪ್ರಪಂಚದ ವಿವಿಧ ರಾಷ್ಟ್ರಗಳ ಅನೇಕ ಸಮಸ್ಯೆಗಳನ್ನು ತಿಳಿಯಲು ನೆಹರೂ ರವರಿಗೆ ಸಹಾಯಮಾಡಿತು. ಪಾಶ್ಚಾತ್ಯ ಕೂಲಿಕಾರ ಪ್ರಪಂಚದಲ್ಲಿ ನಡೆಯುತ್ತಿದ್ದ ಹೋರಾಟದ ಪರಿಜ್ಞಾನವು ಅವರಿಗೆ ಲಭಿಸಿತು. ಆ ಕಾಲಕ್ಕೆ ಅವುಗಳ ವಿಚಾರವಾಗಿ ನೆಹರೂರವರು ಅನೇಕ ಪುಸ್ತಕ ಗಳನ್ನು ಓದಿದ್ದರಾದರೂ ಪರಸ್ಪರ ವೈಯಕ್ತಿಕ ಸಂಪರ್ಕಗಳಿಲ್ಲದೆ ಸಹಜ ಪರಿಸ್ಥಿತಿಯ ಅನುಭವವಿರಲಿಲ್ಲ. ಈ ಸಮ್ಮೇಳನದಲ್ಲಿ ಭಾಗವಹಿಸಿದ್ದ ರಿಂದ ನೆಹರೂರವರಿಗೆ ಪ್ರಪಂಚದ ಎಲ್ಲ ಭಾಗಗಳಲ್ಲಿರುವ— ವಸಾಹತು ರಾಷ್ಟ್ರಗಳ ಸಮಸ್ಯೆಗಳ ಪರಿಸ್ಥಿತಿಯ ಅರಿವಾಯಿತು. ಅಂತರರಾಷ್ಟ್ರೀಯ ಪರಿಸ್ಥಿತಿ ಚೆನ್ನಾಗಿ ಅರ್ಥವಾಯಿತು. ಇದೆಲ್ಲಾ ಕಾರ್ಯಕಲಾಪಗಳು ಮುಗಿಯುವ ಹೊತ್ತಿಗೆ ಮೋತೀಲಾಲ ನೆಹರೂರವರೂ ಯೂರೋಪಿಗೆ ಬಂದರು. ಜವಾಹಿರಲಾಲರು ತಂದೆ ಹೆಂಡತಿ ತಂಗಿಯವರೊಂದಿಗೆ ಸೋವಿಯಟ್ ಹತ್ತನೆಯ ವಾರ್ಷಿಕೋತ್ಸವಕ್ಕಾಗಿ ಮಾಸ್ಕೋ ನಗರಕ್ಕೆ ಹೋದರು. ಅಲ್ಲಿ ಕೆಲವು ದಿವಸಗಳಿದ್ದು ಅಲ್ಲಿಯ ಪರಿಸ್ಥಿತಿಯನ್ನು ತಿಳಿದುಕೊಂಡು, ಕ್ರಿಸ್‌ಮಸ್ಸಿನಲ್ಲಿ ಮದರಾಸಿನಲ್ಲಿ ಕಾಂಗ್ರೆಸ್ಸಿನ ಅಧಿವೇಶನ ನಡೆಯಬೇಕೆಂದು ಗೊತ್ತಾಗಿದ್ದುದರಿಂದ ಆ ಹೊತ್ತಿಗೆ ಮದರಾಸು

ಸೇರಬೇಕೆಂದುಕೊಂಡು ತಂಗಿ ಮತ್ತು ಹೆಂಡತಿಯರೊಡನೆ ಭಾರತಕ್ಕೆ ಪ್ರಯಾಣಮಾಡಿದರು. ಈ ಒಂದು ವರ್ಷ ಒಂಭತ್ತು ತಿಂಗಳ ಯೂರೋಪು ಪ್ರವಾಸದಿಂದ ನೆಹರೂರವರ ಮೈಗೂ ಮನಸ್ಸಿಗೂ ಬೇಕಾದ ಶಾಂತವಾದ ವಿಶ್ರಾಂತಿ ದೊರಕಿದುದಲ್ಲದೆ ಮಹಾ ರಾಜಕಾರಿಣಿಗಳ, ಸಾಹಿತಿಗಳ, ವಸಾಹತು ಪ್ರತಿನಿಧಿಗಳ ವೈಯಕ್ತಿಕ ಭೇಟಿ ದೊರೆತು ಎಲ್ಲ ಬಗೆಯ ಅಂತರರಾಷ್ಟ್ರೀಯ ಪರಿಸ್ಥಿತಿಯ ಅರಿವಾಯಿತು. ದೃಷ್ಟಿವಿಶಾಲವಾಯಿತು.

೧೯೨೮ನೆಯ ವರುಷ ಭಾರತದೇಶದಾದ್ಯಂತ ರಾಜಕೀಯ ಜಾಗೃತಿಯುಂಟಾಗಿ ಹೊಸ ಚಟುವಟಿಕೆಗಳು ಪ್ರಾರಂಭವಾದುವು. ಹೊಸ ಪ್ರೇರಣೆಯೊಂದು ರಾಷ್ಟ್ರದ ಜನರನ್ನು ಮುಂದೂಡುವಂತಿತ್ತು. ಬಗೆಬಗೆಯ ಗುಂಪುಗಳಲ್ಲಿ ಒಂದು ಹೊಸ ಹುಮ್ಮಸ್ಸು ಎದ್ದುಕಾಣುತ್ತಿತ್ತು. ಕಾರ್ಖಾನೆಯ ಕೂಲಿಗಾರರಲ್ಲಿಯೂ, ರೈತಾಪಿ ಜನರಲ್ಲಿಯೂ, ಯುವಕರಲ್ಲಿಯೂ, ವಿದ್ಯಾವಂತರಲ್ಲಿಯೂ ಈ ಹುಮ್ಮಸ್ಸು ವಿವಿಧರೂಪಗಳನ್ನು ತಾಳಿತು. ನೆಯ್ಗೆ ಕಾರ್ಖಾನೆ ರೈಲ್ವೆ ಕೂಲಿಕಾರರ ಸಂಸ್ಥೆಗಳು ಉತ್ತಮವಾಗಿ ವ್ಯವಸ್ಥಿತವಾದುವು. ಸರ್ದಾರ್ ವಲ್ಲಭಾಯಿ ಪಟೇಲರ ನೇತೃತ್ವದಲ್ಲಿ ನಡೆದ ಬರ್ಡೋಲಿ ಸತ್ಯಾಗ್ರಹ ರೈತರಿಗೆ ವಿಜಯವನ್ನು ದೊರಕಿಸಿಕೊಟ್ಟು ಇತರ ಭಾರತೀಯ ರೈತರಿಗೆ ಗೆಲುವಿನ ಆಸೆಯನ್ನು ತಂದಿತ್ತು. ಅನೇಕ ಯುವಕ ಸಮ್ಮೇಳನಗಳು ನಡೆದುವು. ಸೈಮನ್ ಕಮಿಷನ್ನು ಆಗ ಭಾರತಕ್ಕೆ ಬಂದಿತ್ತು. ಸೈಮನ್ ಕಮಿಷನ್ನನ್ನು ಬಹಿಷ್ಕರಿಸಬೇಕೆಂದು ಕಾಂಗ್ರೆಸ್ಸು ಹೇಳಿತು. ಅದರಂತೆ ಸೈಮನ್ ಕಮಿಷನ್ ತೆರಳಿದ ಕಡೆಗಳಲ್ಲೆಲ್ಲಾ ಕಪ್ಪು ಬಾವುಟ ಪ್ರದರ್ಶನವೂ, ಅವರ ಧಿಕ್ಕಾರವನ್ನು ಸಾರುವ ದೊಡ್ಡ ದೊಡ್ಡ ಮೆರವಣಿಗೆಗಳೂ, ಪ್ರದರ್ಶನಗಳೂ ಏರ್ಪಾಟಾದುವು. ಅನೇಕ ಊರುಗಳಲ್ಲಿ ಇವುಗಳು ನಡೆಯಕೂಡದೆಂಬ ಪ್ರತಿಬಂಧಕಾಜ್ಞೆಗಳೂ ಹೊರಟವು. ಆ ಆಜ್ಞೆಗಳನ್ನು ಉಲ್ಲಂಘಿಸಿದ ಕಡೆ ಲಾಠಿ ಏಟುಗಳೂ ಬಿದ್ದುವು. ಕಮಿಷನ್ನು ಲಕ್ನೋಕ್ಕೆ ಬಂದಿತು. ಅಲ್ಲೂ ಮೆರವಣಿಗೆಗಳು ನಿಷೇಧವಾಗಿದ್ದುವು. ಕಮಿಷನ್ ಬರುವ ಹಿಂದಿನ ದಿನ ನೆಹರೂರವರು ಹದಿನಾರು ಸ್ವಯಂ ಸೇವಕರ ನಾಯಕತ್ವವನ್ನು ವಹಿಸಿ ಮೆರವಣಿಗೆ ಹೊರಟರು. ಸ್ವಲ್ಪ

ಹೊತ್ತಿನಲ್ಲೇ ಮೂವತ್ತು ಅಶ್ವಾರೋಹಿ ಪೋಲೀಸರು ಅವರನ್ನು ಮುತ್ತಿದರು. ಪೋಲೀಸರು ದೊಡ್ಡ ದೊಣ್ಣೆಗಳಿಂದ ಎಲ್ಲರನ್ನೂ ಬಡಿದರು. ಸ್ವಯಂ ಸೇವಕರು ಚದುರಿದರು. ಅಕ್ಕಪಕ್ಕದ ಅಂಗಡಿಗಳಲ್ಲಿ ಅವಿತುಕೊಂಡರು. ಪೋಲೀಸರು ಅಲ್ಲಿಗೂ ನುಗ್ಗಿ ಅವರನ್ನು ಸಾಯುವಂತೆ ಹೊಡೆದರು. ಈ ಮಧ್ಯೆ ನೆಹರೂರವರು ಮಧ್ಯರಸ್ತೆಯಲ್ಲಿ ಒಬ್ಬರೇ ಸಿಕ್ಕಿಕೊಂಡರು. ಒಬ್ಬ ಅಶ್ವಾರೋಹಿ ಪೋಲೀಸನು ದೊಣ್ಣೆಯನ್ನು ತಿರುವುತ್ತಾ ಅವರ ಕಡೆ ಧಾವಿಸಿ ಬಂದನು. ನೆಹರೂರವರು ಧೈರ್ಯವಾಗಿ ನಿಂತು 'ಆಗಬಹುದು, ನಡೆಯಲಿ' ಎಂದು ಹೇಳಿದರು. ಪೋಲೀಸಿನವನು ಲಟ್ ಲಟ್ ಎಂದು ಬಲವಾದ ಎರಡು ಏಟುಗಳನ್ನು ಬೆನ್ನಿನಮೇಲೆ ಕೊಟ್ಟನು. ನೆಹರೂರವರಿಗೆ ಜ್ಞಾನ ತಪ್ಪಿದಹಾಗಾಯಿತು. ಮೈಯೆಲ್ಲಾ ನಡುಗಿಹೋಯಿತು. ಆದರೂ ಹಾಗೇ ನೆಟ್ಟಗೆ ನಿಂತಿದ್ದರು. ಪೋಲೀಸಿನವರು ಅವರನ್ನು ಮುಂದೆಹೋಗಲು ಬಿಡದೆ ಎದುರಾಗಿ ನಿಂತರು. ತಲೆಯೊಡೆದು ರಕ್ತಸುರಿಯುತ್ತಿದ್ದ ಸ್ವಯಂ ಸೇವಕರು ನೆಹರೂರವರು ಒಬ್ಬರೇ ಹಾಗೆ ರಸ್ತೆಯ ಮಧ್ಯದಲ್ಲಿ ನಿಂತಿರುವುದನ್ನು ಕಂಡು ತಾವೂ ಅವರೊಡನೆ ಬಂದು ಸೇರಿದರು. ಜೊತೆಗೆ ಹಾಗೇ ಏಟುತಿಂದಿದ್ದ ಗೋವಿಂದವಲ್ಲಭ ಪಂತರ ತಂಡವೂ ಅಲ್ಲಿಗೆ ಬಂದು ಸೇರಿತು. ಪೋಲೀಸರ ಎದುರಿನಲ್ಲಿ ಎಲ್ಲರೂ ಕುಳಿತುಬಿಟ್ಟರು. ಹಾಗೇ ಒಂದು ಘಂಟೆಯಹೊತ್ತು ಕಳೆದಮೇಲೆ ಕತ್ತಲಾಯಿತು. ಈ ಸುದ್ದಿ ಹರಡಿ ಒಂದು ಕಡೆ ಸರಕಾರೀ ಅಧಿಕಾರಿಗಳೂ, ಇನ್ನೊಂದು ಕಡೆ ಊರಿನ ಜನರೂ ತಂಡ ತಂಡವಾಗಿ ಬಂದು ಸೇರಿದರು. ಕೊನೆಗೆ ನೆಹರೂರವರ ಸ್ವಯಂ ಸೇವಕ ತಂಡ ಮೆರವಣಿಗೆ ಹೋಗಬೇಕೆಂದುಕೊಂಡಿದ್ದ ಮಾರ್ಗದಲ್ಲೇ ಮೆರವಣಿಗೆಹೋಯಿತು. ಅದೇ ಪೋಲೀಸರು ಮೈಗಾವಲಿನವರಂತೆ ಮುಂದೆ ಹೊರಟರು. ಮೆರವಣಿಗೆ ಯಶಸ್ವಿಯಾಗಿ ಮುಕ್ತಾಯವಾಯಿತು. ಅಷ್ಟೇ ಅಲ್ಲ. ಮರುದಿನ ನಡೆಯಬೇಕಾಗಿದ್ದ ಲಾಠಿ ಏಟಿಗೆ ನೆಹರೂರವರಿಗೆ ಒಂದು ಪೂರ್ವರಂಗ ಸಿದ್ಧತೆಯಾದಂತೆಯೂ ಆಯಿತು.

ಮರುದಿನ ಸೈಮನ್ ಕಮಿಷನ್ ಬಂದಿತು. ಕಾಂಗ್ರೆಸ್ ಕಚೇರಿಯಿಂದ ದೊಡ್ಡ ಮೆರವಣಿಗೆ ಹೊರಟಿತು. ಸಾವಿರಾರು ಜನ ಹೊರಟಿದ್ದರು. ಸ್ಟೇಷನ್ ಸಮೀಪಿಸುತ್ತಲೇ ಪೋಲೀಸರು ಮೆರವಣಿಗೆಯನ್ನು ತಡೆದರು.

ಸ್ವಲ್ಪ ಹೊತ್ತಿನಮೇಲೆ ಕಾಲುದಳ ಅಶ್ವದಳದ ಪೋಲೀಸರೂ ಸೈನಿಕರೂ ಮೇಲೆ ನುಗ್ಗಿಬಂದರು ಮತ್ತು ಲಾಠಿ ಮತ್ತು ದೊಣ್ಣೆಗಳಿಂದ ಎಲ್ಲರನ್ನೂ ಬಡಿದರು; ಬಲವಾಗಿ ಬಡಿದರು. ನೆಹರೂರವರಿಗೂ ಬಲವಾದ ಏಟುಗಳು ಬಿದ್ದುವು. ಆಗಿನ ಅವರ ಮನಸ್ಸಿನ ಹೊಯ್ದಾಟವನ್ನು ನೆಹರೂರವರು ಹೀಗೆ ಬರೆದಿದ್ದಾರೆ. "ಅದೊಂದು ಅದ್ಭುತವಾದ ಮರ್ಧನವಾಗಿತ್ತು. ಹಿಂದಿನ ಸಾಯಂಕಾಲ ನನಗಿದ್ದ ತಿಳಿನೋಟವು ಈಗ ನನ್ನ ಕೈಬಿಟ್ಟಿತು. ನಾನಿದ್ದ ಸ್ಥಳದಲ್ಲಿಯೇ ಇರಬೇಕು; ಸಗ್ಗಲೂಬಾರದು, ಹಿಂದಿರುಗಲೂ ಬಾರದು ಎಂಬುದು ಮಾತ್ರ ನನಗೆ ತಿಳಿದಿತ್ತು. ಏಟುಗಳ ದೆಶೆಯಿಂದ ನಾನು ಮುಂಗಾಣದವನಂತಾದೆ. ಕೆಲವುವೇಳೆ ನೊಂದುಮುನಿಸಿಗೆ ಒಳಗಾಗುತ್ತಿದ್ದೆ. ಮುಯ್ಯಿಗೆ ಮುಯ್ಯಾಗಿ ಹಿಂದಿರುಗಿ ಹೊಡೆಯಲೇ ಎನಿಸುತ್ತಿತ್ತು. ನನ್ನೆದುರಿಗಿದ್ದ ಪೋಲೀಸು ಅಧಿಕಾರಿಯನ್ನು ಕೆಳಕ್ಕುರುಳಿಸಿ ನಾನೇ ಆ ಕುದುರೆಯನ್ನೇರಿಕೊಳ್ಳುವುದು ತುಂಬಾ ಸುಲಭವಾಗಿತ್ತು. ಆದರೆ ನನ್ನ ಜೀವನದಲ್ಲಿ ದೀರ್ಘಶಿಕ್ಷಣವೂ ಶಿಸ್ತೂ ಮೇಲ್ಗೈಯಾಗಿದ್ದುದರಿಂದ ಮುಖವನ್ನು ಏಟನಿಂದ ರಕ್ಷಿಸಿಕೊಳ್ಳುವುದಕ್ಕಲ್ಲದೆ ಬೇರೆ ವಿಧವಾಗಿ ಕೈ ಎತ್ತಲೇ ಇಲ್ಲ. ನಾನೇನಾದರೂ ದುಡುಕಿ ಪೋಲೀಸರಮೇಲೆ ಬಿದ್ದಿದ್ದರೆ ತತ್ಪರಿಣಾಮವು ಘೋರ ರುದ್ರಪ್ರಕರಣವಾಗುತ್ತಿತ್ತೆಂದೂ, ನಮ್ಮಲ್ಲಿ ಹಲವಾರು ಜನರು ಗುಂಡಿನೇಟಿಗೆ ಸಿಕ್ಕಿ ಸಾಯುತ್ತಿದ್ದರೆಂಬುದನ್ನೂ ಅರಿತಿದ್ದೆ. ಕ್ಷಣಗಳು ಯುಗಗಳಾಗಿ ತೋರಿದುವು. ಬಳಿಕ ನಮ್ಮ ಪಂಕ್ತಿಯು ಒಡೆಯದೆಯೇ ಮೆಲ್ಲನೆ ಹೆಜ್ಜೆ ಹೆಜ್ಜೆಯಾಗಿ ಹಿಂದೆ ಸರಿಯಿತು. ಇದರಿಂದ ನಾನು ಸ್ವಲ್ಪಮಟ್ಟಿಗೆ ಒಂಟಿಯಾಗಿ ಅಕ್ಕಪಕ್ಕಗಳ ಪೋಲೀಸರ ಜಂಜಡಕ್ಕೆ ಸಿಕ್ಕುವಂತಾದೆ. ಏಟಿನಮೇಲೆ ಏಟುಗಳು ಬಿದ್ದುವು. ಇದ್ದಕ್ಕಿದ್ದಹಾಗೇ ಹಿಂದುಗಡೆಯಿಂದ ಯಾರೋ ನನ್ನನ್ನು ಅನಾಮತ್ತಾಗಿ ಎತ್ತಿಕೊಂಡು ಹೋಗಿ ಜಿಗುಪ್ಸೆ ಹುಟ್ಟಿಸಿದರು. ನನ್ನ ಯುವಕ ಸಹೋದ್ಯೋಗಿಗಳಲ್ಲಿ ಕೆಲವರು ನನ್ನಮೇಲೆ ಮಾರಕಪ್ರಯತ್ನ ನಡೆಯುತ್ತಿದೆಯೆಂದು ಭಾವಿಸಿ, ನನ್ನನ್ನು ರಕ್ಷಿಸಲು ಈ ಮಾರ್ಗ ಹಿಡಿದರು." ಸ್ವಲ್ಪಹೊತ್ತಿನೊಳಗಾಗಿ ಮೆರವಣಿಗೆಯ ಸ್ವಯಂಸೇವಕರು ಪುನಃ ಸಾಲುಕಟ್ಟಿಕೊಂಡರು. ಆ ಸಮಯದಲ್ಲಿ ಸೈಮನ್ ಕಮಿಷನ್ನಿನವರು ಅರ್ಧಮೈಲಿ ದೂರದಲ್ಲಿ

ಗುಟ್ಟಾಗಿ ಸರಿದುಹೋದರು. ಹಾಗೆ ಗುಟ್ಟಾಗಿ ಹೋದರೂ ಅವರು ಕರಿ ಬಾವುಟಗಳ ಪ್ರದರ್ಶನಕಾರರಿಂದ ಪಾರಾಗಲಿಲ್ಲ. ಸ್ವಲ್ಪಕಾಲದಮೇಲೆ ನೆಹರೂರವರು ತುಂಬು ಮೆರವಣಿಗೆಯಲ್ಲಿ ಕಾಂಗ್ರೆಸ್ ಕಚೇರಿಗೆ ಹಿಂದಿರುಗಿದರು. ಅಂದಿನ ಲಾಠಿ ಏಟುಗಳಿಂದ ನೆಹರೂರವರ ಪ್ರತಿಯೊಂದು ಅಂಗಾಂಗವೂ ನೋಯುತ್ತಿತ್ತು. ಮೈಮೇಲೆಲ್ಲಾ ಮೂಗುಪೆಟ್ಟುಗಳೂ, ಹಸುರುಗಟ್ಟಿದ ಬಾಸುಂಡೆಗಳೂ ತುಂಬಿಹೋಗಿದ್ದುವು. ಆ ನೋವಿನ ಬಾಧೆಯಿಂದ ಪಾರಾಗಬೇಕಾದರೆ ತಿಂಗಳಮೇಲೆ ಹಿಡಿಯಿತು.

ಲಾಠಿ ಏಟಿನ ಬಾಧೆಯಿಂದ ಚೇತರಿಸಿಕೊಂಡಮೇಲೆ ಕಾಂಗ್ರೆಸ್ ಸಂಸ್ಥೆಯನ್ನು ಬಲಪಡಿಸಬೇಕೆಂದು ನೆಹರೂರವರು ಪ್ರಯತ್ನಪಟ್ಟರು. ಕಾಂಗ್ರೆಸ್ ಬಲಗೊಳ್ಳಬೇಕಾಗಿದ್ದರೆ ಆ ಸಂಸ್ಥೆಯ ನಾಯಕರು ಜನಸಾಮಾನ್ಯರೊಡನೆ ಸಂಪರ್ಕವನ್ನು ಬೆಳೆಸಿಕೊಳ್ಳಬೇಕೆಂದು ಗಾಂಧಿಯವರು ಹೇಳುತ್ತಿದ್ದರು. ನೆಹರೂರವರಿಗೂ ಅದು ಮನವರಿಕೆಯಾಗಿದ್ದಿತು. ಈ ಉದ್ದೇಶದಿಂದ ವಿಶೇಷವಾಗಿ ಪ್ರವಾಸಮಾಡಿ ನೂರಾರು ಸಭೆಗಳಲ್ಲಿ ಮಾತನಾಡಿದರು. ಪಂಜಾಬ್, ಮಲಬಾರ್, ದೆಹಲಿ, ಸಂಯುಕ್ತಪ್ರಾಂತಗಳ ಪ್ರಾಂತ ಸಮ್ಮೇಳನಗಳಿಗೂ, ಬೊಂಬಾಯಿ, ಬಂಗಾಳಾ ಪ್ರಾಂತಗಳ ಯುವಜನ ಸಂಸ್ಥೆ ಮತ್ತು ವಿದ್ಯಾರ್ಥಿ ಸಮ್ಮೇಳನಗಳಿಗೂ ಅಧ್ಯಕ್ಷರಾದರು. ಗ್ರಾಮಾಂತರ ಪ್ರದೇಶಗಳಿಗೆ ಆಗಾಗ ಹೋಗಿಬರುತ್ತಿದ್ದರು. ಕಾರ್ಖಾನೆ ಕೆಲಸಗಾರರ ಸಭೆಗಳಲ್ಲಿ ಮಾತನಾಡಿದರು, ರೈತರ ಸಭೆಗಳಲ್ಲಿ ಮಾತನಾಡಿದರು. ಪ್ರಾಚೀನಕಾಲದ ಗತವೈಭವ, ಪರಕೀಯರ ಆಳ್ವಿಕೆಯಿಂದ ಆಗಿರುವ ಭೌತಿಕ ಮತ್ತು ಆಧ್ಯಾತ್ಮಿಕ ನಷ್ಟಗಳು, ಜನಜಂಗುಳಿಯ ನೋವು, ಪರಕೀಯರ ನೊಗಕ್ಕೆ ಸಿಕ್ಕಿದ ನಮ್ಮವರ ಮಾನಹಾನಿ, ನಮ್ಮ ರಾಷ್ಟ್ರೀಯ ಗೌರವಕ್ಕಾಗಿ ಇಂದು ಬಿಡುಗಡೆ ಹೊಂದಬೇಕೆಂಬ ಹಂಬಲ ಮತ್ತು ತಾಯ್ನಾಡಿಗಾಗಿ ಯಜ್ಞವೇದಿಕೆಯ ಮೇಲೆ ಜನತೆ ಮಾಡಬೇಕಾಗಿರುವ ಬಲಿದಾನ— ಇವುಗಳನ್ನು ಕುರಿತು ಮಾತನಾಡಿ, ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ ಪ್ರತಿ ಹಳ್ಳಿಯ ಪಟ್ಟಣದ ಪ್ರಜೆಗಳಲ್ಲಿಯೂ ನವಚೇತನವನ್ನುಂಟುಮಾಡಿದರು. ಇಡೀ ದೇಶದಲ್ಲೆಲ್ಲಾ ನೆಹರೂರವರ ಹೆಸರು ಮನೆಮಾತಾಯಿತು. ದೇಶದಾದ್ಯಂತ ಸ್ವಾತಂತ್ರ್ಯದಾಹವನ್ನು

ಹುಟ್ಟಿಸಿದ ಕೀರ್ತಿ ನೆಹರೂರವರದಾಯಿತು. ಕಲ್ಕತ್ತಾ ಅಧಿವೇಶನಕ್ಕೆ ಹೋಗುವ ಮೊದಲು ಬಿಹಾರಿನ ಝರಿಯಾ ಎಂಬ ಊರಲ್ಲಿ ಸೇರಿದ ಗಿರಣಿ ಕೂಲಿಕಾರ ಸಂಘಗಳ ಸಮ್ಮೇಳನ (Trade Union Congress) ದಲ್ಲಿ ಭಾಗ ವಹಿಸಿದ್ದರಿಂದ ಆ ಸಮ್ಮೇಳನವು ಮುಂದಿನ ವರ್ಷಕ್ಕೆ ನೆಹರೂರವರನ್ನೇ ಗಿರಣಿ ಕೂಲಿಕಾರರ ಸಂಘಗಳಿಗೆ ಅಧ್ಯಕ್ಷರನ್ನಾಗಿ ಆರಿಸಿತು. ಇದು ನೆಹರೂರವರಿಗೆ ಬಹು ಜನಾನುರಾಗವನ್ನು ಸಂಪಾದಿಸಿಕೊಟ್ಟಿತು. ನೆಹರೂ ರವರು ಇಂತಹ ಪ್ರಚಾರಕಾರ್ಯವನ್ನು ಕೈಕೊಂಡು ದೇಶದಾದ್ಯಂತ ಜಾಗೃತಿಯನ್ನು ಹುಟ್ಟಿಸದಿದ್ದಿದ್ದರೆ ದಂಡಿಯ ಸತ್ಯಾಗ್ರಹವಾಗಲೀ ಮುಂದಿನ ಯಾವ ಕಾಂಗ್ರೆಸ್ಸಿನ ಕಾರ್ಯಕ್ರಮವಾಗಲೀ ಮುಂದೆ ನಡೆದಂತೆ ಯಶಸ್ವಿಯಾಗುತ್ತಿರಲಿಲ್ಲ.

೧೯೨೮ ನೆಯ ಇಸವಿಯಲ್ಲಿ ಕಾಂಗ್ರೆಸ್ಸಿನ ಅಧಿವೇಶನವು ಕಲ್ಕತ್ತಾ ನಗರದಲ್ಲಿ ಸೇರಿತು. ಅದಕ್ಕೆ ಮೋತೀಲಾಲ ನೆಹರೂರವರು ಅಧ್ಯಕ್ಷ ರಾದರು. ಈ ಮೊದಲೇ ಮದರಾಸು ಅಧಿವೇಶನದಲ್ಲಿ ಗೊತ್ತಾಗಿದ್ದಂತೆ ಮೋತೀಲಾಲರೇ ಅಧ್ಯಕ್ಷರಾಗಿದ್ದ ಒಂದು ಸಮಿತಿ ಭಾರತಕ್ಕೆ ಆವಶ್ಯಕ ವಾಗುವ ಒಂದು ರಾಜ್ಯಾಂಗ ಶಾಸನವನ್ನು ತಯಾರಿಸಿತ್ತು. ಮೋತೀ ಲಾಲರು ಕಾಂಗ್ರೆಸ್ ಅಧಿವೇಶನಕ್ಕೆ ಅಧ್ಯಕ್ಷರಾದಕೂಡಲೇ ಆ ರಾಜ್ಯಾಂಗ ಶಾಸನವನ್ನು ಒಪ್ಪಬೇಕೆಂದು ಹಟ ಹಿಡಿದರು. ಆದರೆ ಆ ರಾಜ್ಯಾಂಗ ಶಾಸನದಲ್ಲಿ "ಸಾಮ್ರಾಜ್ಯಾಂತರ್ಗತ ಸ್ವತಂತ್ರಸ್ಥಾನವೇ (Dominion Status) ಭಾರತದ ಗುರಿಯೆಂದು ನಿರ್ದೇಶಿಸಲಾಗಿತ್ತು. ಜವಾಹಿರರು ಸಂಪೂರ್ಣ ಸ್ವಾತಂತ್ರ್ಯವೇ (Complete Independence) ಭಾರತದ ಗುರಿ ಯೆಂದು ವಾದಿಸಿದರು. ಇದರಿಂದ ತಂದೆ ಮಕ್ಕಳಿಗೆ ಭಿನ್ನಾಭಿಪ್ರಾಯ ವಿದ್ದಂತಾಗಿ ಕಾಂಗ್ರೆಸ್ಸಿನಲ್ಲಿ ಎರಡು ಪಂಗಡಗಳು ಹುಟ್ಟಿಕೊಳ್ಳುವ ಹಾಗಾಯಿತು. ಮೋತೀಲಾಲರು ತಮ್ಮ ಶಾಸನವನ್ನೊಪ್ಪಿಕೊಳ್ಳದಿದ್ದರೆ ರಾಜೀನಾಮೆ ಕೊಡುವುದಾಗಿ ಹೇಳಿದರು. ಕಾಂಗ್ರೆಸ್ಸು ಯಾರನ್ನೂ ದೂರ ಮಾಡಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಆದ್ದರಿಂದ ಉಭಯಪಕ್ಷಗಳವರೂ ತುಂಬಾ ಚರ್ಚೆಮಾಡಿ 'ಬ್ರಿಟಿಷ್ ಸರ್ಕಾರವು ಇನ್ನೊಂದು ವರ್ಷದೊಳ ಗಾಗಿ ಭಾರತಕ್ಕೆ ಡೊಮಿನಿಯನ್ ಸ್ಥಾನವನ್ನು ಕೊಡತಕ್ಕದ್ದು; ಹಾಗಿಲ್ಲದ

ಪಕ್ಷಕ್ಕೆ ಸಂಪೂರ್ಣ ಸ್ವಾತಂತ್ರ್ಯವೇ ಭಾರತದ ಗುರಿಯಾಗತಕ್ಕದ್ದು'— ಎಂಬ ಉಭಯಸಮ್ಮತವಾದ ನಿರ್ಣಯವನ್ನು ಅಂಗೀಕರಿಸಿದರು. ನೆಹರೂರವರ ದೂರದೃಷ್ಟಿ, ಸಂಪೂರ್ಣ ಸ್ವಾತಂತ್ರ್ಯವೇ ಆಗಬೇಕೆಂಬ ಉತ್ತಮ ಗುರಿ, ತಂದೆಯೆಂಬ ಬಾಂಧವ್ಯದ ಹಂಬಲಕ್ಕೆ ಕೂಡ ಒಳಗಾಗದೆ ದೇಶದ ಮೇಲ್ಮೆಯ ಗುರಿಗಾಗಿ ಅವರನ್ನು ಕೂಡ ಎದುರುಹಾಕಿಕೊಂಡುದು— ಇವೆಲ್ಲಾ ನೆಹರೂರವರನ್ನು ಭಾರತದ ಸುಪುತ್ರರ ಶ್ರೇಣಿಯಲ್ಲಿ ಅತ್ಯುನ್ನತ ಸ್ಥಾನದಲ್ಲಿ ಕೂಡಿಸುವುದಾಗಿದೆ.

ಬ್ರಿಟಿಷ್ ಸರ್ಕಾರ ಒಂದು ವರ್ಷದಲ್ಲಿ ಭಾರತಕ್ಕೆ ಡೊಮಿನಿಯನ್ ಸ್ಥಾನವನ್ನು ಕೊಡಬೇಕೆಂಬ ನಿರ್ಣಯವನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ೧೯೨೯ರ ಸಮ್ಮೇಳನ ಲಾಹೋರಿನಲ್ಲಿ ಸೇರಿತು. ಗಾಂಧಿಯವರೇ ಆ ಸಮ್ಮೇಳನದ ಅಧ್ಯಕ್ಷಸ್ಥಾನವನ್ನು ವಹಿಸಬೇಕೆಂದು ಪ್ರಾಂತೀಯ ಸಮಿತಿಗಳು ಅಭಿಪ್ರಾಯಪಟ್ಟಿದ್ದುವು. ಆದರೆ ಗಾಂಧಿಯವರು ಜವಾಹಿರರು ಅಧ್ಯಕ್ಷರಾಗಬೇಕೆಂದು ಸೂಚಿಸಿದರು. ಆಗ ಗಾಂಧಿಯವರು 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಜವಾಹಿರರ ವಿಷಯದಲ್ಲಿ ಹೀಗೆ ಬರೆದರು. "ಈ ಸ್ಥಾನಕ್ಕೆ ಜವಾಹಿರರ ಹೆಸರನ್ನು ಸೂಚಿಸುವ ಮೊದಲೇ ನಾನು ಅವರನ್ನು 'ಈ ಭಾರವನ್ನು ಹೊರಬಲ್ಲಿರಾ?' ಎಂದು ಕೇಳಿದ್ದೆ. 'ಹೊರಿಸಿದರೆ ಹಿಂಜರಿಯುವುದಿಲ್ಲ' ಎಂದು ಅವರು ಸಹಜವಾಗಿ ಹೇಳಿದ್ದರು. ಅವರು ಅಸದೃಶವಾದ ಧೈರ್ಯವುಳ್ಳವರು. ದೇಶಭಕ್ತಿಯಲ್ಲಿ ಅವರನ್ನು ಮೀರಿಸಬಲ್ಲವರಾರು? 'ಅವರಿಗೆ ಬಹಳ ದುಡುಕು ಮತ್ತು ಕೋಪ' ಎಂದು ಕೆಲವರು ಆಕ್ಷೇಪಿಸುತ್ತಾರೆ. ಈಗಿನ ಪರಿಸ್ಥಿತಿಯಲ್ಲಿ ಈ ಗುಣಗಳೂ ಬೇಕಾಗಿವೆ. ಯೋಧನ ಸಾಹಸವೂ ದುಡುಕೂ ಅವರಿಗಿರುವುದರ ಜೊತೆಗೆ ಮಂತ್ರಿಗಿರಬೇಕಾದ ಜಾಣತನವೂ ಇದೆ. ತನ್ನ ಸುತ್ತುಮುತ್ತಲ ಜನಗಳಿಗಿಂತ ಬಹಳ ಮುಂದುವರಿದ ಅಭಿಪ್ರಾಯವುಳ್ಳವರೆಂಬುದು ನಿಜ. ಆದರೆ ಕಾರ್ಯಕ್ಕೆ ಭಂಗವಾಗುವಷ್ಟು ತೀವ್ರವೇಗದಲ್ಲಿ ಹೋಗುವುದಿಲ್ಲ. ತಕ್ಕಷ್ಟು ನಂಬಿಕೆಯೂ ವಾಸ್ತವಿಕತೆಯೂ ಅವರಿಗಿದೆ. ಸ್ಫಟಿಕದಂತೆ ನಿರ್ಮಲವಾದ ಮನಸ್ಸುಳ್ಳವರು. ಸಂದೇಹಕ್ಕೆಡೆಯಿಲ್ಲದಷ್ಟು ಸತ್ಯಶೀಲರು. ರಾಷ್ಟ್ರವು ಅವರ ನಾಯಕತ್ವದಲ್ಲಿ ಕ್ಷೇಮವಾಗಿರುವುದು." ಗಾಂಧಿಯವರು

ಹೊಗಳುವ ಸ್ವಭಾವದವರಲ್ಲ. ಅವರಿಂದ ಒಂದು ಹೊಗಳಿಕೆಯ ಮಾತು ಬರಬೇಕಾದರೇನೇ ಆ ಮನುಷ್ಯ ಮಹಾ ಸತ್ವನಾಗಿರಬೇಕು. ಇಂತಹುದರಲ್ಲಿ ಇಷ್ಟು ಮೆಚ್ಚುಗೆಯ ಮಾತುಗಳನ್ನು ಗಾಂಧಿಯವರಿಂದ ಪಡೆಯಬೇಕಾದರೆ ಆ ಕಾಲಕ್ಕೆ ನೆಹರೂರವರು ಎಷ್ಟು ಸತ್ವಸಂಪನ್ನರಾಗಿರಬೇಕು, ಅವರ ವ್ಯಕ್ತಿತ್ವ ಎಷ್ಟು ಪರಿಣಾಮಕಾರಿಯಾಗಿ ಬೆಳೆದಿರಬೇಕು ಎಂಬುದು ವ್ಯಕ್ತ ವಾಗುತ್ತದೆ. ಗಾಂಧಿಯವರ ಸೂಚನೆಯಂತೆ ಜವಾಹಿರರು ಹಿಂದಿನ ವರ್ಷದ ಅಧ್ಯಕ್ಷರಾಗಿದ್ದ ತಂದೆ ಮೋತೀಲಾಲರವರಿಂದ ಅಧ್ಯಕ್ಷಪದವಿ ಯನ್ನು ಸ್ವೀಕರಿಸಿದರು. ೧೯೨೯ ನೆಯ ಡಿಸೆಂಬರ್ ೩೧ ರ ರಾತ್ರಿ ೧೨ ಘಂಟೆ ಹೊಡೆದು ಹೊಸವರ್ಷ ಹುಟ್ಟುತ್ತಿದ್ದ ಮುಹೂರ್ತದಲ್ಲಿ ಜವಾಹಿರರು ಸ್ವಾತಂತ್ರ್ಯ ನಿರ್ಣಯವನ್ನು ಓದಿದರು. ಅದು ಸರ್ವಾನುಮತದಿಂದ ಅಂಗೀಕೃತವಾಯಿತು. ಅದರ ಕೊನೆಯ ಎರಡು ಭಾಗಗಳು ಈ ರೀತಿ ಇವೆ.

"ಮಾನಸಿಕವಾಗಿಯೂ ಕಾಯಿದೆಬದ್ಧವಾಗಿಯೂ ಬ್ರಿಟಿಷರು ನಮ್ಮನ್ನು ನಿಶ್ಶಸ್ತ್ರರನ್ನಾಗಿ ಮಾಡಿರುವುದರಿಂದ ನಾವು ನಿರ್ವೀರ್ಯರಾಗಿ ಹೋಗಿದ್ದೇವೆ. ವಿದೇಶೀಯ ಸೈನ್ಯವನ್ನು ತಂದು ನಮ್ಮಲ್ಲಿಟ್ಟಿರುವುದರಿಂದ, ನಮ್ಮಲ್ಲಿರುವ ಪ್ರತಿರೋಧ ಸಾಮರ್ಥ್ಯವನ್ನೆಲ್ಲಾ ಧ್ವಂಸಮಾಡುವುದಕ್ಕೇ ಆ ಸೈನ್ಯವನ್ನು ಉಪಯೋಗಿಸುತ್ತಿರುವುದರಿಂದ, ನಮ್ಮನ್ನು ನಾವು ಕಾಪಾಡಿ ಕೊಳ್ಳಲಾರೆವು. ಪರದೇಶದವರು ಬಂದು ಮೇಲೆ ಬಿದ್ದರೆ ನಮ್ಮನ್ನು ನಾವು ಸಂರಕ್ಷಿಸಿಕೊಳ್ಳಲಾರೆವು; ಕಳ್ಳರು, ದರೋಡೆಕಾರರು, ತುಂಟರು ಬಂದು ಮೇಲೆ ಬಿದ್ದರೆ ನಮ್ಮ ಮನೆ ಮಠಗಳನ್ನೂ ಕುಟುಂಬಗಳನ್ನೂ ನಾವು ರಕ್ಷಿಸಿ ಕೊಳ್ಳಲಾರೆವು ಎನ್ನುವಮಟ್ಟಿಗಾಗಿದೆ."

"ನಮ್ಮ ದೇಶಕ್ಕೆ ಹೀಗೆ ನಾಲ್ಕು ವಿಧವಾಗಿ ದ್ರೋಹಮಾಡಿರುವ ಸರ್ಕಾರಕ್ಕೆ ತಲೆಬಾಗಿ ನಡೆಯುವುದು ಮನುಷ್ಯದ್ರೋಹ (ಆತ್ಮದ್ರೋಹ) ದೈವದ್ರೋಹ ಎಂದು ನಂಬಿದ್ದೇವೆ. ಇಷ್ಟಾದರೂ ನಮ್ಮ ಸ್ವಾತಂತ್ರ್ಯ ವನ್ನು ಸಾಧಿಸುವ ಸರಿಯಾದ ಮಾರ್ಗವು ಹಿಂಸೆಯಲ್ಲ ಎಂದೂ ಅರಿತಿದ್ದೇವೆ. ಅದರಿಂದ ನಾವು ನಮ್ಮ ಕೈಲಾದಮಟ್ಟಿಗೂ ಬ್ರಿಟಿಷ್ ಸರ್ಕಾರದೊಡನೆ ಮನಃಪೂರ್ವಕವಾಗಿ ಸಹಕರಿಸುವುದನ್ನು ಬಿಟ್ಟು ನಾವು ಸ್ವಾತಂತ್ರ್ಯವನ್ನು ಪಡೆಯಲು ಸಿದ್ಧರಾಗೋಣ. ಕಾಯಿದೆಭಂಗಪೂರ್ವಕವಾಗಿ ಬ್ರಿಟಿಷ್

ಸರ್ಕಾರದೊಡನೆ ಅಸಹಕಾರಮಾಡಲು ಸಿದ್ಧರಾಗೋಣ. ನಾವು ನಮ್ಮ ಸಹಾಯವನ್ನು ಕೊಡದೆ ನಮ್ಮ ಪಾಡಿಗೆ ನಾವು ಕುಳಿತರೆ, ನಮ್ಮನ್ನು ರೇಗಿಸಿದರೂ ನಾವು ರೇಗದೆ, ಹಿಂಸೆಯನ್ನು ಅವಲಂಬಿಸದೆ, ನಾವು ಕಂದಾಯ ಕೊಡುವುದನ್ನು ತಿರಸ್ಕರಿಸಿದರೆ, ಈ ರಾಕ್ಷಸ ಸರ್ಕಾರವು ಕೊನೆಗಾಣುವುದೆಂದು ಮನಗಂಡಿದ್ದೇವೆ. ಅದರಿಂದ ಕಾಂಗ್ರೆಸ್ ಆಗಾಗ ಪೂರ್ಣ ಸ್ವರಾಜ್ಯಸ್ಥಾಪನೆಯ ಉದ್ದೇಶದಿಂದ ಹೊರಡಿಸುವ ನಿಯಮಗಳನ್ನು ಪಾಲಿಸುವೆವೆಂದು ತ್ರಿಕರಣಶುದ್ಧವಾಗಿ ಶಪಥಮಾಡಿಕೊಂಡಿದ್ದೇವೆ.''

ಜವಾಹಿರಲಾಲ ನೆಹರೂರವರು ಕಾಂಗ್ರೆಸ್ ಅಧ್ಯಕ್ಷರಾದಕೂಡಲೇ ಇಂತಹ ಪ್ರತಿಜ್ಞೆ ಹೊರಬಿದ್ದುದು ತುಂಬಾ ಮುಖ್ಯವಾದ ವಿಷಯ; ಯಾವ ಪ್ರಯತ್ನವನ್ನೂ ಅವರು ತಡೆಯಿಲ್ಲದೆ ಕಾರ್ಯರೂಪಕ್ಕೆ ತರುವವರೆಂಬುದರ ಕುರುಹು ಅದು. ಕಾಂಗ್ರೆಸ್ ಅಧ್ಯಕ್ಷರಾಗಿ ಚುನಾಯಿತರಾದುದರಿಂದ ವಿಶೇಷ ಜನಪ್ರಿಯತೆಯು ದೊರಕಿತು. ವಿದ್ಯಾವಂತರೂ ಅವರನ್ನು ಮೆಚ್ಚಿಕೊಂಡರು. ಅವರನ್ನು ಕುರಿತು ಹಾಡುಗಳನ್ನು ಕಟ್ಟಿದರು. ಅಸಾಧ್ಯವಾದ ಮತ್ತು ನಗೆಗೀಡಾದ ಕಟ್ಟುಕತೆಗಳೂ ಹುಟ್ಟಿಕೊಂಡುವು. ಸಾರ್ವಜನಿಕ ಸಭೆಗಳು, ಪೌರಸಭೆಗಳು ಮುಂತಾದ ಅನೇಕ ಸಂಸ್ಥೆಗಳ ಸ್ವಾಗತ ಬಿನ್ನವತ್ತಳೆಗಳೂ ಮೆರವಣಿಗೆಗಳೂ ಹಿಂದೆಂದೂ ಯಾರಿಗೂ ಇಲ್ಲದಷ್ಟು ವಿಶೇಷ ಸಂಖ್ಯೆಯಲ್ಲಿ ನಡೆದುವು. ಆ ಬಿನ್ನವತ್ತಳೆಗಳಲ್ಲಿ ಹೇಳಲಾಗುತ್ತಿದ್ದ ಆಣಿಮುತ್ತಿನ ಮಾತುಗಳು ಬಿರುದುಗಳಿಂದ ಅವರ ಹೆಂಡತಿಯೂ ತಂಗಿಯರೂ ಅವರನ್ನು ಗೇಲಿಮಾಡುತ್ತಿದ್ದರು. ಆ ಸತ್ಕಾರ ಸಮಾರಂಭಗಳು ಎಂತಹ ಮನುಷ್ಯನನ್ನಾದರೂ ಬುದ್ಧಿಗೆಡಿಸಿ ಅಹಂಕಾರದ ಮುದ್ದೆಯಾಗುವಂತೆ ಮಾಡುವಂತಹುದು. ಆದರೆ ಇಂಥವುಗಳಿಂದ ನೆಹರೂರವರು ತಮ್ಮ ಮನಸ್ಸಿನ ಸಮತೆಯನ್ನು ಕಳೆದುಕೊಳ್ಳಲಿಲ್ಲ. ತುಂಬಾ ಸಂಯಮಿಗಳಾಗಿದ್ದು ಸ್ವಾತಂತ್ರ್ಯದ ಹೋರಾಟದ ಕಡೆಗೆ ಸಮಸ್ತ ಶಕ್ತಿಯನ್ನೂ ವಿನಿಯೋಗಿಸಿದರು.

೧೯೩೦ ನೇ ಜನವರಿ ೨೦ ನೇ ತಾರೀಖು ಸ್ವಾತಂತ್ರ್ಯ ದಿನಾಚರಣೆ ಮಾಡಬೇಕೆಂದು ಜವಾಹಿರರು ದೇಶಕ್ಕೆ ಸೂಚನೆ ಕೊಟ್ಟರು. ಸಭೆಗಳನ್ನು ಸೇರಿಸಿ ಪ್ರತಿ ಪ್ರಜೆಯೂ ಸ್ವಾತಂತ್ರ್ಯ ಪ್ರಮಾಣವಚನವನ್ನು ಸ್ವೀಕರಿಸ

ಬೇಕೆಂದು ಸಾರಿದರು. ಜನರ ಉತ್ಸಾಹವು ಅಗಾಧವಾಗಿದ್ದಿತೆಂದು ಎಲ್ಲ ಮುಖಂಡರಿಗೂ ಗೊತ್ತಾಯಿತು. ಸತ್ಯಾಗ್ರಹದ ಕಾಲವು ಸಮೀಪಿಸುತ್ತಿದೆ ಯೆಂದು ಜನಗಳಿಗೆ ಗೊತ್ತಾದಂತೆಲ್ಲಾ ಅವರಲ್ಲಿ ಹೊಸ ಉತ್ಸಾಹವೂ ಸಾಹಸಬುದ್ಧಿಯೂ ಉಂಟಾಗಿ ದೇಶವೆಲ್ಲ ಉದ್ರಿಕ್ತಭಾವದಲ್ಲಿದ್ದಿತು. ಆದರೆ ಯಾವ ಕಾನೂನು ಭಂಗಮಾಡಬೇಕೆಂಬುದೂ, ಯಾವುದರ ಭಂಗದಿಂದ ಹೆಚ್ಚು ಪರಿಣಾಮಕಾರಿಯಾಗಬಹುದೆಂಬುದೂ ಯಾರಿಗೂ ಹೊಳೆಯಲಿಲ್ಲ. ಆಗ ಗಾಂಧಿಯವರು ಮುಂದೆ ಬಂದು ಉಪ್ಪಿನ ಕಾನೂನನ್ನು ಮುರಿಯ ಬೇಕೆಂದು ಸೂಚಿಸಿದರು. ಉಪ್ಪಿನ ಕಾನೂನನ್ನು ಮುರಿಯಲು ತಮ್ಮ ವಿಧಾನವೇನೆಂಬುದನ್ನು ವಿವರಿಸಿ ಗಾಂಧಿಯವರು ತಾವೇ ಪಶ್ಚಿಮತೀರ ದಲ್ಲಿರುವ ದಂಡಿ ಎಂಬ ಉಪ್ಪಿನ ತಯಾರಿಕಾ ಕೇಂದ್ರಕ್ಕೆ ಪ್ರಯಾಣ ಬೆಳೆಸುವುದಾಗಿ ಹೇಳಿದರು. ಅದರ ಬಗ್ಗೆ ಎಲ್ಲಾ ವಿಚಾರವಿನಿಮಯ ಮಾಡಿಕೊಂಡು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಹೋದ್ಯೋಗಿಗಳು ಕೊನೆಯ ಸಿದ್ಧತೆಗಳನ್ನು ಪೂರೈಸಿ ಒಬ್ಬರನ್ನೊಬ್ಬರು ನೋಡುವುದು ಇದೇ ಕಡೆಯಬಾರಿಯೋ ಎನ್ನುವಂತೆ ಪರಸ್ಪರ ಬೀಳುಕೊಟ್ಟರು. ಗಾಂಧಿ ಯವರು ದಂಡಿಯ ಕಡೆ ಧಾವಿಸಿದಂತೆಲ್ಲಾ ಪಟ್ಟಣಗಳಲ್ಲೂ ಹಳ್ಳಿಗಳಲ್ಲೂ ಉಪ್ಪಿನ ಮಾತೇ ಮಾತಾಯಿತು. ಒಳಗಿದ್ದ ಕುಡಿಕೆ ಮಡಿಕೆಗಳೆಲ್ಲಾ ಈಚೆಗೆ ಬಂದುವು. ಜನತೆಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಗಾಂಧಿಯವರು ಈ ಹಂಚಿಕೆಯನ್ನು ಮುಂದಿಟ್ಟಾಗ ನೆಹರೂರವರೂ ಅವರ ಅನುಯಾಯಿಗಳೂ ಅದರ ಪರಿಣಾಮಗಳನ್ನು ಶಂಕಿಸಿದ್ದರು. ಆದರೆ ಉತ್ಸಾಹವು ಎಲ್ಲೆಲ್ಲೂ ಉಕ್ಕಿ ಉಪ್ಪನ್ನು ಮಾಡುವ ಕಾರ್ಯವು ಕಾಡು ಕಿಚ್ಚಿನಂತೆ ಹಬ್ಬುತ್ತಿರುವುದನ್ನು ಕಂಡು ಅವರಿಗೆ ಮುಖ ಮುರಿದಂತಾಯಿತು, ನಾಚಿಕೆಯೂ ಆಯಿತು. ಜನಜಂಗುಳಿಯ ಮೇಲೆ ಪ್ರಭಾವ ಮುದ್ರೆ ಯನ್ನೊತ್ತಿ ಸಂಘಟಿತ ಕಾರ್ಯಕ್ಕೆ ತೊಡಗುವಂತೆ ಮಾಡಬಲ್ಲ ಗಾಂಧಿ ಯವರ ಅದ್ಭುತವಾದ ಜಾಣ್ಮೆಯನ್ನು ಕಂಡು ಕಾಂಗ್ರೆಸ್ಸಿನವರು ಮಾತ್ರವಲ್ಲ, ಇಡೀ ಜನಾಂಗವೇ ಬೆಕ್ಕಸಬೆರಗಾಯಿತು.

ಆ ದಿನಗಳ ವಾತಾವರಣವು ಹೊಡೆದೆಬ್ಬಿಸುವ ಸಮಾಚಾರಗಳಿಂದ ತುಂಬಿತ್ತು. ಮೆರವಣಿಗೆಗಳು, ಲಾಠಿ ಪ್ರಯೋಗಗಳು, ಗುಂಡಿನ ಹೊಡೆತ

ಗಳು, ಪ್ರಖ್ಯಾತರ ದಸ್ತಗಿರಿಗಳ ಸ್ಮರಣಾರ್ಥ ಹರತಾಳಗಳು, ಪೆಷಾವರ್ ದಿನ, ಇತ್ಯಾದಿಗಳು, ಜೊತೆಗೆ ಪರದೇಶೀ ವಸ್ತ್ರ ಬ್ರಿಟಿಷ್ ಸರಕುಗಳ ಬಹಿಷ್ಕಾರ ಪ್ರಚಾರಗಳು — ಈ ಸುದ್ದಿಗಳು ಎಲ್ಲ ಊರುಗಳಿಂದ ಮೇಲಿಂದಮೇಲೆ ಬರುತ್ತಿದ್ದುವು. ಜನತೆಯ ಈ ಉತ್ಸಾಹ ಪ್ರೋತ್ಸಾಹ ಗಳಿಂದ ಪ್ರೇರಿತರಾಗಿ ಮೋತೀಲಾಲ ನೆಹರೂರವರು ತಮ್ಮ ವಾಸದ ಮನೆ 'ಆನಂದ ಭವನ'ವನ್ನು ಕಾಂಗ್ರೆಸ್ಸಿಗೆ ದಾನಮಾಡಿದರು. ಅದರ ಹೆಸರು 'ಆನಂದ ಭವನ'ದಿಂದ 'ಕಾಂಗ್ರೆಸ್ ಭವನ'ವೆಂದು ಬದಲಾಯಿಸಿತು. ತಮ್ಮ ಸಂಸಾರವನ್ನೇ ಕಾಂಗ್ರೆಸ್ಸಿಗೆ ಅರ್ಪಿಸಿದ್ದ ಮೋತೀಲಾಲರು ತಮ್ಮ ವಾಸಸ್ಥಾನವನ್ನೂ ಕಾಂಗ್ರೆಸ್ಸಿಗೆ ದಾನಮಾಡಿದುದ ರಿಂದ ತಮ್ಮ ಬಾಳುವೆಯನ್ನೇ ಕಾಂಗ್ರೆಸ್ಸಿಗೆ ಅರ್ಪಿಸಿದಂತಾಯಿತು. ಸಮ್ಮೇಳನವೊಂದಕ್ಕೆ ಹೋಗಬೇಕೆಂದು ರಾಯಪುರದ ರೈಲು ಹತ್ತುತ್ತಿರು ವಾಗ ಏಪ್ರಿಲ್ ೧೪ನೆಯ ತಾರೀಖಿನ ದಿನ ನೆಹರೂರವರು ದಸ್ತಗಿರಿ ಯಾದರು. ಆ ದಿನವೇ ವಿಚಾರಣೆ ನಡೆದು ಉಪ್ಪಿನ ಕಾನೂನುರೀತ್ಯಾ ಆರು ತಿಂಗಳ ಶಿಕ್ಷೆಯಾಯಿತು. ಹೀಗಾಗುವುದೆಂದು ಮೊದಲೇ ಯೋಚಿಸಿ ನೆಹರೂರವರು ಗಾಂಧಿಯವರನ್ನು ತಮ್ಮ ಮೊದಲನೇ ಉತ್ತರಾಧಿಕಾರಿ ಯನ್ನಾಗಿಯೂ, ಮೋತೀಲಾಲರನ್ನು ಎರಡನೆಯ ಉತ್ತರಾಧಿಕಾರಿಯನ್ನಾ ಗಿಯೂ ನೇಮಿಸಿದ್ದರು. ಗಾಂಧಿಯವರು ಅಧಿಕಾರವನ್ನು ತೆಗೆದುಕೊಳ್ಳ ದಿರಲು ಮೋತೀಲಾಲರೇ—ಮೈಯಲ್ಲಿ ಆರೋಗ್ಯವಿಲ್ಲದಿದ್ದರೂ—ಅಧಿಕಾರ ವನ್ನು ವಹಿಸಿ ಸ್ಫೂರ್ತಿಯಿಂದ ಚೈತ್ರಯಾತ್ರೆಗೆ ನುಗ್ಗಿದರು. ಅಷ್ಟು ಮಾತ್ರವಲ್ಲ ನೆಹರೂರವರ ತಾಯಿ, ಹೆಂಡತಿ ಮತ್ತು ತಂಗಿಯರು ಕೂಡ ಈ ಸತ್ಯಾಗ್ರಹದಲ್ಲಿ ಧುಮುಕಿದರು. ಮೇ ಐದನೆಯ ತಾರೀಖು ಗಾಂಧಿ ಯವರು ಬಂಧಿತರಾದರು. ಸತ್ಯಾಗ್ರಹವೂ ಹರತಾಳಗಳೂ ಶಾಸನಭಂಗ ಚಳುವಳಿಗಳೂ ಅಗ್ನಿಗೆ ಆಜ್ಯಾಹುತಿಯನ್ನು ಹಾಕಿದಂತೆ ದೇಶದಾದ್ಯಂತ ಹರಡಿದುವು. ಅದರ ಜ್ವಾಲೆ ಹಳ್ಳಿ ಹಳ್ಳಿಗೂ ಆವರಿಸಿತು. ಕಾಂಗ್ರೆಸ್ ಕಾರ್ಯ ನಿರ್ವಾಹಕ ಸಮಿತಿಯು ಅಕ್ರಮಕೂಟವೆಂದು ಸರ್ಕಾರ ಸಾರಿತು. ಹಂಗಾಮಿ ಅಧ್ಯಕ್ಷರೆಂದು ಮೋತೀಲಾಲರನ್ನು ಜೂನ್ ೩೦ನೇ ತಾರೀಖು ಬಂಧಿಸಲಾ ಯಿತು. ನೈನಿ ಸೆಂಟ್ರಲ್ ಸೆರೆಮನೆಯಲ್ಲಿ ತಂದೆ ಮಕ್ಕಳಿಬ್ಬರೂ ಸಂಧಿಸಿದರು.

ನೈನಿ ಸೆಂಟ್ರಲ್ ಜೈಲಿನ ಆಡಳಿತ ವೈಖರಿಯನ್ನೂ ಅಲ್ಲಿದ್ದ ಬಂದಿಗಳ ಸ್ವಭಾವ ನಡವಳಿಕೆಗಳನ್ನೂ ನೆಹರೂರವರು ತಮ್ಮ ಆತ್ಮಕತೆಯಲ್ಲಿ ವಿವರಿಸಿದ್ದಾರೆ. ನೈನಿ ಜೈಲಿನಲ್ಲಿದ್ದಾಗ ನೆಹರೂರವರ ಮನಸ್ಸನ್ನು ಸೆಳೆದ ವಿಷಯವೆಂದರೆ ಹೆಂಗಸರು ತಂಡೋಪತಂಡವಾಗಿ ಸತ್ಯಾಗ್ರಹದಲ್ಲಿ ಭಾಗವಹಿಸಿದುದು ಮತ್ತು ನೆಹರೂರವರ ಸಂಸಾರವೆಲ್ಲಾ ಅದರಲ್ಲಿ ಭಾಗ ವಹಿಸಿದುದು. ಕಮಲಾ ನೆಹರೂರವರು ಅದರಲ್ಲಿ ದಸ್ತಗಿರಿಯಾಗಿ ಲಕ್ನೌ ಜೈಲನ್ನು ಸೇರಿದರು. ಆ ಬಗ್ಗೆ ನೆಹರೂರವರು ಹೀಗೆ ಹೇಳಿದ್ದಾರೆ: "ನಮ್ಮ ಜನತೆಯೂ ಅದರಲ್ಲೂ ನಮ್ಮ ಹೆಂಗಸರು ಇಡೀ ದೇಶದಲ್ಲಿ ನಡೆಸುತ್ತಿದ್ದ ಕಾರ್ಯಕ್ಕಾಗಿ ಹೆಮ್ಮೆಪಟ್ಟೆವು. ನನ್ನ ತಾಯಿ, ಹೆಂಡತಿ ಮತ್ತು ತಂಗಿಯರಿಬ್ಬರೂ ತೊಡಗಿದ್ದ ಚಲನವಲನಗಳನ್ನು ತಿಳಿದು ನನಗೆ ಬಹಳ ಸಂತೃಪ್ತಿಯುಂಟಾಯಿತು. ಇವರಿಂದ ನಾನು ದೂರವಾಗಿ ಸೆರೆಮನೆಯಲ್ಲಿದ್ದರೂ, ಇನ್ನೂ ಹತ್ತಿರ ಹತ್ತಿರವಾಗುತ್ತಿದ್ದ ನಮ್ಮ ನಮ್ಮ ನಂಟು ಮತ್ತು ಮಹಾಧ್ಯೇಯವೊಂದಕ್ಕಾಗಿ ದುಡಿಯಲು ಕಟ್ಟುಬಿದ್ದ ಗೆಳೆತನ ಇವುಗಳ ಅರಿವುಂಟಾಯಿತು. ನಮ್ಮ ಕುಟುಂಬವು ದೊಡ್ಡದೊಂದು ಕುಟುಂಬದಲ್ಲಿ ಲೀನವಾಗುತ್ತಿದ್ದಂತೆಯೂ ಆದರೂ ತನ್ನ ಹಳೆಯ ಸುರಸ ಭಾವವನ್ನೂ ಸಲಿಗೆಯನ್ನೂ ಉಳಿಸಿಕೊಂಡಂತೆಯೂ ತೋರುತ್ತಿತ್ತು. ಕಮಲಳ ಕಾರ್ಯದಿಂದ ನಾನು ಇನ್ನೂ ಹೆಚ್ಚು ಆಶ್ಚರ್ಯ ಮುಗ್ಧನಾದೆ. ಏಕೆಂದರೆ ಆಕೆಯ ಚೈತನ್ಯವೂ ಉತ್ಸಾಹವೂ ದೈಹಿಕ ಅನಾರೋಗ್ಯವನ್ನು ಮೀರಿದ್ದುವು. ಅವಿರತಶ್ರದ್ಧೆಯ ಚಲನವಲನಗಳಲ್ಲಿ ತೊಡಗಿದ್ದರೂ ಕೊಂಚಕಾಲದವರೆಗಾದರೂ ಆಕೆಯು ದೃಢವಾಗಿಯೇ ಇದ್ದಳು." ದೇಶದ ಸ್ವಾತಂತ್ರ್ಯಸಮರದಲ್ಲಿ ನೆಹರೂರವರು ಮಾತ್ರವಲ್ಲ ಅವರ ಇಡೀ ಕುಟುಂಬವೇ ಹೊಡೆದಾಡಿತು. ಇದು ಯಾವ ಭಾರತೀಯನಿಗಾದರೂ ಹೆಮ್ಮೆಯ ವಿಷಯವೇ. ಅವರದು ಆದರ್ಶಸಂಸಾರ. ಆ ಸಂಸಾರದ ಪ್ರತಿಯೊಂದು ವ್ಯಕ್ತಿಯೂ ದೇಶದ ಸ್ವಾತಂತ್ರ್ಯವನ್ನೇ ಗುರಿಯಾಗಿಟ್ಟುಕೊಂಡು ಒಂದೇ ಆದರ್ಶಸಾಧನೆಗಾಗಿ ಜೀವನವನ್ನು ಮುಡಿಪಾಗಿಟ್ಟಿತು.

ಮೋತೀಲಾಲರ ಆರೋಗ್ಯವು ದಿನ ದಿನಕ್ಕೆ ಕೆಡುತ್ತಿತ್ತು. ಸೆಪ್ಟೆಂಬರ್ ೮ ನೇ ತಾರೀಖಿನ ದಿನ ಅವರ ಬಿಡುಗಡೆ ಆಯಿತು. ಅಕ್ಟೋಬರ್ ೧೧ ನೇ

ತಾರೀಖು ನೆಹರೂರವರ ಬಿಡುಗಡೆಯಾಯಿತು. ಮೋತೀಲಾಲರು ಮುಸ್ಸೂರಿಯಲ್ಲಿದ್ದರು. ಮುಸ್ಸೂರಿಗೆ ಹೋಗುವ ದಾರಿಯಲ್ಲಿ ಸಹೋದ್ಯೋಗಿಗಳೊಡನೆ ನೆಹರೂರವರು ಚರ್ಚಿಸಿ ಕರನಿರಾಕರಣೆಯ ಚಳುವಳಿಯನ್ನು ಪ್ರಾರಂಭಿಸಬೇಕೆಂದು ನಿರ್ಧರಿಸಿದರು. ಆಮೇಲೆ ತಂದೆಯನ್ನು ಕಂಡರು. ನಾಲ್ಕು ದಿನ ಮಾತ್ರ ತಂದೆಯೊಡನಿದ್ದು ೧೯ನೆಯ ತಾರೀಖು ಅಲಹಾಬಾದಿನಲ್ಲಿ ನಡೆಯಬೇಕೆಂದು ಗೊತ್ತಾಗಿದ್ದ ರೈತ ಸಮ್ಮೇಳನದ ಹೊತ್ತಿಗೆ ಅಲ್ಲಿರಬೇಕೆಂದು ೧೭ನೆಯ ತಾರೀಖು ಮುಸ್ಸೂರಿಯಿಂದ ಹೊರಟರು. ರೈತ ಸಭೆಗಳಲ್ಲಿ ಮಾತನಾಡಿದರು. ಪೋಲೀಸು ವಾರಂಟು ಅವರನ್ನು ಅಟ್ಟಿಸಿಕೊಂಡೇ ಬರುತ್ತಿತ್ತು. ೧೪೪ನೇ ನಿಯಮವನ್ನು ಮುರಿದರೆಂದು ೧೯ನೆಯ ತಾರೀಖೇ ನೆಹರೂರವರು ಪುನರ್ಬಂಧಿತರಾಗಿ ನೈನಿ ಸೆರೆಮನೆಯನ್ನು ಹೊಕ್ಕರು. ಅವರ ಮೇಲೆ ಅನೇಕ ಆರೋಪಗಳನ್ನು ಹೊರಿಸಿದ್ದರು. ಅವೆಲ್ಲವುಗಳಿಂದ ಒಟ್ಟಿಗೆ ಎರಡು ವರ್ಷಗಳ ಸಶ್ರಮ ಶಿಕ್ಷೆ ಮತ್ತು ಜುಲ್ಮಾನೆ ಕೊಡಲು ತಪ್ಪಿದರೆ ಮತ್ತೈದು ತಿಂಗಳ ಸೆರೆಮನೆವಾಸ—ಎಂದು ಶಿಕ್ಷೆ ವಿಧಿಸಲಾಯಿತು. ಈ ಸಂಗತಿಯನ್ನು ಕೇಳಿ ಮೋತಿಲಾಲರ ಆರೋಗ್ಯ ಇನ್ನೂ ಕೆಟ್ಟಿತು. ಕರನಿರಾಕರಣೆಯ ಚಳುವಳಿ ಹೆಚ್ಚಾಗಿ ನೂರಾರು ಸಾವಿರಾರು ಮಂದಿ ಜೈಲು ಸೇರುವಂತಾಯಿತು. ಅವರಲ್ಲಿ ಕೆಲವರಿಗೆ ಛಡಿ ಶಿಕ್ಷೆ ವಿಧಿಸಿದ್ದರಿಂದ ನೆಹರೂರವರು ಪ್ರತಿಭಟಿಸಿ ಅವರ ಸಹಾನುಭೂತಿಗಾಗಿ ಮೂರು ದಿವಸಗಳ ಉಪವಾಸ ವ್ರತವನ್ನು ಮಾಡಿದರು. ಈ ಮಧ್ಯೆ ಕಮಲಾ ನೆಹರೂ ಕೂಡ ಬಂಧಿತರಾಗಿ ಅದೇ ಸೆರೆಮನೆಯನ್ನು ಸೇರಿದರು. ಚಕ್ರಗೋಷ್ಠಿಯ ಪ್ರಸ್ತಾಪ ಮೊದಲಾಯಿತು. ಆದರೆ ಯಾವುದೂ ನಿರ್ಧರವಾಗದೆ ಮೋತೀಲಾಲರ ಖಾಯಿಲೆ ಉಗ್ರರೂಪವನ್ನು ತಾಳಿತೆಂದು ನೆಹರು, ಕಮಲ ಮತ್ತು ರಣಜಿತ್ ಪಂಡಿತ್‌ರವರನ್ನು ಜನವರಿ ೨೬ನೆಯ ದಿನ ಬಿಡುಗಡೆಮಾಡಿದರು. ಅದೇ ದಿನ ಗಾಂಧಿಯವರೂ ಯರವಾಡ ಜೈಲಿಂದ ಬಿಡುಗಡೆಯಾದರು. ನೆಹರೂರವರು ಅಲಹಾಬಾದಿಗೆ ಹೋಗಿ ಗಾಂಧಿಯವರನ್ನು ಕರೆಸಿಕೊಂಡರು. ಹೆಂಡತಿ ಮಕ್ಕಳುಗಳೆಲ್ಲರೂ ಮೋತೀಲಾಲರ ಶುಶ್ರೂಷೆಯಲ್ಲಿ ತೊಡಗಿದರು. ಇತರ ನಗರಗಳಿಂದಲೂ ಪ್ರಾಂತಗಳಿಂದಲೂ ಅನೇಕ ಸ್ನೇಹಿತರು ಬಂದು ಅವರನ್ನು ನೋಡಿಕೊಂಡು ಹೋದರು.

ಗಾಂಧೀಜಿಯವರಾದಿಯಾಗಿ ಪ್ರಮುಖ ಕಾಂಗ್ರೆಸ್ ಕಾರ್ಯಕರ್ತರುಗಳು ಅಲ್ಲೇ ಸೇರಿದ್ದರು. ಕಾರ್ಯನಿರ್ವಾಹಕ ಸಮಿತಿ ಕೂಡ ಅಲ್ಲೇ ಸೇರಿತ್ತು. ಮೋತೀಲಾಲರು ತಮ್ಮ ಕಾಲ ಮುಗಿಯಿತೆಂದರಿತು, ಗಾಂಧೀಜಿಯವರಿಗೆ, "ನಾನು ಬೇಗ ಹೊರಟುಹೋಗುತ್ತಿದ್ದೇನೆ, ಮಹಾತ್ಮಾಜಿ. ಸ್ವರಾಜ್ಯವನ್ನು ಕಾಣಲು ನಾನು ಇಲ್ಲಿರುವುದಿಲ್ಲ. ಆದರೆ ನೀವು ಅದನ್ನು ಗೆದ್ದುಕೊಂಡಿರುವಿರೆಂಬುದನ್ನು ನಾನು ಬಲ್ಲೆ; ಬೇಗ ಅದು ನಿಮಗೆ ಲಭಿಸುವುದು"—ಎಂದು ಹೇಳಿದರು. ಖಾಯಿಲೆ ಉಲ್ಬಣವಾಗಿ ೧೯೩೧ನೆಯ ಫೆಬ್ರುವರಿ ೬ನೆಯ ತಾರೀಖಿನ ದಿನ ಮೋತೀಲಾಲರು ಪರಂಧಾಮವನ್ನೈದಿದರು. ಭಾರತದ ಒಂದು ಜ್ಯೋತಿ ಆರಿಹೋಯಿತು. ದೇಶಕ್ಕೆ ದೇಶವೇ ಅತ್ತಿತು.

ಗಾಂಧಿಯವರಿಗೂ ವೈಸರಾಯರಾಗಿದ್ದ ಇರ್ವಿನ್‌ರವರಿಗೂ ಮಾತುಕತೆಗಳು ಆಗಿಂದಾಗ್ಗೆ ನಡೆಯುತ್ತಲೇ ಇದ್ದು ೫-೩-೧೯೩೧ರಲ್ಲಿ ಅವರು ಒಂದು ಒಪ್ಪಂದಕ್ಕೆ ಬಂದರು. ಆ ಒಪ್ಪಂದದ ಪ್ರತಿಯನ್ನು ನೋಡಿದಾಗ ನೆಹರೂರವರಿಗೆ ವ್ಯಸನವಾಯಿತು. ಅದರಲ್ಲಿ 'ಕಾದಿಟ್ಟ ಹಕ್ಕು'ಗಳು ಕೆಲವಿದ್ದುವು. ಅದರ ಪ್ರಕಾರ ತಿರುಳು ಕಳೆದುಕೊಂಡ ತೆಂಗಿನ ಚಿಪ್ಪಿನಂತೆ ಆ ಒಪ್ಪಂದ ನಿಸ್ಸಾರವಾಗಿದ್ದಿತು. ಈ ಜೊಳ್ಳಿಗೆ ಭಾರತೀಯರು ಇಷ್ಟು ವರ್ಷಗಳು ಅಪ್ರತಿಮ ಧೈರ್ಯಸ್ಥೈರ್ಯಗಳಿಂದ ಹೋರಾಡಬೇಕಾಗಿತ್ತೆ? ಕೆಚ್ಚಿನ ನಡೆನುಡಿಗಳಿಗೆ ಇದೇ ಗತಿಯೇ? ಕಾಂಗ್ರೆಸ್ಸಿನ ಸ್ವಾತಂತ್ರ್ಯದ ಠರಾವು, ಜನವರಿ ೨೬ನೆಯ ತಾರೀಖಿನ ಪ್ರತಿಜ್ಞೆ, ಇವುಗಳ ಪುನರುಚ್ಚಾರಣೆ ಇದಕ್ಕೇಯೆ?— ಎಂದು ನೆಹರೂರವರು ಚಿಂತಿಸಿ ಚಿಂತಿಸಿ ಮರುಗಿದರು. ಗಾಂಧಿಯವರು ನೆಹರೂರವರ ಮನಸ್ಸಿನ ಹೊಯ್ದಾಟವನ್ನು ತಿಳಿದುಕೊಂಡು ಅವರ ದೃಷ್ಟಿಕೋಣದಿಂದ ಸಮಾಧಾನದ ಉತ್ತರ ಕೊಟ್ಟರು. ಆದರೂ ನೆಹರೂರವರು ಅವರಿಂದ ಪ್ರೀತರಾಗಲಿಲ್ಲ. ಗಾಂಧಿಯವರು ಅದನ್ನು ಒಪ್ಪಿಕೊಂಡುಬಿಟ್ಟಿದ್ದುದರಿಂದ ಅದನ್ನು ವಿರೋಧಿಸುವ ಅಥವಾ ತಡೆಗಟ್ಟುವ ಪ್ರಶ್ನೆಯೇ ಆಗ ಇರಲಿಲ್ಲ. ಆ ಸಲದ ಕಾಂಗ್ರೆಸ್ ಸಮ್ಮೇಳನ ಕರಾಚಿಯಲ್ಲಿ ನಡೆಯಿತು. ಸರದಾರ್ ವಲ್ಲಭಾಯಿ ಪಟೇಲರು ಅಧ್ಯಕ್ಷರಾದರು. ಆ ಸಮ್ಮೇಳನದಲ್ಲಿ ಗಾಂಧಿ-ಇರ್ವಿನ್ ಒಪ್ಪಂದವು ಚರ್ಚೆಗೆ

ಬಂದಿತ್ತು. ನೆಹರೂರವರ ಮನಸ್ಸನ್ನು ತಿಳಿದಿದ್ದರೂ ಗಾಂಧಿಯವರು ಬಹಿರಂಗ ಅಧಿವೇಶನದಲ್ಲಿ ಆ ಠರಾವನ್ನು ಜನತೆಯ ಮುಂದಿಡುವಂತೆ ನೆಹರೂರವರಿಗೇ ಸೂಚಿಸಿದರು. ಕಾರ್ಯನಿರ್ವಾಹಕ ಸಮಿತಿ ಆ ಒಪ್ಪಂದ ವನ್ನು ಒಪ್ಪಿತ್ತಾದ್ದರಿಂದ ನೆಹರೂರವರು ತಮಗೆ ಇಷ್ಟವಿರಲಿ ಇಲ್ಲದಿರಲಿ ಅದನ್ನು ಸಭೆಯಲ್ಲಿ ಮಂಡಿಸುವುದಕ್ಕೆ ಒಪ್ಪಿಕೊಂಡರು. ನೆಹರೂರವರು ಎಂತಹ ಶಿಸ್ತುಪಾಲಕರೆಂಬುದು ಇದರಿಂದ ವ್ಯಕ್ತವಾಗುತ್ತದೆ. ತಮ್ಮ ಭಿನ್ನಾಭಿಪ್ರಾಯಗಳೇನೇ ಇರಲಿ, ತಮ್ಮ ಮನಸ್ಸು ಅದನ್ನು ಒಪ್ಪಲಿ ಬಿಡಲಿ, ಕಾರ್ಯನಿರ್ವಾಹಕ ಸಮಿತಿ ಬಹುಮತದಿಂದ ಒಪ್ಪಿದಮೇಲೆ ಅದನ್ನು ಕಾರ್ಯಗತಮಾಡುವುದೇ ಅವರ ಕರ್ತವ್ಯವೆಂದವರು ತಿಳಿದರು. ಹಾಗೇ ತಮ್ಮ ಅಭಿಪ್ರಾಯಗಳನ್ನೂ ಸೂಚಿಸಿದರು. ಆದರೂ ಜನತೆ ಅದನ್ನು ಏತಕ್ಕೆ ಅನುಮೋದಿಸಬೇಕೆಂದು ತಿಳಿಸಿ ಠರಾವನ್ನು ಮಂಡಿಸಿದರು. ಅದು ಅಂಗೀಕಾರವಾಯಿತು. ಈ ಹೊತ್ತಿಗೆ ನೆಹರೂರವರ ಆರೋಗ್ಯವೂ ಸ್ವಲ್ಪ ಕೆಟ್ಟಿತ್ತು. ಭಾರತದ ಯಾವ ಮೂಲೆಯಲ್ಲಿದ್ದರೂ ಅವರಿಗೆ ವಿಶ್ರಾಂತಿ ಸಿಗುವುದು ಅಸಂಭವವೆಂದು ವೈದ್ಯರು ಭಾರತದಾಚೆ ಎಲ್ಲಾದರೂ ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಸೂಚಿಸಿದರು. ಅದರಂತೆ ನೆಹರೂರವರು ಸಿಲೋನಿಗೆ ಪ್ರಯಾಣ ಬೆಳೆಸಿದರು.

ನೆಹರೂರವರಂತಹ ರಾಜಕಾರಿಣಿಗಳು ಸಿಲೋನಿಗೆ ಹೋದರೇನು, ಸಿಂಗಪೂರಿಗೆ ಹೋದರೇನು. ಸಿಲೋನಿನಲ್ಲಿಯೂ ಜನರ ಭೇಟಿ ಆದರಾತಿಥ್ಯ ಗಳು ಷುರುವಾದುವು. ಈ ಮಧ್ಯೆ ಅವರು ಸಿಲೋನಿನ ಪ್ರಸಿದ್ಧ ಬೌದ್ಧ ವಿಹಾರಗಳನ್ನೊಳಗೊಂಡ ಅನುರಾಧಪುರವನ್ನು ನೋಡಿ ಬಂದರು. ಅಲ್ಲಿ ಕಂಡ ಪುರಾತನ ಉಪವಿಷ್ಟ ಬುದ್ಧ ವಿಗ್ರಹವೊಂದು ನೆಹರೂರವರ ಮನಸ್ಸಿಗೆ ಬಹುವಾಗಿ ಹಿಡಿಸಿತು. ಅದನ್ನು ತಿಳಿದ ಅವರ ಸ್ನೇಹಿತನೊಬ್ಬನು ಆ ವಿಗ್ರಹದ ಚಿತ್ರವನ್ನು ತಯಾರಿಸಿ ಕಳುಹಿಸಿದನು. ಅದು ಡೆಹರಾಡೂನ್ ಸೆರೆಮನೆಯಲ್ಲಿದ್ದಾಗ ನೆಹರೂರವರನ್ನು ತಲುಪಿತು. ಅದರ ಬಗ್ಗೆ ನೆಹರೂರವರು ಹೀಗೆ ಬರೆದಿದ್ದಾರೆ: "ಅದನ್ನು ನಾನು ನನ್ನ ಪುಟ್ಟ ಓವರಿಯಲ್ಲಿ ಮೇಜಿನಮೇಲೆ ಇಟ್ಟುಕೊಂಡಿದ್ದೆ. ನನಗೆ ಅದು ಅಚ್ಚುಮೆಚ್ಚಿನ ಒಡನಾಡಿ ಯಾಗಿಬಿಟ್ಟಿದ್ದಿತು. ಆ ಮೂರ್ತಿಯ ಶಕ್ತಿಯುತ ಶಾಂತ ಮುಖಮುದ್ರೆಯು

ನನಗೆ ಆಶ್ವಾಸನವನ್ನೂ ಶಕ್ತಿಯನ್ನೂ ನೀಡಿ, ಕುಗ್ಗಿದ ಮನಃಪರಿಸ್ಥಿತಿಯೊದಗಿದಾಗ ಅನೇಕವೇಳೆ ಅದನ್ನು ಗೆಲ್ಲುವುದಕ್ಕೆ ನೆರವಾಯಿತು. ಬುದ್ಧನು ಅನವರತವೂ ನನ್ನ ಹೃದಯಕ್ಕೆ ರಂಜಿಸಿದ್ದಾನೆ. ಈ ರಂಜನೆಯನ್ನು ನಾನು ವಿಭಜಿಸಲಾರೆ. ಆದರೆ ಇದು ಧಾರ್ಮಿಕ ರಂಜನೆಯಲ್ಲ; ಏಕೆಂದರೆ ಬೌದ್ಧಧರ್ಮದ ಸುತ್ತಲೂ ಬೆಳೆದುಬಂದಿರುವ ಸಿದ್ಧಾಂತಗಳಲ್ಲಿ ನನಗೆ ಶ್ರದ್ಧೆಯಿಲ್ಲ. ನನ್ನನ್ನು ಸೆಳೆದಿರುವುದು ಬುದ್ಧನ ವ್ಯಕ್ತಿಮಹತ್ವ, ಹಾಗೆಯೇ ಕ್ರಿಸ್ತನ ವ್ಯಕ್ತಿಮಹತ್ವವೂ ಕೂಡ ನನ್ನನ್ನು ಬಹಳವಾಗಿ ಆಕರ್ಷಿಸಿದೆ.'' ನೆಹರೂರವರು ಸಿಲೋನಿನ ಪ್ರವಾಸವನ್ನು ಮುಗಿಸಿ ಅಲ್ಲಿಂದ ತಿರುವಾಂಕೂರು, ಕೊಚ್ಚಿ, ಮಲಬಾರ್, ಮೈಸೂರು, ಹೈದರಾಬಾದ್—ಸಂಸ್ಥಾನಗಳಲ್ಲಿ ಸಂಚರಿಸಿ ಅಲ್ಲಿನ ವಿದ್ಯಮಾನಗಳು, ವಿದ್ಯಾಭ್ಯಾಸದ ಪ್ರಗತಿ, ಕೈಗಾರಿಕಾ ಪ್ರಗತಿ, ಪ್ರಜೆಗಳಿಗಿರುವ ರಾಜಕೀಯ ನಾಗರಿಕ ಸ್ವಾತಂತ್ರ್ಯ— ಮುಂತಾದ ವಿಷಯಗಳಲ್ಲಿ ಮಾಹಿತಿ ಪಡೆದುಕೊಂಡು, ಎರಡು ತಿಂಗಳ ಸುಖಪ್ರವಾಸವನ್ನು ಮುಗಿಸಿಕೊಂಡು ಪುನಃ ಬೊಂಬಾಯಿ ಸೇರಿದರು. ಈ ಪ್ರವಾಸದಿಂದ ಅವರ ಆರೋಗ್ಯವೂ ಉತ್ತಮಹೊಂದಿತು.

ಗಾಂಧಿ–ಇರ್ವಿನ್ ಒಪ್ಪಂದವೇನೋ ಆಯಿತು. ಆದರೆ ಕಾಂಗ್ರೆಸ್ಸಿನ ಮನೋಭಾವಕ್ಕೂ ಬ್ರಿಟಿಷ್ ಸರ್ಕಾರದ ಮನೋಭಾವಕ್ಕೂ ನಡುವೆ ಇದ್ದ ಅಂತರ ಅಪರಿಮಿತವಾಗಿತ್ತು. ಅಂದಿನ ಸ್ಥಿತಿಯಲ್ಲಿ ಇವೆರಡನ್ನೂ ಜೋಡಿಸುವುದು ತೀರ ಅಸಂಭವವೆಂದೇ ತೋರುತ್ತಿತ್ತು. ಸರ್ಕಾರಕ್ಕೂ ಕಾಂಗ್ರೆಸ್ಸಿಗೂ ಯಾವ ಬಗೆಯ ಒಡಂಬಡಿಕೆಯಾಗುವುದೂ ಸಾಧ್ಯವೆಂದು ಕಾಂಗ್ರೆಸ್ಸಿನಲ್ಲಿ ಯಾರೂ ಎಣಿಸಿರಲಿಲ್ಲ. ಆಶಾವಾದಿಗಳಾದ ಗಾಂಧಿಯವರು ಕೂಡ ಹೆಚ್ಚಿನದೇನನ್ನೂ ನಿರೀಕ್ಷಿಸಲಾರದೆಹೋದರು. ಆದರೂ ಅವರು ನಿರಾಶರಾಗಲಿಲ್ಲ. ಕೊನೆಯವರೆಗೂ ಪ್ರಯತ್ನಮಾಡಲು ಅವರು ದೃಢಮನಸ್ಕರಾಗಿದ್ದರು. ಗೆಲುವಾಗಲಿ ಆಗದಿರಲಿ ದೆಹಲಿಯ ಒಪ್ಪಂದವನ್ನು ಮುಂದುವರೆಸುವುದಕ್ಕಾಗಿ ಪ್ರಯತ್ನಮಾಡಿಯೇತೀರಬೇಕೆಂದು ಕಾಂಗ್ರೆಸ್ಸು ಮನಸ್ಸುಮಾಡಿತು. ಎರಡನೆಯ ಚಕ್ರಗೋಷ್ಠಿಯಲ್ಲಿ ಭಾಗವಹಿಸಲು ಅಡ್ಡಿಯಾಗಬಹುದಾದ ಎರಡು ಮುಖ್ಯಾಂಶಗಳಿದ್ದುವು. ಮೊದಲನೆಯದು, ಕಾಂಗ್ರೆಸ್ಸು ಸ್ವತಂತ್ರವಾಗಿ ತನ್ನ ಪೂರ್ಣ ಸ್ವಾತಂತ್ರ್ಯದ ವಾದವನ್ನು

ಮುಂದಿಡುವ ಹಕ್ಕು ಪಡೆದಿರಬೇಕು. ಅದಕ್ಕೆ ಅಡ್ಡಿಯಿಲ್ಲದಿದ್ದರೆ ಹೋಗ ಬಹುದು. ಎರಡನೆಯದು, ಆ ಚಕ್ರಗೋಷ್ಠಿಯಲ್ಲಿ ಕಾಂಗ್ರೆಸ್ಸಿಗೆ, ಅದರ ಪ್ರಮುಖಪ್ರಾತಿನಿಧ್ಯಕ್ಕೆ ಅಡ್ಡಿಯಾಗಬಾರದು. ಈ ಪೈಕಿ ಯಾವುದೂ ಸ್ಪಷ್ಟವಾಗಿರಲಿಲ್ಲ. ಗಾಂಧೀಜಿಯವರು ಚಕ್ರಗೋಷ್ಠಿಗೆ ಹೋಗಬೇಕೆ, ಬೇಡವೆ? ಎಂಬ ಪ್ರಶ್ನೆ ತುಂಬಾ ಚರ್ಚಿತವಾಯಿತು. ಗಾಂಧಿಯವರು ನೆಹರೂರವರನ್ನು ಸಿಮ್ಲಾಕ್ಕೆ ಕರೆಸಿಕೊಂಡು ವಿಷಯವನ್ನು ಚರ್ಚಿಸಿದರು. ಸರ್ಕಾರದ ಕುಟಿಲನೀತಿಯ ದಮನಪ್ರಯತ್ನ ಎಳ್ಳಷ್ಟೂ ಕಡಿಮೆಯಾಗಿಲ್ಲ ವೆಂದು ತಿಳಿದುಬಂದರೂ ಚರ್ಚೆಗಳಲ್ಲಿ ನಿರ್ಣಯವಾದಂತೆ ಗಾಂಧಿಯವರು ಕಾಂಗ್ರೆಸ್ಸಿನ ಏಕೈಕ ಪ್ರತಿನಿಧಿಯಾಗಿ ಇಂಗ್ಲೆಂಡಿಗೆ ಪ್ರಯಾಣಬೆಳೆಸಿದರು. ನೆಹರೂರವರು ಬೊಂಬಾಯಿಯವರೆಗೂ ಬಂದು ಅವರನ್ನು ಬೀಳ್ಕೊಟ್ಟರು. ದೇಶದಲ್ಲಿ ರಾಜಕೀಯ ಚಟುವಟಿಕೆಗಳು ತುಂಬಾ ಪ್ರಬಲವಾಗಿದ್ದರೂ ಗಾಂಧಿಯವರು ತಾವು ಬರುವವರೆಗೂ ಯಾವವಿಧವಾದ ತೀವ್ರ ಚಟುವಟಿಕೆಗಳಿಗೆ ಅವಕಾಶ ಕೊಡಕೂಡದೆಂದೂ, ದೇಶದ ಪರಿಸ್ಥಿತಿ ಶಾಂತವಾಗಿರಬೇಕೆಂದೂ ತಿಳಿಸಿದರು. ನೆಹರೂರವರು ಅದಕ್ಕೆ ಒಪ್ಪಿದರು. ಎರಡನೆಯ ಚಕ್ರಗೋಷ್ಠಿ ನಡೆಯಿತು. ರಾಜಕೀಯದಲ್ಲಿ ಚಾಣಾಕ್ಷರಾದ ಬ್ರಿಟಿಷರು ಕೋಮುವಾರುಭೂತವನ್ನು ಹೊಡೆದೆಬ್ಬಿಸಿದರು. ಸ್ವಾರ್ಥ ಪರರೂ ಅಧಿಕಾರಲಾಲಸರೂ ಆದವರಿಂದ ಆ ಸಭೆ ಕೂಡಿತ್ತು. ಗಾಂಧೀಜಿಯವರು ಶಾಂತವಾಗಿ ಕಾಂಗ್ರೆಸ್ಸಿನ ನಿಲುವನ್ನು ಗೋಷ್ಠಿಯ ಮುಂದಿಟ್ಟರು. ಮತ ಅಧಿಕಾರ ಇವುಗಳನ್ನು ಮೀರಿದ ಮುಖ್ಯವಾದ ವಿಷಯ ಭಾರತದ ಸ್ವಾತಂತ್ರ್ಯ. ಆದುದರಿಂದ ಇಂಗ್ಲಿಷಿನವರು ಎಷ್ಟರ ಮಟ್ಟಿಗೆ ಆ ಸ್ವಾತಂತ್ರ್ಯವನ್ನು ಭಾರತೀಯರಿಗೆ ಒಪ್ಪಿಸಿಕೊಡಲು ತಯಾ ರಾಗಿದ್ದಾರೋ ಅದನ್ನು ಸುತ್ತುಸುತ್ತು ಬಳಸಿದ ಮಾತುಗಳನ್ನಾಡದೆ ನೇರವಾಗಿ ಹೇಳಬೇಕೆಂದು ಕೇಳಿದರು. ಅಂತಹ ನೇರವಾದ ಪ್ರಶ್ನೆಗೆ ಉತ್ತರ ಹೇಳಲು ಬ್ರಿಟಿಷರು ಸಿದ್ಧರಾಗಿರಲಿಲ್ಲ. ಕೋಮುವಾರು ಸಮಸ್ಯೆ ಯಂತಹ ಸಮಸ್ಯೆಗಳ ಭೂತಗಳನ್ನೆಬ್ಬಿಸಿ ಮುಖ್ಯ ವಿಷಯವನ್ನು ಮರೆ ಮಾಡಿ ಗಾಂಧಿಯವರ ಮನಸ್ಸಿಗೆ ಮಂಕುಹಿಡಿಸಬೇಕೆಂದೋ ಅಪ್ರಸ್ತುತ ಪ್ರಶಂಸೆಯಿಂದ ಗೊಂದಲವನ್ನೆಬ್ಬಿಸಬೇಕೆಂದೋ ಅವರು ಯೋಚಿಸಿದ್ದರು.

ಗಾಂಧೀಜಿಯವರ ಆ ನೇರವಾದ ಪ್ರಶ್ನೆಯಿಂದ ಆ ಚಕ್ರಗೋಷ್ಠಿಯ ಸಂಧಾನವೂ ಮುರಿದುಬಿತ್ತು.

ಚಕ್ರಗೋಷ್ಠಿಯ ಸಂಧಾನ ಮುರಿದುಬೀಳುವುದೆಂದು ಮೊದಲೇ ಗೊತ್ತಿತ್ತು. ದೇಶದ ಪರಿಸ್ಥಿತಿ ದಿನದಿನಕ್ಕೆ ಹದಗೆಡುತ್ತಿದ್ದರೂ ಗಾಂಧಿಯವರು ಇಂಗ್ಲೆಂಡಿನಲ್ಲಿದ್ದಾಗ ಅವರ ಹಿರಿಮೆ ಕುಂಠಿತವಾಗಬಾರದೆಂದು, ನೆಹರೂರವರು ಗಾಂಧಿಗೆ ಮಾತುಕೊಟ್ಟಿದ್ದಹಾಗೆ, ಭಾರತದಲ್ಲಿ ಯಾವ ತೀವ್ರ ಕಾರ್ಯಕ್ರಮಗಳನ್ನೂ ನಡಸಕೂಡದೆಂದೇ ನೆಹರೂರವರು ಮನಸ್ಸು ಮಾಡಿದ್ದರು. ಗಾಂಧಿಯವರು ವಾಪಸು ಬಂದಕೂಡಲೇ ಕಾಂಗ್ರೆಸ್ಸು ತೀವ್ರವಾದ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕೆಂದೂ ನಿರ್ಧರಿಸಿತ್ತು. ಆದರೂ ಗಾಂಧಿಯವರು ವಾಪಸಾಗಿ ಬೊಂಬಾಯಿಯಲ್ಲಿ ಹಡಗಿಳಿಯುವ ಹೊತ್ತಿಗೆ ಸಂಯುಕ್ತ ಪ್ರಾಂತದಲ್ಲಿ ಕರನಿರಾಕರಣೆಯ ಚಳುವಳಿ ಪ್ರಾರಂಭವಾಗಿಬಿಟ್ಟಿತ್ತು. ಭಾರತದ ಎಲ್ಲ ಕಡೆಗಳಲ್ಲೂ ನಾನಾ ಬಗೆಯ ಸತ್ಯಾಗ್ರಹಗಳು ಪ್ರಾರಂಭವಾಗಿದ್ದುವು. ಸರ್ಕಾರದವರು ಬಹು ಕ್ರೂರವಾಗಿ ವರ್ತಿಸಿ ಈ ಅಶಾಂತಿಯನ್ನು ದಮನಮಾಡಲು ಯತ್ನಿಸಿದರು. ತೀವ್ರವಾದ ಲಾಠಿ ಪ್ರಹಾರಗಳಾದುವು. ಎಷ್ಟೋ ಗುಂಪುಗಳ ಮೇಲೆ ಗುಂಡುಹಾರಿಸಿದರು. ಪತ್ರಿಕೆಗಳಲ್ಲಿ ಅಪಪ್ರಚಾರ ಮಾಡಿದರು. ಆದರೆ ಜನ ಇದಕ್ಕೆ ಸಗ್ಗಲಿಲ್ಲ. ಇನ್ನೂ ಬೆಂಕಿಗೆ ತುಪ್ಪ ಹಾಕಿದ ಹಾಗಾಯಿತು. ಜನಗಳೂ ಕೂಡ ಒಂದೆರಡು ಕಡೆ ಹಿಂಸಾಕೃತ್ಯಗಳನ್ನು ಮಾಡಿದರು. ಚಿತ್ತಗಾಂಗಿನಲ್ಲಿ ಭಯೋತ್ಪಾದಕನೊಬ್ಬನು ಮುಸಲ್ಮಾನ್ ಪೋಲೀಸ್ ಇನ್‌ಸ್ಪೆಕ್ಟರನನ್ನು ಗುಂಡಿಕ್ಕಿ ಕೊಂದನು. ಅದು ಹಿಂದೂ ಮುಸ್ಲಿಮ್ ಹೊಡೆದಾಟಕ್ಕೆ ಎಡೆಗೊಟ್ಟಿತು. ಈ ೧೯೩೨ರ ಸತ್ಯಾಗ್ರಹವು ೧೯೩೦ರ ಸತ್ಯಾಗ್ರಹಕ್ಕಿಂತ ಹೆಚ್ಚು ವಿಸ್ತಾರವಾದ ಕ್ಷೇತ್ರದಲ್ಲಿ ಇನ್ನೂ ಹೆಚ್ಚಾದ ಶಿಸ್ತಿನಿಂದ ನಡೆಯಿತು. ಅನೇಕ ಕಡೆ ಜನಸಾಮಾನ್ಯರ ವರ್ತನೆಯಂತೂ ತುಂಬಾ ಶ್ಲಾಘ್ಯವಾಗಿದ್ದಿತು. ಕಂದಾಯ ಕೊಡದಿದ್ದುದಕ್ಕಾಗಿ ಮನೆಯ ಸ್ವತ್ತುಗಳನ್ನು ವಶಪಡಿಸಿಕೊಳ್ಳಲು ಸರ್ಕಾರೀ ಅಧಿಕಾರಿಗಳು ಮನೆಗೆ ಹೋದಾಗ, ಜನ, ಅವರನ್ನು ಶಾಂತಿಯಿಂದ ಕರೆದು ಕೂಡಿಸಿ ವೀಳಯವನ್ನು ಕೊಟ್ಟು ಅವರು ನಾಚಿಕೊಳ್ಳುವಂತೆ ಮಾಡಿದರು. ಅನೇಕ

ಹಳ್ಳಿಗಳಲ್ಲಿ ಸಾಮಾನುಗಳನ್ನು ಹರಾಜುಹಾಕಿದರೆ ಕೊಳ್ಳುವವರೇ ಇರುತ್ತಿರಲಿಲ್ಲ.

ಕಂದಾಯ ಕೊಡಬಾರದೆಂದು ನೆಹರೂರವರು ಬೋಧಿಸಿದರು. ತಮ್ಮ ಮನೆಯ ಕಂದಾಯವನ್ನು ಕೂಡ ಅವರು ಕೊಟ್ಟಿರಲಿಲ್ಲ. ಅದಕ್ಕಾಗಿ ಅವರ ಮನೆ ಜಫ್ತಿಯಾಗಿ ಅವರ ಪ್ರಿಯವಾದ ವಸ್ತುಗಳು, ಗ್ರಂಥಗಳು, ಕಾಗದ ಪತ್ರಗಳು ಇವುಗಳು ವಿಲೇವಾರಿಯಾಗುವುದೆಂದು ಅವರು ಭಾವಿಸಿದ್ದರು. ಇದಕ್ಕಿಂತ ಹೆಚ್ಚಾಗಿ ನೆಹರೂರವರ ತಾಯಿ ಆ ಮನೆಯಲ್ಲಿ ವಾಸಿಸುತ್ತಿದ್ದರು. ಅವರನ್ನು ಹೊರಗೆ ಹಾಕುವರೇನೋ ಎಂದು ವ್ಯಾಕುಲಗೊಂಡಿದ್ದರು. ಆದರೆ ಸರ್ಕಾರಕ್ಕೆ ಅಷ್ಟು ಧೈರ್ಯ ಬರಲಿಲ್ಲವೆಂದು ತೋರುತ್ತದೆ. ಕೆಲವು ಚಿಲ್ಲರೆ ರೈಲ್ವೆ ಷೇರುಗಳನ್ನು ಪತ್ತೆಹಚ್ಚಿ ಮುಟ್ಟುಗೋಲು ಹಾಕಿಕೊಂಡರು. ಈ ಮೊದಲೇ ಅವರ ಮೋಟಾರುಕಾರು ಜಫ್ತಿಯಾಗಿ ಮಾರಲಾಗಿದ್ದಿತು. ಈ ಸಮಯದಲ್ಲೇ ಡಾ॥ ಹರ್ಡೀಕರರು ಕರ್ಣಾಟಕದಲ್ಲಿ ಪ್ರವಾಸಕ್ಕಾಗಿ ನೆಹರೂರವರನ್ನು ಕರೆದೊಯ್ದರು. ಕರ್ಣಾಟಕದಲ್ಲಾದ ನೆಹರೂರವರ ಪ್ರಚಾರ ಭಾಷಣಗಳಿಂದ ಮುಂದಿನ ಅಂತ್ಯ ಸಂಗ್ರಾಮಕ್ಕೆ ಕರ್ಣಾಟಕವನ್ನು ತಯಾರುಮಾಡಿದಹಾಗಾಯಿತು. ನೆಹರೂರವರು ಕರ್ಣಾಟಕದ ಪ್ರವಾಸವನ್ನು ಮುಗಿಸಿ ಅಲಹಾಬಾದನ್ನು ಸೇರುವಹೊತ್ತಿಗೆ ಹೊಸ ಆರ್ಡಿನೆನ್ಸಿನ ಪ್ರಕಾರ ಒಂದು ಆಜ್ಞಾಪತ್ರ ಜಾರಿಯಾಯಿತು. ೨೬-೧೨-೧೯೩೧ರ ಬೆಳಗ್ಗೆ ನೆಹರೂರವರು ದಸ್ತಗಿರಿಯಾಗಿ ಮತ್ತೆ ನೈನಿ ಜೈಲನ್ನು ಪ್ರವೇಶಿಸಿದರು. ಇಷ್ಟಾದ ಎರಡು ದಿವಸಗಳಾದ ಮೇಲೆ ಗಾಂಧಿಯವರು ಬೊಂಬಾಯಿ ತಲಪಿದರು. ಅವರು ವೈಸರಾಯರನ್ನು ನೋಡಿ ಮಾತನಾಡಬೇಕೆಂದೂ ವಿದ್ಯಮಾನಗಳನ್ನು ತಿಳಿಸಬೇಕೆಂದೂ ಪ್ರಯತ್ನಪಟ್ಟರು. ಆದರೆ ಅವರಿಗೆ ವೈಸರಾಯರ ಭೇಟಿಯೇ ದೊರೆಯಲಿಲ್ಲ. ಸರ್ಕಾರವು ಎಂತಹ ಪರಿಸ್ಥಿತಿಯನ್ನಾದರೂ ಎದುರಿಸಿ ಬಲಿಹಾಕಿಬಿಡಬಲ್ಲುದಾಗಿತ್ತೆಂದೂ ಅದಕ್ಕೆ ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡಿತ್ತೆಂದೂ ಮಾತ್ರ ಉತ್ತರ ಬಂದಿತು.

೧೯೩೨ನೆಯ ಜನವರಿ ೪ನೆಯ ತಾರೀಖು ತುಂಬಾ ಪ್ರಸಿದ್ಧವಾದ ದಿನ. ಅಂದು ಗಾಂಧೀಜಿಯವರೂ ಸರ್ದಾರ್ ವಲ್ಲಭಾಯಿ ಪಟೇಲರೂ

ದಸ್ತಗಿರಿಯಾದರು. ನೆಹರೂರವರಿಗೂ ಎರಡು ವರ್ಷ ಕಠಿಣಸಜಾ ಐನೂರು ರೂಪಾಯಿ ಜುಲ್ಮಾನೆ, ಜುಲ್ಮಾನೆ ಕೊಡಲು ತಪ್ಪಿದರೆ ಇನ್ನಾರು ತಿಂಗಳು ಸಜಾ ವಿಧಿಸಲಾಯಿತು. ಆ ದಿನ ದೇಶದಾದ್ಯಂತ ಹಾಹಾಕಾರ ವಾಯಿತು. ಎಷ್ಟೋ ದುರಂತಗಳು ನಡೆದುವು. ಸರ್ಕಾರವು ತಯಾರಾಗಿ ದ್ದಂತೆ ಸತ್ಯಾಗ್ರಹ ಪರತಾಳಗಳನ್ನು ಮಾಡಿದ ಜನರಿಗೆ ಲಾಠಿ ಪ್ರಹಾರ ಗಳೂ, ಗುಂಡಿನೇಟುಗಳೂ, ಸೆರೆಮನೆವಾಸಗಳೂ ಬಹುವರ್ಷದಿಂದ ನೀಡ ಲಾದುವು. ಆದರೆ ಇದರಿಂದ ಜನ ಇನ್ನೂ ಉದ್ರೇಕಿತರಾದರೇವಿನಾ ಅವರ ಯಾವ ಚಳುವಳಿಯೂ ನಿಲ್ಲಲಿಲ್ಲ. ಸೆರೆಮನೆಗಳಲ್ಲಿ ಸ್ಥಳವಿಲ್ಲಷ್ಟು ಜನ ಬಂದು ಸೇರಿದರು. ಮೊದಲು ನೈನಿ ಜೈಲಿನಲ್ಲಿ ಆರು ವಾರಗಳನ್ನು ಕಳೆದು ನೆಹರೂ ರವರು ಬರ್ರೈಲಿ ಜೈಲಿಗೆ ವರ್ಗವಾದರು. ಅಲ್ಲಿ ಅವರಿಗೆ ಜ್ವರಬರಲು ಷುರು ವಾದ್ದರಿಂದ ಪುನಃ ಅವರನ್ನು ವರ್ಗಾಯಿಸಿ ಡೆಹರಾಡೂನ್ ಜೈಲಿನಲ್ಲಿಟ್ಟರು.

ಡೆಹರಾಡೂನ್ ಜೈಲು ಹಿಮಾಲಯಾ ತಪ್ಪಲಿನಲ್ಲಿದೆ. ಒಂದು ಕಡೆಗೆ ದಿಗಂತವನ್ನು ಮುಟ್ಟುವ ಹಿಮಾಲಯದ ಹಿಮಶಿಖರಗಳು ದೃಷ್ಟಿ ಗೋಚರವಾಗುತ್ತಾ ಎಂತಹ ಮನಸ್ಸಿಗಾದರೂ ಆಹ್ಲಾದವನ್ನು ತಂದು ಕೊಡುತ್ತವೆ. ಆ ಪ್ರಕೃತಿಸೌಂದರ್ಯದ ನಡುವೆ ಎಂತಹ ಚೇತನ ವಾದರೂ ತಪೋನಿರತವಾಗುವುದು. ನೆಹರೂರವರ ಮನಸ್ಸು ಬಾಲ್ಯ ದಿಂದಾದ ಅನುಭವಗಳು, ಓದಿದ ಪುಸ್ತಕಗಳ ವಿಷಯಗಳು, ಅವುಗಳ ಮೇಲಿನ ಚಿಂತನದಿಂದಾದ ಅಭಿಪ್ರಾಯಗಳು, ಪ್ರಪಂಚಪರ್ಯಟನದಲ್ಲಿ ಕಂಡುಕೇಳಿದ ವಿವಿಧ ದೇಶದ ಜನರ ನಡೆನುಡಿಗಳು, ಅವುಗಳು ಮನಸ್ಸಿನ ಮೇಲೆ ಮಾಡಿದ ಪರಿಣಾಮಗಳು — ಇಂಥವುಗಳನ್ನು ಹೊರಲಾರದ ಹೊರೆ ಯಂತೆ ಹೊತ್ತಿದ್ದಿತೆಂದು ತೋರುತ್ತದೆ. ಡೆಹರಾಡೂನಿನ ಜೈಲುವಾಸದ ಶಾಂತವಾತಾವರಣವು ಅಂತಹ ಶೇಖರಿಸಿದ ಭಾವಗಳನ್ನೆಲ್ಲಾ ಹೊರ ಗೆಡಹಲು ಅವಕಾಶವನ್ನು ಕೊಟ್ಟಿತು. ಅದನ್ನೇ ಅವರು ತಮ್ಮ ಮಗಳಿಗೆ 'ಪ್ರಪಂಚದ ಚರಿತ್ರೆಯ ಕೆಲವು ನೋಟಗಳು' (Glimpses of World History) ಎಂಬ ಕಾಗದಗಳಲ್ಲಿ ಬರೆದರು. ಜೈಲಿನಲ್ಲಿಯ ಬೇಸರ ವನ್ನು ಕಳೆಯಲು ಅವರು ಆ ಪತ್ರಗಳನ್ನು ಬರೆದುದಾಗಿ ಹೇಳಿಕೊಂಡರೂ ಆ ಕಾಗದಗಳು ಮಾನವ ಚರಿತ್ರೆಯನ್ನೇ ಹೇಗೆ ಹೊಸ ದೃಷ್ಟಿಯಿಂದ

ವಿವೇಚಿಸಬೇಕು ಎಂಬ ಹೊಸ ಸಿದ್ಧಾಂತವನ್ನು ಬೆಳಕಿಗೆ ಚಲ್ಲುತ್ತವೆ. ಜೈಲುವಾಸದ ಬಿಡುವುಕಾಲವನ್ನೂ ಹೀಗೆ ವಿನಿಯೋಗಿಸಿ ನೆಹರೂರವರು ತಮ್ಮ ಪಾಂಡಿತ್ಯ, ಪ್ರತಿಭೆ, ಆಳವಾದ ಅನುಭವ, ವಿವೇಚನಾಶಕ್ತಿಯನ್ನು ಮೆರೆದು ಕೇವಲ ಭರತಖಂಡಕ್ಕೆ ಮಾತ್ರವಲ್ಲ ಪ್ರಪಂಚಕ್ಕೇ ತುಂಬಾ ಉಪಕಾರಮಾಡಿದ್ದಾರೆ. ಜಗತ್ತಿನ ಉತ್ತಮ ಪುಸ್ತಕಗಳ ಶ್ರೇಣಿಯಲ್ಲಿ ಅವಕ್ಕೆ ಒಂದು ಮಹತ್ವವಾದ ಸ್ಥಾನವಿದೆ. ಡೆಹರಾಡೂನಿನ ಜೈಲಿನಲ್ಲಿದ್ದಾಗ ಅವರಿಗೆ ಒಡನಾಡಿಗಳಾಗಿದ್ದ ಪಕ್ಷಿಗಳು, ಕ್ರಿಮಿಕೀಟಗಳು, ಅಳಿಲ ಮರಿಗಳು, ಕೋಗಿಲೆಯ ಆರ್ತಸ್ವರ, ಕಡೆಗೆ ಕೋತಿ, ಹಾವು, ಚೇಳುಗಳ ಕಾಟದ ವಿನೋದಗಳು ಇವುಗಳನ್ನು ಆತ್ಮಕಥೆಯಲ್ಲಿ ವರ್ಣನೀಯವಾಗಿ ವಿವರಿಸಿದ್ದಾರೆ. ಪ್ರಾಣಿವರ್ಗದಲ್ಲಿ ಅವರಿಗಿದ್ದ ಸ್ನೇಹವೂ, ಸಸ್ಯವರ್ಗದಲ್ಲಿದ್ದ ಆಸಕ್ತಿಯೂ, ಗಂಭೀರವಾದ ಹಿಮಗಿರಿಯ ಉನ್ನತ ಶಿಖರಗಳೂ, ವಿಶಾಲವಾದ ಆಕಾಶವೂ, ಋತುವಿಂದ ಋತುವಿಗೆ ಬದಲಾವಣೆಯಾಗುತ್ತಿದ್ದ ಈ ಎಲ್ಲ ಜೀವಿಗಳ ನಿರ್ಜೀವಿಗಳ ವರ್ಣನೆಯೂ ಆ ಆತ್ಮಕಥೆಯಲ್ಲಿ ಚಿತ್ರಿತವಾಗಿವೆ. ನೆಹರೂರವರು ರಾಜಕಾರಿಣಿ ಮಾತ್ರವಲ್ಲ ಭಾವುಕರೂ ಹೌದು ಎಂಬುದನ್ನು ಆ ಚಿತ್ರಗಳು ಸಾರುತ್ತವೆ. ಈ ಮಧ್ಯೆ ನೆಹರೂರವರ ತಾಯಿಯ ಆರೋಗ್ಯ ತುಂಬಾ ಕೆಟ್ಟಿದ್ದುದರಿಂದ ಅವಧಿ ಮುಗಿಯುವುದಕ್ಕೆ ಕೆಲವು ದಿವಸಗಳ ಮುಂಚೆಯೇ ಅಂದರೆ ತಾರೀಖು ೩೦-೮-೧೯೩೩ ರಲ್ಲಿ ಅವರು ಜೈಲಿನಿಂದ ಬಿಡುಗಡೆಮಾಡಲ್ಪಟ್ಟರು.

ಸೆರೆಮನೆಯಿಂದ ಬಿಡುಗಡೆಯಾದ ಕೂಡಲೆ ನೆಹರೂರವರು ಖಾಯಿಲೆ ಬಿದ್ದಿದ್ದ ತಾಯಿಯನ್ನು ನೋಡಲು ಪಾಟ್ನಕ್ಕೆ ಹೋದರು. ಅಲ್ಲಿ ಕೆಲವು ದಿವಸಗಳಿದ್ದು ಔಷಧೋಪಚಾರಗಳಿಗೆ ಏರ್ಪಾಟುಮಾಡಿದ್ದಾಯಿತು. ಅವರು ನಿಧಾನವಾಗಿ ಗುಣ ಹೊಂದುತ್ತಾ ಬಂದರು. ತಾಯಿಗೆ ಸ್ವಲ್ಪ ಗುಣವಾದ ಕೂಡಲೆ ಪೂನಾದಲ್ಲಿದ್ದ ಗಾಂಧಿಯವರನ್ನು ನೋಡಲು ಹೋದರು. ಜೈಲಿನಲ್ಲಿದ್ದಾಗ ದೇಶದ ವರ್ತಮಾನಗಳು ಸರಿಯಾಗಿ ತಿಳಿಯುತ್ತಿರಲಿಲ್ಲ. ಈಗ ಎಲ್ಲಾ ತಿಳಿದಹಾಗಾಯಿತು. ಭಾರತದ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳು ಉತ್ತಮವಾಗಿರಲಿಲ್ಲ. ಪ್ರಮುಖ ಕಾಂಗ್ರೆಸ್ಸಿಗರೆಲ್ಲಾ ಜೈಲುಗಳಲ್ಲಿದ್ದರು. **ಆರ್ಡಿನೆನ್ಸುಗಳು**

ಜಾರಿಯಲ್ಲಿದ್ದುವು. ಹೊಸ ದಸ್ತಗಿರಿಗಳಾಗುತ್ತಿದ್ದುವು. ರೈತರ ಮತ್ತು ಕಾರ್ಮಿಕರ ಸ್ಥಿತಿ ಸುಧಾರಿಸಿರಲಿಲ್ಲ. ಎಲ್ಲೆಲ್ಲೂ ಅಶಾಂತಿ ತುಂಬಿತ್ತು. ವೃತ್ತಪತ್ರಿಕೆಗಳು ವಾರ್ತಾ ಬಹಿಷ್ಕಾರದಿಂದ ಅಸಹಾಯಕವಾಗಿದ್ದುವು. ಎಲ್ಲೆಲ್ಲೂ ಸಿ.ಐ.ಡಿ. ಅಧಿಕಾರಿಗಳು ತಿರುಗಾಡುತ್ತಿದ್ದರು. ಸೆರೆಮನೆಯ ಸಹವಾಸ ನೆಹರೂರವರಿಗೆ ಬೇಜಾರಾಗಿದ್ದಿತು. ಜೊತೆಗೆ ಮನೆವಾಳ್ತೆಯ ಬಗ್ಗೆ, ತಂದೆಯವರು ಕಾಲವಾದಂದಿನಿಂದ, ನೆಹರೂರವರು ಗಮನವನ್ನೇ ಕೊಟ್ಟಿರಲಿಲ್ಲ. ಅವರ ಸಂಸಾರದಲ್ಲಿ ವೆಚ್ಚವು ಬಹಳವಾಗಿ ಕಡಿಮೆ ಯಾಗಿದ್ದರೂ ವರಮಾನ ಆ ಅಲ್ಪ ವೆಚ್ಚಕ್ಕೂ ಸಾಕಾಗುತ್ತಿರಲಿಲ್ಲ. ದ್ರವ್ಯಾಭಾವದಿಂದ ಮೋಟಾರನ್ನೂ ಇಟ್ಟುಕೊಂಡಿರಲಿಲ್ಲ. ಇವುಗಳೆಲ್ಲದರ ವ್ಯವಸ್ಥೆ ಆಗಬೇಕಾಗಿತ್ತು. ಈ ಮಧ್ಯೆ ತಂಗಿ ಕೃಷ್ಣಳೂ ಕೂಡ ಜೈಲುವಾಸವನ್ನು ಮುಗಿಸಿಕೊಂಡು ಬಂದಿದ್ದಳು. ಅವಳ ಮದುವೆ ಕೈಗೂಡಿತು. ಅದೊಂದು ಬ್ರಾಹ್ಮಣ-ಬ್ರಾಹ್ಮಣೇತರ ಜಾತಿಗಳಿಗೆ ಸೇರಿದ ಭಿನ್ನವರ್ಗದವರ ಮದುವೆ. ಆ ಮದುವೆಯನ್ನು ನೆಹರೂರವರು ಬಹು ಸರಳವಾದ ರೀತಿಯಲ್ಲಿ ಮಾಡಿದರು. ಅಷ್ಟು ಸರಳವಾಗಿ ಯಾವ ವಿಜೃಂಭಣೆಯೂ ಇಲ್ಲದೆ ಮಾಡಿದುದರಿಂದ ಅವರ ಅನೇಕ ಬಂಧುವರ್ಗದವರಿಗೆ ಅಸಮಾಧಾನವಾಯಿತು. ನೆಹರೂರವರ ಮಗಳು ಬೆಳೆದು ದೊಡ್ಡವಳಾಗುತ್ತಾ ಬಂದಿದ್ದಳು. ಅವಳ ವಿದ್ಯಾಭ್ಯಾಸವನ್ನು ಯೂರೋಪಿನಲ್ಲಿ ನಡೆಸಬೇಕೆಂದು ಅವರು ಗೊತ್ತುಮಾಡಿಕೊಂಡಿದ್ದರು. ಇದಕ್ಕೆಲ್ಲಾ ಹಣದ ಪರಿಸ್ಥಿತಿಯನ್ನು ಮೇಲ್ಪಡಿಸಲೋಸುಗ ನೆಹರೂರವರು ತಮ್ಮ ಹೆಂಡತಿಯ ಆಭರಣಗಳನ್ನೂ ಬೆಳ್ಳಿ ಪಾತ್ರೆಗಳು ಮತ್ತು ಇತರ ಹೆಚ್ಚಿಗೆ ಸಾಮಾನುಗಳನ್ನೂ ಮಾರಬೇಕೆಂದು ಯೋಚಿಸಿದರು. ಆದರೆ ಕಮಲಾ ನೆಹರು ತನ್ನ ಒಡವೆಗಳನ್ನು ಮಾರಲು ಇಷ್ಟಪಡಲಿಲ್ಲ. ವಾಸ್ತವವಾಗಿ ಆಕೆ ಅವುಗಳಲ್ಲಿ ಯಾವುದನ್ನೂ ಹತ್ತಾರು ವರ್ಷಗಳಿಂದ ತೊಟ್ಟುಕೊಂಡಿರಲೇ ಇಲ್ಲ. ಅವು ಬ್ಯಾಂಕಿನಲ್ಲಿ ಬಿದ್ದಿದ್ದುವು. ಆದರೆ ಅವನ್ನು ಆಕೆ ಮಗಳಿಗೆ ಕೊಡಬೇಕೆಂದು ಆಸೆ ಪಟ್ಟಳು. ಉಳಿದ ಸಾಮಾನುಗಳೆಲ್ಲಾ ವಿಲೇವಾರಿಯಾದುವು.

ಕಮಲಾ ನೆಹರೂರವರ ಆರೋಗ್ಯವು ದಿನದಿನಕ್ಕೆ ಕೆಡುತ್ತಿತ್ತು. ಕಾಂಗ್ರೆಸ್ಸಿನ ವರ್ತುಲಗಳಲ್ಲಿ ಬೇರೂರುತ್ತಿದ್ದ ಜಡತ್ವವನ್ನು ಕಳೆಯಲು

ತೀವ್ರ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕೆಂದಿದ್ದ ನೆಹರೂರವರು ಪುನಃ ಬೇಗನೆ ದಸ್ತಗಿರಿಯಾಗಬಹುದೆಂದು ಯೋಚಿಸಿ ಅಷ್ಟರಲ್ಲೇ ಹೆಂಡತಿಯ ಆರೋಗ್ಯದ ಬಗ್ಗೆ ವ್ಯವಸ್ಥೆಮಾಡಬೇಕೆಂದುಕೊಂಡರು. ವೈದ್ಯ ಸಲಹೆ ಗಾಗಿ ಕಲ್ಕತ್ತೆಗೆ ಹೊರಟರು. ಬೇಕಾದ ವೈದ್ಯರ ಅಭಿಪ್ರಾಯಗಳನ್ನು ಪಡೆದರು. ರವೀಂದ್ರನಾಥ ಠಾಕೂರರನ್ನು ನೋಡಲು ಶಾಂತಿನಿಕೇತನಕ್ಕೆ ಹೊರಟರು. ಅವರ ಸಂದರ್ಶನ ಮತ್ತು ಮಾತುಕತೆಗಳಿಂದಲೂ ವಿಚಾರ ವಿನಿಮಯಗಳಿಂದಲೂ ಮನಸ್ಸು ಸ್ವಲ್ಪ ಹಗುರವಾಯಿತು. ಮಗಳು, ಇಂದಿರೆ ಆಗ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಕುಳಿತುಕೊಳ್ಳುವುದರಲ್ಲಿ ದ್ದಳು. ಶಾಂತಿನಿಕೇತನದ ವಾತಾವರಣವೂ ಶಿಕ್ಷಣ ಕ್ರಮವೂ ನೆಹರೂ ರವರಿಗೆ ಹಿಡಿಸಿದುದರಿಂದ ಕೆಲವುಕಾಲ ಇಂದಿರೆಯನ್ನು ಅಲ್ಲಿ ಓದಲು ಬಿಡುವುದೆಂದು ಗೊತ್ತುಮಾಡಿದರು. ಕಲ್ಕತ್ತದಿಂದ ಹಿಂದಿರುಗುವಾಗ ಬೀಹಾರಿನ ಮಾರ್ಗವಾಗಿ ಬಂದರು. ಆಗ ಭೂಕಂಪವಾಗಿ ಏಳುದಿನಗಳಾ ಗಿದ್ದಿತು. ಸರ್ಕಾರ ಯಾವ ಪರಿಹಾರಕ್ರಮವನ್ನೂ ಕೈಗೊಂಡಿರಲಿಲ್ಲ. ಕೆಲವು ಬೀದಿಗಳಲ್ಲಿ ಹಾಳು ಮಣ್ಣನ್ನೆತ್ತಿರಲಿಲ್ಲ. ಮಣ್ಣನ್ನು ಸರಿಸಿದ ಹಾಗೆಲ್ಲಾ ಹೆಣಗಳು ಕಾಣಬರುತ್ತಿದ್ದುವು. ಈ ಪರಿಸ್ಥಿತಿಯನ್ನು ನೋಡಿ ಕೊಂಡು ಕಾಂಗ್ರೆಸ್ಸು ಸುಮ್ಮನೆ ಕುಳಿತಿರುವುದು ಸರಿಯಲ್ಲವೆಂದು ಅಲಹಾಬಾದಿಗೆ ಹಿಂದಿರುಗಿ ಸಹೋದ್ಯೋಗಿಗಳೊಡನೆ ಚರ್ಚಿಸಿ 'ಬೀಹಾರದ ಭೂಕಂಪ ನಿಧಿ'ಯನ್ನು ಕೂಡಿಸಲು ಮನವಿಯನ್ನು ಹೊರಡಿ ಸಿದರು. ಅಲಹಾಬಾದಿನ ಭೂಕಂಪ ನಿಧಿಯ ಚಾಲಕರು, ನೆಹರೂರವರು ತಾವೇ ಖುದ್ದಾಗಿ ಪೀಡಿತ ಪ್ರದೇಶಗಳಲ್ಲಿ ಸಂಚಾರವಾಡಿ ಯಾವ ಬಗೆಯ ಪರಿಹಾರ ನೀಡಬೇಕೆಂಬುದಕ್ಕೆ ಸಲಹೆ ಮಾಡಬೇಕೆಂದು ಹೇಳಿದರು. ನೆಹರೂರವರು ಭೂಕಂಪದಿಂದ ಬೆಂದುಹೋಗಿದ್ದ ಬೀಹಾರಿನ ಪ್ರದೇಶಗಳಿಗೆ ಭೇಟಿಕೊಟ್ಟರು. ಅಂದಿನ ಬೀಹಾರು ಎಂತಹ ಕಲ್ಲೆದೆಯನ್ನಾದರೂ ಕರಗಿಸುವ ದೃಶ್ಯ. ನೆಹರೂರವರು ಹತ್ತುದಿನಗಳವರೆಗೆ ಹರಿದು ಹಂಚಿ ಹೋದ ಹಾಳು ಬೀಡುಗಳಲ್ಲಿ ಸಂಚಾರಮಾಡಿದರು. ಅವರ ಮಾನವ ಹೃದಯ ಕೂಡ ಕಲ್ಲಾಗಬೇಕಾಯಿತು. ಅಲ್ಲಿ ಅವರು ಕಂಡ ಕರಾಳ ದೃಶ್ಯವನ್ನು ಅವರು ಈರೀತಿ ವರ್ಣಿಸಿದ್ದಾರೆ.

"ಅದೊಂದು ಭಯಂಕರ ಅನುಭವವಾಗಿರಬೇಕು. ಭೂಕಂಪವು ಪ್ರಬಲವಾದ ಅಕ್ಕಪಕ್ಕದ ಅಲುಗಾಟಗಳಿಂದ ಆರಂಭವಾಗಿ, ನಿಂತಿದ್ದ ಪ್ರತಿಯೊಬ್ಬನನ್ನೂ ಕೆಳಕ್ಕುರುಳಿಸಿತು. ಆಮೇಲೆ ಕೆಳಗಿಂದ ಮೇಲಿನ ಅಲುಗಾಟವು ಆರಂಭವಾಯಿತು. ಫಿರಂಗಿಗಳ ಸುರಿಮಳೆಯ ಅಥವಾ ಆಕಾಶದಲ್ಲಿನ ನೂರು ವಿಮಾನಗಳ ಶಬ್ದಸದೃಶವಾದ ಅದ್ಭುತ ಗುಡುಗಾಟವೂ ಘೋಷ ಪ್ರತಿಘೋಷವೂ ನಡೆಯಿತು. ಲೆಕ್ಕವಿಲ್ಲದಷ್ಟು ಸ್ಥಳಗಳಲ್ಲಿ, ಭೂಮಿಯು ಬಿಟ್ಟಿದ್ದ ಬಿರುಕುಗಳ ಮೂಲಕ ನೀರು ಹೊರನುಗ್ಗಿ ಹತ್ತು ಹನ್ನೆರಡು ಅಡಿ ಎತ್ತರಗಳವರೆಗೆ ಚಿಮ್ಮಿತು. ಪ್ರಾಯಶಃ ಇವೆಲ್ಲವೂ ಮೂರು ನಿಮಿಷಗಳಲ್ಲಿಯೋ ಅದಕ್ಕಿಂತ ಸ್ವಲ್ಪ ಹೆಚ್ಚಾದಕಾಲದಷ್ಟರಲ್ಲಿಯೋ ನಡೆದುಹೋಯಿತು. ಆಮೇಲೆ ಅದು ನಿಂತುಹೋಯಿತು. ಆದರೂ ಆ ಮೂರು ನಿಮಿಷಗಳು ಸಾಕಾದಷ್ಟು ಭಯಂಕರವಾಗಿದ್ದುವು. ಇದನ್ನು ನೋಡಿದ ಅನೇಕರು ಇದನ್ನೇ ಪ್ರಳಯವೆಂದುಕೊಂಡುದು ಆಶ್ಚರ್ಯವಲ್ಲ. ಪಟ್ಟಣಗಳಲ್ಲಿ ಬೀಳುತ್ತಿರುವ ಮನೆಗಳ ಶಬ್ದ, ನುಗ್ಗುತ್ತಿರುವ ನೀರುಗಳು ಮತ್ತು ಕೆಲವು ಗಜಗಳ ದೂರ ಸಹ ನೋಡಲು ಅಸಾಧ್ಯವಾಗಿಸಿದ್ದ ಧೂಳೀಪೂರ್ಣ ವಾತಾವರಣ. ಗ್ರಾಮಾಂತರಗಳಲ್ಲಿ ಹೆಚ್ಚು ಧೂಳು ತುಂಬಿಕೊಂಡಿರದೆ ಇನ್ನೂ ಸ್ವಲ್ಪದೂರ ಮುಂದೆ ನೋಡಬಹುದಾಗಿತ್ತು. ಆದರೆ ಪ್ರಶಾಂತನೇತ್ರಯುಕ್ತವಾದ ಯಾವ ನೋಟಗಾರರೂ ಇರಲಿಲ್ಲ. ಉಳಿದುಕೊಂಡವರು ಚಪ್ಪಟೆಯಾಗಿ ಮಲಗಿದರು, ಇಲ್ಲವೇ ಭಯದ ನೋವಿನಲ್ಲಿ ಹೊರಳಾಡಿದರು...... ಈ ಕ್ಷೇತ್ರದ ಮೇಲೆ, ವಿಮಾನದಲ್ಲಿ ಹೋದ ಕೆಲವು ಬ್ರಿಟಿಷ್ ಅಧಿಕಾರಿಗಳು, ಅದು ಮಹಾ ಯುದ್ಧಕಾಲದಲ್ಲಿ ಮತ್ತು ಆಮೇಲೆ ಗೋಚರಿಸಿದ ಉತ್ತರ ಫ್ರಾನ್ಸಿನ ರಣಕ್ಷೇತ್ರಗಳಂತಿತ್ತು, ಎಂದು ಹೇಳಿದರು."

ಬಾಬು ರಾಜೇಂದ್ರ ಪ್ರಸಾದರು ಬೀಹಾರ ಪ್ರಾಂತದ ಕಾಂಗ್ರೆಸ್ ಸಂಸ್ಥೆಯ ಸೂತ್ರಗಳನ್ನು ಹಿಡಿದಿದ್ದರು. ಕೇಂದ್ರ ಸಹಾಯ ಸಮಿತಿಯ ಯಾಜಮಾನ್ಯವನ್ನೂ ಅವರಿಗೇ ವಹಿಸಲಾಯಿತು. ರಾಜೇಂದ್ರ ಪ್ರಸಾದರು ತುಂಬಾ ಸರಳ ಮನಸ್ಕರೂ ನೈಜ ಸ್ವಭಾವದವರೂ ಆಗಿದ್ದಾರೆ. ಅವರ ಪರಿಪೂರ್ಣ ಚಟುವಟಿಕೆ, ಅವರ ಚೈತನ್ಯ ಮತ್ತು ಭಾರತೀಯ

ಸ್ವಾತಂತ್ರ್ಯಧ್ಯೇಯಕ್ಕೆ ಅವರಲ್ಲಿರುವ ಅಚಲಶ್ರದ್ಧೆ ಇವುಗಳಿಂದ ಅವರು ತಮ್ಮ ಪ್ರಾಂತದಲ್ಲಿ ಮಾತ್ರವಲ್ಲದೆ ಇಡೀ ಭಾರತದಲ್ಲೆಲ್ಲಾ ಜನತೆಯ ಪ್ರೇಮಕ್ಕೆ ಪಾತ್ರರಾಗಿದ್ದವರು. ಬೀಹಾರಿನಲ್ಲಿ ರಾಜೇಂದ್ರ ಬಾಬುಗಳು ಪಡೆದಿದ್ದ ಸರ್ವತ್ರವಾಗಿ ಅಂಗೀಕೃತವಾಗಿರುವ ನಾಯಕತ್ವದ ಪ್ರತಿಷ್ಠೆಯನ್ನು ಬೇರೆ ಯಾವನೊಬ್ಬನೂ ಯಾವ ಪ್ರಾಂತದಲ್ಲಿಯೂ ಪಡೆದಿರಲಿಲ್ಲ. ಗಾಂಧೀಜಿಯವರ ನಿಜವಾದ ಸಂದೇಶವನ್ನು ರಾಜೇಂದ್ರ ಬಾಬುಗಳಿಗಿಂತ ಹೆಚ್ಚು ಆಮೂಲಾಗ್ರವಾಗಿ ಗ್ರಹಿಸಿದವರೂ ಅನುಷ್ಠಾನಕ್ಕೆ ತಂದಿದ್ದವರೂ ಬೇರೆ ಇಲ್ಲವೆಂಬುದು ನಿರ್ವಿವಾದ. ಬೀಹಾರಿನಲ್ಲಿ ಕಾಂಗ್ರೆಸ್ಸು ನಡೆಸಿದ ಸಹಾಯಕಾರ್ಯದ ಮುಂದಾಳುತನಕ್ಕೆ ಈ ತೆರನಾದ ವ್ಯಕ್ತಿ ನೆಹರೂರವರಿಗೆ ದೊರಕಿದುದೂ ಅವರ ಅದೃಷ್ಟವೇ. ಅವರ ನಿಸ್ಪೃಹವಾದ ಸೇವೆಯಿಂದ ಕಾಂಗ್ರೆಸ್ಸಿಗೆ ತುಂಬಾ ಕೀರ್ತಿ ಲಭಿಸಿತು. ಫೆಬ್ರುವರಿ ೧೧ನೆಯ ತಾರೀಖು ನೆಹರೂರವರು ಅಲಹಾಬಾದಿಗೆ ವಾಪಸು ಬಂದರು. ವರಾಂಡದಲ್ಲಿ ಕಮಲಾದೇವಿಯೊಡನೆ ಮಾತನಾಡುತ್ತಿದ್ದಾಗ ಬಾಗಿಲ ಬಳಿ ಮೋಟಾರು ನಿಂತಿತು. ಪೋಲೀಸ್ ಅಧಿಕಾರಿಯೊಬ್ಬರು ಕೆಳಗಿಳಿದರು. ನೆಹರೂರವರು ಅವರನ್ನು ಸ್ವಾಗತಿಸುತ್ತಾ 'ಬನ್ನಿ ಬನ್ನಿ, ತಮಗಾಗಿ ತುಂಬಾ ದಿನಗಳಿಂದಲೇ ಕಾದುಕೊಂಡಿದ್ದೇನೆ' ಎಂದರು. ಬಿಡುಗಡೆಯಾದ ಐದು ತಿಂಗಳು ಹದಿಮೂರು ದಿನಗಳ ನಂತರ ಪುನಃ ಸೆರೆಮನೆಯನ್ನು ಸೇರಬೇಕಾಯಿತು. ಈ ಸಲ ಕಲ್ಕತ್ತಾದಲ್ಲಿ ಮಾಡಿದ ಭಾಷಣಗಳಿಗಾಗಿ ಎರಡು ವರ್ಷಗಳ ಸಜ ವಿಧಿಸಲ್ಪಟ್ಟು, ಏಳನೆಬಾರಿ ಜೈಲುವಾಸವನ್ನು ಆಲಿಪುರದ ಜೈಲಿನಲ್ಲಿ ಪ್ರಾರಂಭಮಾಡಿದರು.

ನೆಹರೂರವರು ಅನುಭವಿಸಿದ ಜೈಲುವಾಸಗಳ ಪೈಕಿ ಆಲಿಪುರದ ಜೈಲಿನಷ್ಟು ನಿಸ್ಸಾರವಾದುದು ಬೇರೆ ಇರಲಿಲ್ಲ. ಅದಕ್ಕೆ ಅನೇಕ ಕಾರಣಗಳಿವೆ. ಮೊದಲನೆಯದಾಗಿ ಕಾಂಗ್ರೆಸ್ ವರ್ತುಲಗಳಲ್ಲಿ ಹಿಂದಿನ ಚಟುವಟಿಕೆ ಇರದೆ ಸೋಮಾರಿತನ ಕಂಡುಬರುತ್ತಿದ್ದುದೊಂದು. ಜೈಲಿನಲ್ಲೇ ವಾತಾವರಣ ಹಿತವಾಗಿಲ್ಲದುದು ಇನ್ನೊಂದು, ಹೆಂಡತಿಯಾದ ಕಮಲಾ ನೆಹರು ಖಾಯಿಲೆ ಬಿದ್ದಿದ್ದು ದಿನದಿನಕ್ಕೆ ಕೃಶವಾಗುತ್ತಿದ್ದ ಚಿಂತೆ ಮತ್ತೊಂದು. ಜವಾಹಿರಲಾಲರಿದ್ದ ಕೊಠಡಿಯ ಹೊರಗಡೆ ಗಿಡಮರ

ಗಳಿರಲಿಲ್ಲ. ಹತ್ತಿರದಲ್ಲಿದ್ದ ಒಂದು ಗಿರಣಿಯಿಂದ ಬರುತ್ತಿದ್ದ ಹೊಗೆ ಅವರನ್ನು ಮುತ್ತುತ್ತಿತ್ತು. ಅನುಭವದಿಂದ ಅವರು ಭಾರತದ ಸ್ವಾತಂತ್ರ್ಯ ಸಾಧನೆಗೆ ಸತ್ಯಾಗ್ರಹವೊಂದೇ ಮಾರ್ಗವೆಂದು ತಿಳಿದಿದ್ದರು. ಆದರೆ ಈಗ ಗಾಂಧಿಯವರು ತಮ್ಮ ಆಶ್ರಮವಾಸಿಯೊಬ್ಬನು ಸತ್ಯಾಗ್ರಹದ ನಿಯಮ ಗಳಿಗೆ ಒಳಪಡಲಿಲ್ಲವೆಂಬ ಕಾರಣದಿಂದ ಸತ್ಯಾಗ್ರಹವನ್ನು ನಡೆಸಕೂಡ ದೆಂದು ಹೊಸದಾಗಿ ಆಜ್ಞೆಮಾಡಿದ್ದರು. ಒಮ್ಮೆ ಕಮಲಾದೇವಿಯೂ ಬಂದು ಹೋದಳು. ನೆಹರೂರವರಿಗೆ ಅವಳ ಭೇಟಿಯಿಂದ ಸ್ವಲ್ಪ ಸಮಾ ಧಾನವಾದರೂ ಅವಳ ಆರೋಗ್ಯ ಉತ್ತಮವಾಗುತ್ತಿಲ್ಲವೆಂಬುದನ್ನು ಕಂಡು ಕೊಂಡರು. ಆಲಿಪುರದ ಜೈಲು ನೆಹರೂರವರ ದೇಹಕ್ಕೆ ಒಗ್ಗಲಿಲ್ಲ. ಅವರ ತೂಕ ಕಡಿಮೆಯಾಯಿತು. ಕಲ್ಕತ್ತೆಯ ಗಾಳಿಯೂ ಹೆಚ್ಚಾದ ಸೆಕೆಯೂ ಅವರನ್ನು ತೊಂದರೆಗೀಡುಮಾಡಿತು. ಇವೆಲ್ಲಾ ಕಾರಣಗಳಿಂದ ಮೇ ೭ ನೇ ತಾರೀಖಿನ ದಿನ ಅವರನ್ನು ಆಲಿಪುರದಿಂದ ಡೆಹರಾಡೂನಿನ ಸೆರೆಮನೆಗೆ ಬದಲಾಯಿಸಲಾಯಿತು. ದಿನದಿನಕ್ಕೆ ಕಮಲಾದೇವಿಯ ಆರೋಗ್ಯ ಕ್ಷೀಣವಾಗುತ್ತಿರಲು ಸರ್ಕಾರದವರು ನೆಹರೂರವರಿಗೆ ಸ್ವಲ್ಪ ಬಿಡುವುಕೊಟ್ಟು ಪತ್ನಿಯನ್ನು ನೋಡಿಕೊಂಡುಬರಲು ಅವಕಾಶವನ್ನು ಕಲ್ಪಿಸಿದರು. ಹನ್ನೊಂದು ದಿವಸಗಳವರೆಗೆ ನೆಹರೂರವರು ಹೆಂಡತಿ ಯೊಡನೆ ಇದ್ದರು. ಕಮಲಾ ನೆಹರೂರವರು ಕೃಶರಾಗಿ, ಶುದ್ಧಾಂಗವಾಗಿ ನಿರ್ಬಲರಾಗಿ, ಮೊದಲಿದ್ದ ಕಮಲಳ ನೆರಳೋ ಎಂಬಂತಿದ್ದರು. ರೋಗ ದಲ್ಲಿ ನರಳುತ್ತಾ ಮೃತ್ಯುವಿನೊಡನೆ ಹೋರಾಡುತ್ತಾ ಮಲಗಿದ್ದರು. ಆಕೆಯು ಇನ್ನು ಬಹಳಕಾಲ ತಮ್ಮ ಜೊತೆಯಲ್ಲಿರುವುದಿಲ್ಲವೆಂದು ನೆಹರೂ ರವರಿಗೆ ಅರಿವಾಯಿತು. ಶಾಂತಿನಿಕೇತನದಿಂದ ಇಂದಿರೆಯೂ ಬಂದಿದ್ದಳು. ಅನೇಕಾನೇಕ ಸ್ನೇಹಿತರು ನೆಹರೂರವರನ್ನು ನೋಡುವುದಕ್ಕೂ ಕಮಲಾ ದೇವಿಯ ದೇಹಸ್ಥಿತಿಯನ್ನು ವಿಚಾರಿಸುವುದಕ್ಕೂ ಒಂದೇ ಸಮನಾಗಿ ಬರುತ್ತಿದ್ದರು. ರಾಜಕೀಯ ಚರ್ಚೆಗಳಿಗಾಗಿಯೂ ಬರುತ್ತಿದ್ದರು. ಆದರೆ ಜವಾಹಿರಲಾಲರ ನಿಷ್ಠೆ ಅಸದೃಶವಾದುದು. ಹೆಂಡತಿಯನ್ನು ನೋಡು ವುದಕ್ಕೆಂದು ಜೈಲಿನ ಅಧಿಕಾರಿಗಳು ಮನೆಗೆ ಕಳಿಸಿರುವಾಗ ಆ ಅವಕಾಶ ವನ್ನು ರಾಜಕೀಯ ಕಾರ್ಯಗಳಿಗಾಗಿ ಉಪಯೋಗಿಸುವುದು ಸರಿಯಲ್ಲ

ವೆಂದು ನೆಹರೂರವರು ರಾಜಕೀಯವನ್ನು ತಲೆಗೆ ಹಾಕಿಕೊಳ್ಳಲಿಲ್ಲ. ತಮ್ಮ ಸಲಹೆ ಸೂಚನೆಗಳನ್ನೂ ಹೇಳಲಿಲ್ಲ. ಯಾವ ಪ್ರಕಟನೆಗಳನ್ನೂ ಪ್ರಕಟಿಸಲಿಲ್ಲ. ಹನ್ನೊಂದುದಿನಗಳ ಬಿಡುವುಕೊಟ್ಟಮೇಲೆ, ಕಾರೊಂದು ಮನೆಯ ಮುಂದೆ ನಿಂತಿತು. ನೈನಿ ಜೈಲಿಗೆ ಬರಬೇಕೆಂದು ನೆಹರೂರವರಿಗೆ ತಿಳಿಸಲಾಯಿತು. ನೆಹರೂರವರು ಪೋಲೀಸ್‌ಕಾರಿನಲ್ಲಿ ಕುಳಿತುಕೊಳ್ಳಬೇಕೆಂದಿರುವಾಗ ಅವರ ತಾಯಿ 'ಅಯ್ಯೋ!' ಎಂದು ಓಡಿಬಂದರು. ಅವರ ಆಗಿನ ಮುಖಮುದ್ರೆ ನೆಹರೂರವರ ಮನಸ್ಸಿನ ಕಣ್ಣೆದುರಿಗೆ ಚಿರಕಾಲ ನಿಂತಿತ್ತು.

ಆಲಿಪುರ ಜೈಲಿನಿಂದ ಡೆಹರಾಡೂನಿನ ಜೈಲಿಗೆ ನೆಹರೂರವರನ್ನು ವರ್ಗಾಯಿಸಿದಾಗ ಅವರಿಗೆ ತುಂಬಾ ಬೇಜಾರಾಯಿತು. ಆ ಕಾಲದಲ್ಲಿ ಅವರು ಬೇಜಾರನ್ನು ಕಳೆಯಲು ತಮ್ಮ ಆತ್ಮಕತೆಯನ್ನು ಬರೆಯಲು ಆರಂಭಿಸಿದರು. ಅದರ ಪ್ರಾರಂಭ ಹೇಗಾಯಿತೆಂದು ಅವರೇ ಹೀಗೆ ಹೇಳಿದ್ದಾರೆ. "ವರ್ತಮಾನ ಸ್ಥಿತಿಯನ್ನು ಯೋಚಿಸಿ ಮನಸ್ಸಿಗೆ ಆಯಾಸವಾಗಿ ನನಗೆ ಹಿಂದಿನಕಾಲದ ಕಡೆಗೆ ಮನಸ್ಸು ತಿರುಗಿತು. ನಾನು ದೇಶಸೇವೆಗೆ ಇಳಿದಂದಿನಿಂದ ಭರತ ಖಂಡದಲ್ಲಿ ರಾಜಕೀಯವಾಗಿ ಏನೇನಾಗಿದೆ ಎಂಬುದರ ಕಡೆಗೆ ಮನಸ್ಸು ಹೊರಳಿತು. 'ನಾವು ಮಾಡಿರುವ ಕಾರ್ಯಗಳಲ್ಲಿ ಎಷ್ಟು ಸರಿ? ಎಷ್ಟು ತಪ್ಪು? ಎಲ್ಲವನ್ನೂ ಬರೆದಿಟ್ಟರೆ ನನ್ನ ಯೋಚನೆಗಳೆಲ್ಲಾ ಕ್ರಮವಾಗಿರುವುವು: ನನಗೂ ಸರಿಹೋಗುವುದು'—ಎನ್ನಿಸಿತು. ಜೊತೆಗೆ ನನಗೂ ಒಂದು ಗೊತ್ತಾದ ಕೆಲಸವಿದ್ದು ನನ್ನ ಮನಸ್ಸಿನ ಬೇಸರ ಆಯಾಸಗಳು ಕಳೆಯುವುವು ಎಂದು ಜೂನ್ ೧೯೩೪ರಲ್ಲಿ ಡೆಹರಾಡೂನ್ ಜೈಲಿನಲ್ಲಿ ಆತ್ಮಕತೆಯನ್ನು ಆರಂಭಿಸಿದೆನು. ಬರೆಯಬೇಕು ಎಂಬ ಭಾವನೆಯು ಬಂದಾಗ ಬರೆಯುತ್ತಾ ಎಂಟುತಿಂಗಳಿಂದ ಬರೆಯುತ್ತಿದ್ದೇನೆ. ಅನೇಕ ವೇಳೆ ಬರೆಯುವುದಕ್ಕೆ ಮನಸ್ಸೇ ಇರುವುದಿಲ್ಲ. ಮೂರು ಸಲ ಒಂದೊಂದು ತಿಂಗಳು ಬರೆಯಲೇ ಇಲ್ಲ. ಹಾಗೂ ಹೀಗೂ ಬರೆದು ಆತ್ಮಕತೆಯ ಕೊನೆಗೆ ಬಂದಿದ್ದೇನೆ. ಇದರ ಬಹುಭಾಗವನ್ನು ಮನಸ್ಸು ಬಹಳ ಆಯಾಸದಿಂದಲೂ ದುಃಖಾತಿರೇಕದಿಂದಲೂ ಕೂಡಿ ಏನೋ ಹೇಳಲಾಗದ ಬೇಸರದ ಪರಿಸ್ಥಿತಿಯಲ್ಲಿದ್ದಾಗ ಬರೆದಿದ್ದೇನೆ. ಈ ಮನೋಭಾವದ ಒಂದು ಅಂಶವು

ನನ್ನ ಬರವಣಿಗೆಯಲ್ಲಿ ಪ್ರತಿಫಲಿಸಿದ್ದರೂ ಪ್ರತಿಫಲಿಸಿರಬಹುದು. ಆದರೆ ಇದು ನನ್ನ ಆಯಾಸಗಳನ್ನು ಪರಿಹರಿಸಿ ನನಗೆ ಎಷ್ಟೋ ಸಮಾಧಾನವನ್ನು ತಂದಿದೆ. ಇದನ್ನು ಬರೆಯುವಾಗ ಇದನ್ನು ಯಾರಾದರೂ ಓದಿಯಾರು ಎಂಬ ಭಾವನೆಯೇ ನನಗೆ ಇರಲಿಲ್ಲ. ನನಗೆ ನಾನೇ ಪ್ರಶ್ನೆಗಳನ್ನು ಹಾಕಿಕೊಂಡು, ನನಗಾಗಿ ಉತ್ತರಗಳನ್ನು ಹೇಳಿಕೊಳ್ಳುತ್ತಾ ಅದರಿಂದ ಅಷ್ಟು ಸಂತೋಷಪಟ್ಟುಕೊಳ್ಳುತ್ತಿದ್ದೆ. ಆದಷ್ಟುಮಟ್ಟಿಗೆ ನೇರವಾಗಿ ಯೋಚಿಸಬೇಕೆಂಬ ನನ್ನ ಪ್ರಯತ್ನವು ಹಿಂದೆ ನಡೆದುದನ್ನೆಲ್ಲಾ ಒಮ್ಮೆ ಪರಿಶೀಲಿಸಿದರೆ, ಸಫಲವಾಗುವುದು ಎಂದುಕೊಂಡೆ.'' ಇಂತಹ ಬೇಜಾರು ಬಂದು ನೆಹರೂರವರು ಹೀಗೆ ತಮ್ಮ ಆತ್ಮಕತೆಯನ್ನು ಬರೆಯದಿದ್ದಿದ್ದರೆ ಅವರ ಜೀವನದ ಸಂಗತಿಗಳ ಬಗ್ಗೆ ಊಹಾಪೋಹಗಳೆದ್ದು ಅಸಂಗತಗಳೂ, ನಂಬಲಾಗದವೂ, ಊಹಾತೀತವಾದವುಗಳೂ ಪ್ರಚಾರವಾಗಿ ಅವರ ಧವಳ ಕೀರ್ತಿಗೆ ಕುಂದುತರುತ್ತಿದ್ದುವೆಂಬುದರಲ್ಲಿ ಸಂದೇಹವಿಲ್ಲ. ಇದರಿಂದ ಭಾರತೀಯರು ಮಾತ್ರವಲ್ಲ ಪ್ರಪಂಚವೇ ಅವರ ಜೀವನದ ರೀತಿ ನೀತಿಗಳನ್ನೂ, ಪಾಂಡಿತ್ಯವನ್ನೂ, ಸಮತೂಕದ ಭಾವನೆಗಳನ್ನೂ, ವಿಮರ್ಶೆಯ ಗುಣವನ್ನೂ ಅರಿಯಲು ಸಾಧ್ಯವಾಗಿದೆ. ಅವರ ಮಿತ್ರರು ಮೆಚ್ಚಿಕೆಯವರು ಮಾತ್ರವಲ್ಲ, ಅವರ ಶತ್ರುಗಳೂ ಕೂಡ ಅವರನ್ನು ಮೆಚ್ಚಿಕೊಳ್ಳಲು ಅದು ಸಹಾಯಕವಾಗಿದೆ.

ಕಮಲಾದೇವಿಯ ಆರೋಗ್ಯವು ದಿನದಿನಕ್ಕೆ ಕೆಡುತ್ತಲೇ ಬಂತು. ಸೆರೆಮನೆ ಸೇರಿ ಒಂದು ತಿಂಗಳಾದ ಮೇಲೆ ಜೈಲಿನ ಅಧಿಕಾರಿಗಳು ನೆಹರೂರವರಿಗೆ ಕಮಲಳ ಭೇಟಿ ಮಾಡಿಸಿ ಕರೆತಂದರು. ಆಮೇಲೆ ವಾರಕ್ಕೆರಡು ಸಲ ಹಾಗೇ ಭೇಟಿ ಮಾಡಿಸುವುದಾಗಿ ಹೇಳಿದ್ದರೂ ಭೇಟಿಗೆ ಏರ್ಪಾಟು ಮಾಡಲಿಲ್ಲ. ಅಂದಿನ ದಿನಗಳನ್ನು ಕಳೆಯಲು ನೆಹರೂರವರು ಪಟ್ಟ ಶ್ರಮವನ್ನು ವಿವರಿಸಲು ಸಾಧ್ಯವಿಲ್ಲ. ಆ ದಿನಗಳು ತಿಂಗಳುಗಳಷ್ಟು ದೀರ್ಘವಾಗಿ ಕಂಡುವು. ಅಂತಹ ಭಯಂಕರ ದಿನಗಳನ್ನು ನೆಹರೂರವರು ಜೀವನದಲ್ಲೇ ಅನುಭವಿಸಿರಲಿಲ್ಲ. ಅವರ ತಳಮಳವನ್ನು ಕಂಡೋ ಏನೋ ಉಳಿದಿರುವ ಶಿಕ್ಷಾಕಾಲದಲ್ಲಿ ರಾಜಕೀಯ ವ್ಯವಹಾರಗಳಲ್ಲಿ ಕೈಹಾಕುವುದಿಲ್ಲವೆಂದು ಮಾತು ಕೊಟ್ಟರೆ—ಬರೆದುಕೊಡಬೇಕಾಗಿಯೂ

ಇರಲಿಲ್ಲ. ಅವರ ಮಾತಿನಲ್ಲಿ ಸರ್ಕಾರಕ್ಕೆ ನಂಬಿಕೆಯಿದ್ದಿತು—ಕಮಲ ಳನ್ನು ನೋಡಿಕೊಳ್ಳಲು ನೆಹರೂರವರನ್ನು ಬಂಧನದಿಂದ ಬಿಡುವುದಾಗಿ ಹಲವು ಕಡೆಗಳಿಂದ ಮಧ್ಯಸ್ಥಿಕೆ ನಡೆಯಿತು. ಆಗ ನೆಹರೂರವರ ಮನಸ್ಸಿಗೆ ರಾಜಕೀಯವೂ ಬೇಕಾಗಿರಲಿಲ್ಲ. ನೆಹರೂರವರನ್ನು ಒಪ್ಪಿಸು ವುದಕ್ಕಾಗಿ "ಕಮಲಳು ಇನ್ನು ಯಾವಾಗಲೋ ಏನೋ ಎಂಬ ಸ್ಥಿತಿಗೆ ಬರುತ್ತಿದ್ದಾಳೆ. ಈಗ ನೀನು ಆಕೆಯ ಬಳಿ ಇದ್ದರೆ ಆಕೆಯೂ ಉಳಿದರೂ ಉಳಿಯಬಹುದು"—ಎಂದು ಆಸೆ ತೋರಿಸಿದರು. ಆಗ ನೆಹರೂರವರ ಮನಸ್ಸಿನ ಒಳತೋಟಿಯನ್ನು ಅವರ ಮಾತಿನಲ್ಲೇ ಹೇಳಬಹುದು. "....ಮತ್ತು ನನಗೆ ದೊರೆತಿದ್ದ ಪನ್ನೊಂದು ದಿನದ ಬಿಡುವಿನಲ್ಲಿ ಹೊರಗಿದ್ದ ರಾಜಕೀಯ ವ್ಯವಹಾರವನ್ನು ಕಂಡು ನನಗೆ ಅಸಹ್ಯವಾಗಿತ್ತು. ಆದರೆ (ರಾಜಕೀಯಕ್ಕೆ) ಕೈಹಾಕುವುದಿಲ್ಲವೆಂದು ಭರವಸೆ ಕೊಡುವುದೆ? ನಾನು ಮಾಡಿರುವ ಪ್ರಮಾಣಗಳಿಗೆ, ತತ್ತ್ವಕ್ಕೆ, ಕಾರ್ಯಬಂಧುಗಳಿಗೆ, ನನಗೆ ದ್ರೋಹಮಾಡಿಕೊಳ್ಳುವುದೆ? ಬೇಕಾದುದು ಆಗಲಿ. ಅದು ಸಾಧ್ಯವಿಲ್ಲ. ಹಾಗೆ ಮಾಡಿದರೆ ನನ್ನ ಕರುಳು ಕಿತ್ತುಕೊಂಡಂತೆ, ನಾನು ಪವಿತ್ರವೆಂದು ಭಾವಿಸಿರುವ ಸಮಸ್ತವನ್ನೂ ಅಪವಿತ್ರಗೊಳಿಸಿದಂತೆ.... ಆಕೆಯೂ ಉಳಿದುಕೊಳ್ಳುವಂತೆ ಮಾಡುವುದೇ? ಅಥವಾ ನನ್ನ ಜಂಭ ನನ್ನ ಅಹಂಕಾರಗಳನ್ನು ಕಾಪಾಡಿಕೊಳ್ಳುವುದೆ?—ಎಂಬ ಭಯಂಕರ ಸಮಸ್ಯೆಯೂ ಬಂದಿದ್ದರೆ ಏನಾಗುವೆನೋ? ಆದರೆ ಅದೃಷ್ಟವಶದಿಂದ ಹಾಗಾಗಲಿಲ್ಲ. ನಾನು ಹೀಗೆ ಅಭಿವಚನ ಕೊಡುವುದು ಕಮಲಳಿಗೆ ಎಳ್ಳಷ್ಟೂ ಸಮ್ಮತವಿರಲಿಲ್ಲ, ಆಕೆಯೂ ಅದನ್ನು ಎಂದಿಗೂ ಒಪ್ಪಳು, ನಾನು ಹಾಗೆ ಮಾಡಿದರೆ ಆಕೆಗೆ ಅದು ಅಸಮಾಧಾನವಾಗುವುದು, ಹಾನಿಯಾಗುವುದು ಎಂದು ನನಗೆ ಚೆನ್ನಾಗಿ ಗೊತ್ತಿತ್ತು. ಅಕ್ಟೋಬರಿನ ಮೊದಲವಾರದಲ್ಲಿ ನಾನು ಆಕೆಯನ್ನು ಮತ್ತೆ ನೋಡಲು ಅವಕಾಶ ವಾಯಿತು. ಆಗ ಆಕೆಗೆ ಬಲವಾದ ಜ್ವರದ ತಾಪಾಧಿಕ್ಯದಿಂದ ಹೆಚ್ಚು ಕಡಿಮೆ ಅರ್ಧಜ್ಞಾನವಾಗಿತ್ತು. ಆಕೆಗೆ ನಾನು ಆಗ ಬಳಿಯಲ್ಲೇ ಇರ ಬಾರದೇ ಎಂದು ಆಸೆ. ಆದರೂ ನಾನು ಜೈಲಿಗೆಂದು ಹೊರಟಾಗ, ಧೀರಳಾಗಿ ನಕ್ಕು 'ಇಲ್ಲಿ ಬಾ' ಎಂದು ಕರೆದಳು. ನನ್ನನ್ನು ಹತ್ತಿರಕ್ಕೆ

ಕರೆದು ಕಿವಿಯಲ್ಲಿ, 'ಸರ್ಕಾರಕ್ಕೆ ಅಭಿವಚನ ಕೊಡಬೇಕು ಎಂದು ಕೊಂಡಿರುವೆಯಂತೆ! ಕೊಡಬೇಡ!' ಎಂದು ಪಿಸುಗುಟ್ಟಿದಳು." ನೆಹರೂರವರಿಗೆ ತಕ್ಕ ಹೆಂಡತಿಯಲ್ಲವೆ ಆಕೆ? ಆ ಪ್ರಕರಣ ಅಲ್ಲಿಗೇ ಮುಗಿಯಿತು. ದಿನದಿನಕ್ಕೆ ಕಮಲಳು ಕ್ಷಯಿಸಿಹೋಗುತ್ತಿದ್ದುದರಿಂದ, ಇನ್ನು ಕಾದು ಕುಳಿತು ಫಲವಿಲ್ಲವೆಂದು, ಆಕೆಯನ್ನು ಪರ್ವತಗಳಲ್ಲಿರುವ ಭೋವಾಲಿಗೆ ಕಳುಹಿಸುವುದೆಂದು ಗೊತ್ತಾಯಿತು. ಕಮಲಳು ಭೋವಾಲಿಗೆ ಹೋದ ಇಪ್ಪತ್ತು ದಿನಗಳ ಮೇಲೆ ನೆಹರೂರವರು ಅವಳ ಹತ್ತಿರ ಇರಲೆಂದು ಸರ್ಕಾರದವರು ಅವರನ್ನು ನೈನಿ ಜೈಲಿನಿಂದ ಆಲ್ಮೋರಾ ಜೈಲಿಗೆ ಕಳಿಸಿದರು. ನೆಹರೂರವರು ಈ ಉಪಕಾರಕ್ಕಾಗಿ ತಮ್ಮ ಕೃತಜ್ಞತೆಯನ್ನು ಆತ್ಮಕತೆಯಲ್ಲಿ ಸೂಚಿಸಿದ್ದಾರೆ. ಆಗಾಗ ನೆಹರೂರವರಿಗೆ ಹೆಂಡತಿಯನ್ನು ನೋಡುವ ಅವಕಾಶ ಸಿಗುತ್ತಿತ್ತು. ಈ ಮಧ್ಯೆ ಚಿಕಿತ್ಸೆಗಾಗಿ ಬೊಂಬಾಯಿಗೆ ಹೋಗಿದ್ದ ನೆಹರೂರವರ ತಾಯಿಗೆ ಪಾರ್ಶ್ವವಾಯು ಹೊಡೆದಿದೆಯೆಂಬ ತಂತಿ ಬಂತು. ಆದರೆ ನೆಹರೂರವರಿಗೆ ಅವರನ್ನು ನೋಡಿ ಬರುವುದಾಗಲಿಲ್ಲ; ಅಧಿಕಾರಿಗಳು ಬಿಡಲಿಲ್ಲ.

ವಿಧಿಸಿದ್ದ ಎರಡು ವರ್ಷಗಳ ಶಿಕ್ಷೆಯ ಪೈಕಿ ಒಂದುವರುಷ ಬಾಕಿ ಇರುವ ಹಾಗೆಯೇ ನೆಹರೂರವರು ತಮ್ಮ ಆತ್ಮಕತೆಯನ್ನು ಬರೆದು ಮುಗಿಸಿದರು. ಕಡೆಕಡೆಗೆ ಹೀಗೆ ಬರೆದರು. "ಜೀವನವು ಒಂದು ಸ್ವಾರಸ್ಯವಾದ ಸಾಹಸ. ಇಲ್ಲಿ ಕಲಿಯಬೇಕಾದುದು ಬೇಕಾದಷ್ಟಿದೆ, ಮಾಡುವುದಕ್ಕೆ ಬೇಕಾದಷ್ಟಿವೆ ಎಂದು ನೋಡುವುದನ್ನು ಕಲಿಯುತ್ತಿದ್ದೇನೆ. ನನಗೆ ಯಾವಾಗಲೂ ಬೆಳೆಯುತ್ತಿದ್ದೇನೆ ಅನ್ನಿಸುತ್ತಿದೆ. ಇನ್ನೂ ನನಗೆ ಹಾಗೆಯೇ ಇದೆ. ನಾನು ಇತರ ಕೆಲಸಗಳನ್ನು ಮಾಡುವಾಗ, ಪುಸ್ತಕಗಳನ್ನು ಓದುವಾಗ ಈ ಭಾವವು ನನಗೆ ಬಹಳ ಸಹಕಾರಿಯಾಗಿದೆ. ಅದು ನನಗೆ ಬಾಳಿನಲ್ಲಿ ಆಸೆಯನ್ನು ತೋರಿಸಿದೆ." ದಿನದಿನಕ್ಕೆ ನೆಹರೂರವರು ಹೇಗೆ ದೊಡ್ಡವರಾಗುತ್ತಿದ್ದಾರೆ, ಮೇಲೇರುತ್ತಿದ್ದಾರೆ ಎಂಬುದರ ಕುರುಹು ಇದು. ಅವರ ಆತ್ಮಕತೆಯ ಈ ಕೊನೆಯ ವಾಕ್ಯಗಳಂತೂ ತುಂಬಾ ಭಾವಗರ್ಭಿತವಾಗಿವೆ. "ನನಗೇನೋ ನನ್ನ ಜೀವಮಾನದ ಚರಿತ್ರೆಯ ಒಂದು ಅಧ್ಯಾಯವು ಕಳೆಯಿತು. ಇನ್ನೊಂದು ಅಧ್ಯಾಯ

ಆರಂಭವಾಗುತ್ತಿದೆ ಎನಿಸುತ್ತಿದೆ. ಆ ಅಧ್ಯಾಯದಲ್ಲಿ ಏನೇನಿರುವುದೋ ನಾನು ಚೆನ್ನಾಗಿ ಊಹಿಸಲಾರೆ. ನನ್ನ ಜೀವನದ ಪುಸ್ತಕವು ಮುಗಿಯಿತು.''

ಭೋವಾಲಿಯ ಹವದಿಂದಲೂ ಕಮಲಾದೇವಿಗೆ ಖಾಯಿಲೆ ವಾಸಿಯಾಗಲಿಲ್ಲ. ಯೂರೋಪಿಗೆ ಹೋಗಿ ಒಂದು ಶಾಂತವಾದ ಸ್ಥಳದಲ್ಲಿರುವುದು ಮೇಲೆಂದು ವೈದ್ಯರು ಸೂಚಿಸಿದರು. ಜವಾಹಿರಲಾಲರನ್ನು ಬಿಟ್ಟು ಹೊರಡುವುದಕ್ಕೆ ಆಕೆಗೆ ಎಷ್ಟು ಕಷ್ಟವಾಗಿದ್ದಿತೋ ಏನೋ. ಅಂತೂ ಆಕೆ ಗಟ್ಟಿಮನಸ್ಸು ಮಾಡಿ ಯೂರೋಪಿಗೆ ಹೊರಡುವುದೆಂದು ನಿಶ್ಚಯಿಸಿದಳು. ಹೊರಡುವ ಮೊದಲು ಗಾಂಧಿಯವರನ್ನು ನೋಡಬೇಕೆಂದು ಆಸೆಪಟ್ಟಳು. ಗಾಂಧಿಯವರು ಬೊಂಬಾಯಲ್ಲಿ ಬಂದು ಸೇರಿ ಆಕೆಗೆ ಸಮಾಧಾನ ಹೇಳಿ ಮನಸ್ಸಿನಲ್ಲಿ ಧೈರ್ಯವನ್ನು ತುಂಬಿ ಕಳುಹಿಸಿಕೊಟ್ಟರು. ಆಕೆ ಜರ್ಮನಿಯ ಸ್ವಾರ್ಟ್ಸ್‌ವಾಲ್ಡ್ ಪ್ರಾಂತದ ಬಾಡನ್‌ವೈಲರ್ ಎಂಬ ಸಣ್ಣ ಪಟ್ಟಣದಲ್ಲಿ ನೆಲೆಸಿದರು. ೧೯೩೫ನೆಯ ಸೆಪ್ಟೆಂಬರ್ ೪ನೆಯ ತಾರೀಖಿನ ದಿನ ಹೆಂಡತಿಯ ತೀವ್ರವಾದ ಖಾಯಿಲೆಯ ಪ್ರಯುಕ್ತ ನೆಹರೂರವರನ್ನು ಸೆರೆಮನೆಯಿಂದ ಬಿಡುಗಡೆಮಾಡಲಾಯಿತು. ನೆಹರೂರವರು ಕೂಡಲೇ ವಿಮಾನ ಹತ್ತಿ ಬಾಡನ್‌ವೈಲರ್ ಸೇರಿದರು. ನೆಹರೂರವರ ಆಗಮನದಿಂದ ಕಮಲಾದೇವಿಯ ಆರೋಗ್ಯ ಸ್ವಲ್ಪ ಸುಧಾರಿಸಿತು. ಆಗ ಕೆಲವು ದಿನಗಳವುಟ್ಟಿಗೆ ನೆಹರೂರವರು ಬೇರೆ ಬೇರೆ ಊರುಗಳಿಗೆ ಹೋಗಿಬರುತ್ತಿದ್ದರು. ಇಂಗ್ಲೆಂಡಿಗೂ ಹೋಗಿ ಬಂದರು. ೨೮–೨–೧೯೩೬ನೆಯ ದಿನ ಕಮಲಾದೇವಿ ಸ್ವರ್ಗಸ್ಥರಾದರು. ಕಡೆಗಾಲದಲ್ಲಿ ನೆಹರೂರವರೂ ಇಂದಿರೆಯೂ ಹತ್ತಿರ ಇದ್ದರು. ಕಮಲಾದೇವಿಯ ಸಾವಿನಿಂದ ನೆಹರೂರವರ ಮನೆಯ ದೀವಿಗೆ ನಂದಿಹೋಯಿತು. ಮಗಳು ಇಂದಿರೆಯನ್ನು ವ್ಯಾಸಂಗಕ್ಕಾಗಿ ಸ್ವಿಟ್ಜರ್ಲೆಂಡಿನಲ್ಲಿ ಬಿಟ್ಟು ಜವಾಹಿರರು ಯೂರೋಪಿನಿಂದ ಒಂಟಿಯಾಗಿ ಹಿಂದಿರುಗಿದರು.

ಕಮಲಾದೇವಿಯ ನಿಧನದಿಂದ ಭಾರತಕ್ಕೆ ಭಾರತವೇ ಮರುಗಿತು. ದೇಶವು ತನ್ನ ಪ್ರೇಮವೆಲ್ಲವನ್ನೂ ತೋರಿಸಿ ಜವಾಹಿರರನ್ನು ಸಮಾಧಾನಪಡಿಸಲು ಯತ್ನಿಸಿತು. ನೆಹರೂರವರಿಗೂ ದೇಶದ ಜನರ ಪ್ರೇಮ ಅರಿವಾಯಿತು. ಅವರ ಕೃತಜ್ಞತೆಯನ್ನು ಲಕ್ನೋ ಕಾಂಗ್ರೆಸ್ಸಿನ ಅಧ್ಯಕ್ಷ

ಭಾಷಣದಲ್ಲಿ ತುಂಬು ಹೃದಯದಿಂದ ವ್ಯಕ್ತಪಡಿಸಿದರು. "ನಾನೇನೋ ಆಯಾಸಗೊಂಡಿರುವೆ; ತಾಯಿಯ ಬಳಿಗೆ ಹಸುಳೆ ಬರುವಂತೆ ನಮ್ಮೆಲ್ಲರ ತಾಯಿನಾಡ ಮಡಿಲಲ್ಲಿ ಸೇರಿ ಸಮಾಧಾನಗೊಳ್ಳಲು ನಾನು ಹಿಂದಿರುಗಿ ಬಂದೆ. ಆ ಸಮಾಧಾನವು ನನ್ನೆಡೆಗೆ ಪೂರ್ಣಪ್ರವಾಹರೂಪದಿಂದ ಬರುತ್ತಲಿದೆ; ಅನುಕಂಪ ಪ್ರೀತಿಗಳಿಂದ ಸಾವಿರಾರು ದೇಶಬಂಧುಗಳು ನನಗಾಗಿ ಕೈಗಳನ್ನು ಚಾಚಿದ್ದಾರೆ; ವಿಶ್ವಾಸ ಮಮತೆಗಳ ಮಾತುಗಳನ್ನು ಕೋಟ್ಯಾಂತರ ಹೃದಯಗಳು ನೀರವವಾಗಿಯೇ ನನ್ನ ಮನಸ್ಸಿಗೆ ತಲಪಿಸುತ್ತಲಿವೆ. ಇದಕ್ಕಾಗಿ ಭಾರತದ ಸ್ತ್ರೀ—ಪುರುಷ ಸಮೂಹವನ್ನು ನಾನು ಹೇಗೆತಾನೇ ಅಭಿವಂದಿಸಲಿ? ಮಾತಿಗೆ ಅಸಾಧ್ಯವಾದ ಗಾಢಭಾವ ವನ್ನು ಮಾತುಗಳಿಂದ ಹೇಗೆ ವ್ಯಕ್ತಪಡಿಸಲಿ?" ಎಂದು ಆ ಭಾಷಣದಲ್ಲಿ ಹೇಳಿದರು.

ಆ ಅಧಿವೇಶನದಲ್ಲೇ ನೆಹರೂರವರು ಪುನಃ ರಾಷ್ಟ್ರಪತಿಯಾದರು. ವಿದೇಶಗಳಲ್ಲಿ ಸಂಚಾರಮಾಡಿ ತಿಳಿದುಕೊಂಡಿದ್ದ ಹೊಸ ಹೊಸ ರಾಜಕೀಯ ಆರ್ಥಿಕ ತತ್ತ್ವಗಳನ್ನು ದೇಶದಾದ್ಯಂತ ಸಂಚಾರಮಾಡಿ ಪ್ರಚಾರಮಾಡಿ ದರು. ಪ್ರಪಂಚ ಹೇಗೆ ಮುಂದುವರೆಯುತ್ತಿದೆ, ಭಾರತದ ಬೆಳವಣಿಗೆಗೆ ಅದರಿಂದ ಯಾವ ತರದ ಪ್ರಯೋಜನವಾಗಬಹುದು, ನಾವೂ ಯಾವ ಯಾವ ಹೊಸ ತತ್ತ್ವಗಳಿಂದ ನಮ್ಮ ರಾಜಕೀಯವನ್ನೂ ಭವಿಷ್ಯವನ್ನೂ ರೂಪಿಸಿಕೊಳ್ಳಬಹುದು ಎಂಬುದನ್ನು ಭಾರತೀಯರಿಗೆ ತಿಳಿಯಹೇಳಿದರು. ಪ್ರಪಂಚದ ಲೀಗ್ ಆಫ್ ನೇಷನ್ಸ್ ಸಂಸ್ಥೆ ಬದುಕಿದ್ದಾಗಲೂ ಸಹ ಅದು ಜಪಾನು ಮಾಂಚೂರಿಯಾವನ್ನು ಮುತ್ತಿದಾಗ, ಮುಸೋಲಿನಿ ಅಬಿಸೀನಿಯ ವನ್ನು ಕಬಳಿಸಿದಾಗ,—ಹೇಗೆ ಅಸಹಾಯಕವಾಗಿತ್ತೆಂಬುದನ್ನು ವಿವರಿಸಿ ಸಮಾಜದಲ್ಲಿ ನ್ಯಾಯ ದೊರಕಬೇಕಾದರೆ ಸೋಷಿಯಲಿಸ್ಟ್ ಅಥವಾ ಸಾಮ್ಯವಾದವನ್ನು ಎಷ್ಟುಮಟ್ಟಿಗೆ ಬಳಕೆಗೆ ತರಬೇಕೆಂಬುದನ್ನೂ ಪ್ರಚಾರ ಭಾಷಣಗಳಲ್ಲಿ ತಿಳಿಸಿದರು. ಆಗ ಕೆಲವರು ಜವಾಹಿರಲಾಲರಿಗೂ ಗಾಂಧಿ ಯವರಿಗೂ ವಿರೋಧವುಂಟಾಯಿತೆಂದುಕೊಂಡರು. ಹಲವರು ಬಾಪೂಜಿ ಯವರನ್ನು ಕೇಳಿದರು, 'ನಿಮಗಿಬ್ಬರಿಗೂ ಪೈಪೋಟಿಯಂತಲ್ಲ, ಏನು ಸಮಾಚಾರ?' ಎಂದು. ಬಾಪೂ ಹೇಳಿದರು, 'ಪೈಪೋಟಿಯೆ?

ನಮ್ಮಿಬ್ಬರಲ್ಲಿ ಯಾರು ಯಾರನ್ನು ಹೆಚ್ಚಾಗಿ ಪ್ರೀತಿಸುತ್ತೇವೆಯೋ ಎಂಬ ಪೈಪೋಟ'—ಎಂದರು. ಡಿಸೆಂಬರ್ ತಿಂಗಳು ಸಮಾಪಿಸಿತು. ಆಗ ಕಾಂಗ್ರೆಸ್ಸಿನ ಮುಂದಿನ ಸಮ್ಮೇಳನ. ಅದು ಫೈಸಪುರದಲ್ಲಿ ಸೇರುವುದಾಗಿದ್ದಿತು. ನೆಹರೂರವರ ಮನಸ್ಸು ಸಾಮ್ಯವಾದದ ಕೆಲವು ತತ್ತ್ವಗಳ ಕಡೆ ವಾಲಿತ್ತು. ಆದರೆ ಅವರ ಸಾಮ್ಯವಾದದ ತಳಹದಿ ರಷ್ಯನರ ನಿರಂಕುಶಾಧಿಕಾರವಲ್ಲ; ಪ್ರಜಾಪ್ರಭುತ್ವದ ತತ್ತ್ವಗಳಿಂದ ಪ್ರೇರಿತವಾದುದು. ಫೈಸಪುರದ ಕಾಂಗ್ರೆಸ್ಸಿನಲ್ಲೂ ಕೂಡ ನೆಹರೂರವರ ಹೆಸರನ್ನೇ ಅಧ್ಯಕ್ಷಸ್ಥಾನಕ್ಕೆ ಸೂಚಿಸಲಾಯಿತು. ನೆಹರೂರವರು ತಮ್ಮ ರಾಜಕೀಯ ತತ್ತ್ವಗಳೇನೆಂಬುದರ ವಿವರಣೆಯನ್ನು ಪ್ರಕಟಿಸಿದರು. ಅದರಲ್ಲಿ ಅವರು "ನಾನು ಕಾಣಬಯಸುವುದೇನೆಂದರೆ—ಸಮಾಜದಲ್ಲಿ ಲಾಭಾನ್ವೇಷಣೆಯ ಬುದ್ಧಿ ಹೋಗಿ, ಸೇವಾಬುದ್ಧಿ ಹುಟ್ಟಬೇಕು. ಸ್ಪರ್ಧೆ, ಸಹಕಾರಕ್ಕೆ ಎಡೆಗೊಡಬೇಕು. ಪದಾರ್ಥಗಳ ತಯಾರಿಕೆಯ ಉದ್ದೇಶ ಹಣಗಳಿಸುವುದಕ್ಕಾಗಿರಕೂಡದು. ಎಲ್ಲ ಪ್ರಜಾವರ್ಗದ ಪ್ರಯೋಜನವನ್ನೂ ಸಾಧಿಸುವುದಕ್ಕೋಸ್ಕರ ತಯಾರಿಕೆಯಾಗಬೇಕು. ಈಗ ರೂಢಿಯಲ್ಲಿರುವ ಪದ್ಧತಿ ಹೀಗಿಲ್ಲ. ಇದು ಬಲವನ್ನಾಶ್ರಯಿಸಿ ನಡೆಯುತ್ತಿರುವ ಪದ್ಧತಿಯಾಗಿದೆ. ಇದು ಹೋಗಿ ತಯಾರುಮಾಡುವವರಲ್ಲಿ ದೊಡ್ಡ ಭಾವನೆಗಳು ಹುಟ್ಟಬೇಕು. ಸರ್ವರಿಗೂ ಹಿತವಾದ ಶಾಶ್ವತವಾದ ಹೊಸ ಪದ್ಧತಿಯೊಂದು ಆರ್ಥಿಕ ಕ್ಷೇತ್ರದಲ್ಲಿ ಆಚರಣೆಗೆ ಬರಬೇಕು. ಇದನ್ನೇ ನಾನು ಸಮತಾವಾದವೆಂದು ಕರೆಯುವುದು."— ಹೀಗೆ ಹೇಳಿದರು. ಮತ್ತು ಈ ವಾದ ಸಮರ್ಥನೆಗಾಗಿ ತಾವು ದುಡಿಯುವವರೆಂದೂ, ಈ ವಾದಕ್ಕೆ ಒಪ್ಪದವರು ಬೇರೆ ಅಧ್ಯಕ್ಷರನ್ನು ಚುನಾಯಿಸಬಹುದೆಂದೂ ಮುನ್ನೆಚ್ಚರಿಕೆ ಕೊಟ್ಟರು. ನೆಹರೂರವರು ಮುಂದಿಟ್ಟಿದ್ದ ನ್ಯಾಯವಾದ ತತ್ತ್ವಗಳಿಗೆ ವಿರೋಧಿಸುವವರೂ ಇದ್ದರು. ಅವರೆಲ್ಲಾ ಬಹುಶಃ ಲಾಭಸಂಪಾದನೆಯೇ ಮುಖ್ಯ ಕಸುಬಾಗುಳ್ಳವರು. ಪ್ರಜೆಗಳ ಆವಶ್ಯಕತೆ ಅವರಿಗೆ ಬೇಕಾಗಿರಲಿಲ್ಲವೆಂದು ತೋರುತ್ತದೆ. ವಲ್ಲಭಾಯಿ ಪಟೇಲರು ಜವಾಹಿರರ ಪ್ರಕಟನೆಗೆ ಉತ್ತರ ಕೊಟ್ಟು ಅದನ್ನು ಅನುಮೋದಿಸಿದ ಮೇಲೆ ಫೈಸಪುರದ ಕಾಂಗ್ರೆಸ್ಸಿಗೂ ಅವರನ್ನೇ ಅಧ್ಯಕ್ಷರನ್ನಾಗಿ ಚುನಾಯಿಸಲಾಯಿತು.

೧೯೩೫ ರಲ್ಲಿ ಬ್ರಿಟಿಷ್ ಸರ್ಕಾರ, ಆಡಳಿತ ಕ್ರಮದಲ್ಲಿ ಕೆಲವು ಬದಲಾವಣೆಗಳನ್ನು ತಂದಿತು. ಅದರ ಪ್ರಕಾರ ಪ್ರಾಂತ ಸರ್ಕಾರಗಳು ನಿರ್ದಿಷ್ಟವಾದ ಕೆಲ ವಿಷಯಗಳನ್ನು ಬಿಟ್ಟು ಇತರ ವಿಷಯಗಳಲ್ಲಿ ಸ್ವತಂತ್ರವಾಗಿರಬಹುದೆಂದೂ ಪ್ರಜಾಪ್ರಭುತ್ವದ ನಿಯಮಗಳ ಪ್ರಕಾರ ಅವು ಚುನಾಯಿಸಲ್ಪಡಬೇಕೆಂದೂ ಗೊತ್ತಾಯಿತು. ಕಾಂಗ್ರೆಸ್ಸಿನ ಸಂಪೂರ್ಣ ಸ್ವರಾಜ್ಯ ಸ್ಥಾಪನೆಯ ತತ್ತ್ವಕ್ಕೆ ಅದು ವಿರೋಧವಾಗಿದ್ದರೂ ಆ ಕಡೆಯ ಮೊದಲ ಹೆಜ್ಜೆಗೆ ಈ ಹೊಸ ಪ್ರಾಂತ ಸರ್ಕಾರದ ಚುನಾವಣೆ ಸಹಾಯವಾಗಬಹುದೆಂದು ಊಹಿಸಿ ಕಾಂಗ್ರೆಸ್ಸು ಪ್ರಾಂತ ಸರ್ಕಾರಗಳ ಚುನಾವಣೆಗಳಲ್ಲಿ ಭಾಗವಹಿಸತಕ್ಕದ್ದೆಂದು ನಿರ್ಣಯಿಸಿತು. ಅದಕ್ಕಾಗಿ ನೆಹರೂರವರು ಪಟ್ಟ ಶ್ರಮ ಅಷ್ಟಿಷ್ಟಲ್ಲ. ತಮ್ಮ ಕರ್ತವ್ಯವನ್ನವರು ಅತಿಶಯವಾಗಿ ಪಾಲಿಸಿಕೊಟ್ಟರು. ಪ್ರವಾಸಕಾಲದಲ್ಲಿ ಅವರು ಪ್ರಚಾರವನ್ನಷ್ಟೇ ಮಾಡಲಿಲ್ಲ. ಜನಜಂಗುಳಿಯೊಡನೆ ಬೆರೆಯುತ್ತಾ ಅವರು ಅವರಲ್ಲಿ ಹೊಸ ಚೈತನ್ಯ, ಹೊಸ ಹುರುಪು, ಹೊಸ ಶ್ರದ್ಧೆ—ಒಟ್ಟಿನಲ್ಲಿ ಹೊಸ ಭಾರತವನ್ನೇ ಕಂಡರು. ಆ ವೈಖರಿಯನ್ನು ಅವರ ಮಾತುಗಳಿಂದಲೇ ಕೇಳಬಹುದು.

"ನಾಲ್ಕು ತಿಂಗಳ ಕಾಲದಲ್ಲಿ ಸುಮಾರು ೫೦,೦೦೦ ಮೈಲಿ ಪ್ರಯಾಣ ಮಾಡಿದೆ. ಸಂಚಾರ ಸೌಕರ್ಯವೆಂಬುದೇ ಇಲ್ಲದ ಗ್ರಾಮಾಂತರ ಸ್ಥಳಗಳನ್ನೂ ಕಂಡೆ. ಎಲ್ಲಾ ಬಗೆಯ ವಾಹನಗಳನ್ನೂ ಉಪಯೋಗಿಸಿದೆ. ಏರೋಪ್ಲೇನ್, ರೈಲು, ಮೋಟಾರ್ ಕಾರ್, ಮೋಟಾರ್ ಲಾರಿ, ಕುದುರೆ ಬಂಡಿ, ಎತ್ತಿನ ಬಂಡಿ, ಬೈಸಿಕಲ್, ಆನೆ, ಒಂಟೆ, ಕುದುರೆ, ಜಹಜು, ದೋಣಿ, ಹರಿಗೋಲುಗಳಲ್ಲದೆ ನಡಿಗೆ. ಜೊತೆಯಲ್ಲಿಯೇ ಮೈಕ್ರೋಫೋನ್ ಮುಂತಾದುವನ್ನೆತ್ತಿಕೊಂಡು ಹೊರಟು ದಿನಕ್ಕೆ ಹತ್ತು-ಹದಿನೈದು ಸಭೆಗಳಲ್ಲಿ ಭಾಷಣಮಾಡುತ್ತಿದ್ದೆ. ಕೆಲವು ಸಭೆಗಳಲ್ಲಿ ಲಕ್ಷಗಟ್ಟಲೆ ಜನಸ್ತೋಮ ಸೇರಿತ್ತು. ಸರಾಸರಿಯಾಗಿ ಇಪ್ಪತ್ತುಸಾವಿರ ಜನರ ಸಭೆಗಳೆನ್ನಬಹುದು. ನನ್ನ ಮಾತನ್ನು ದಿನವೊಂದಕ್ಕೆ ಒಂದು ಲಕ್ಷ ಜನರು ಮುಖತಃ ಕೇಳಿರಬೇಕು. ಒಟ್ಟು ಸುಮಾರು ಒಂದು ಕೋಟಿ ಜನರು ನನ್ನ ಮಾತುಗಳನ್ನು ಕೇಳಿರಬಹುದು. ಸಂಚಾರದಲ್ಲಿ ನನಗೆ ಜೊತೆಯಾಗಿದ್ದವರ ಸಂಖ್ಯೆಯೇ ಲಕ್ಷಗಟ್ಟಲೆಯಾಗಿರಬೇಕು."



ಭಾಷಣಕಾರ ನೆಹರು

"ಆಸೇತುಹಿಮಾಚಲ ನಾನೀರೀತಿ ಓಡಾಡಿದೆ. ಜನರ ಪರಮೋತ್ಸಾಹವನ್ನು ಕಂಡಾಗ ವಿಶ್ರಾಂತಿಯೇ ಬೇಕಾಗಲಿಲ್ಲ. ಅಷ್ಟು ಆಯಾಸ ಪ್ರಯಾಸಗಳನ್ನು ನಾನು ಸೈರಿಸಿಕೊಂಡುದು ನನಗೇ ಆಶ್ಚರ್ಯವನ್ನುಂಟು ಮಾಡಿತು. ಎಲ್ಲೆಲ್ಲಿಯೂ ನವಚೈತನ್ಯ ಉದಯಿಸಿದಂತೆ ಕಂಡಿತು. ಚುನಾವಣೆಗೆ ಮಾತ್ರವೇ ಅಲ್ಲ ಕಾಂಗ್ರೆಸ್ ಪ್ರಚಾರ; ಓಟುದಾರರಾಗಿದ್ದ ನೂರುಕೋಟಿ ಜನರಲ್ಲಿ ಮಾತ್ರವೇ ಅಲ್ಲ ನಮ್ಮ ಆದರ ವಿಶ್ವಾಸಗಳು. ಓಟುಗಳಿಲ್ಲದ ಇತರ ಕೋಟ್ಯಾಂತರ ಜನರಲ್ಲಿಯೂ ನಮಗೆ ಬಾಂಧವ್ಯವಿತ್ತು."

"ಈ ಪ್ರಚಂಡ ಸಂಚಾರದಲ್ಲಿ ಮತ್ತೊಂದು ಪರಿಣಾಮ ನನ್ನ ಮಟ್ಟಿಗಾಯಿತು. ಸಂಚಾರಮಾಡುತ್ತಾ ನನ್ನ ದೇಶದಲ್ಲಿಯೂ, ನನ್ನ ಜನರಲ್ಲಿಯೂ ಹೊಸ ಹೊಸ ಅಂಶಗಳನ್ನೂ, ಲಕ್ಷಣಗಳನ್ನೂ ಕಂಡೆ. ವೈವಿಧ್ಯವನ್ನು ಸಮೃದ್ಧಿಯಾಗಿ ಪಡೆದ ಮಾತೃಭೂಮಿಯು ಸಾವಿರಾರು ಮುಖಗಳನ್ನು ಕಾಣುತ್ತಿದ್ದರೂ ಎಲ್ಲೆಲ್ಲಿಯೂ ಎತ್ತೆತ್ತಲೂ ಭಾರತಭೂಮಿಯೆಂಬ ಮುದ್ರೆಯನ್ನು ತೋರುತ್ತಾ, ಆ ಜನಜಂಗುಳಿ ಅದ್ಭುತವಾದ ಐಕ್ಯತೆಯನ್ನು ಬೀರುತ್ತಿತ್ತು. ನನ್ನನ್ನು ಅತಿ ವಿಶ್ವಾಸದಿಂದ ಕಂಡ ಕೋಟ್ಯಾಂತರ ಲೋಚನಗಳಲ್ಲಿ ತುಂಬಿದ್ದ ಗಾಢಪ್ರೀತಿಯನ್ನು ಕಂಡು ಪುಳಕಿತನಾಗಿ ಆ ಪ್ರೀತಿಯನ್ನು ತೋರಿದ ಮನಸ್ಸುಗಳ ಆಸೆಗಳೇನಿರಬಹುದೆಂಬುದನ್ನು ತಿಳಿಯಲು ಯತ್ನಿಸಿದೆ. ಹೆಚ್ಚು ಹೆಚ್ಚಾಗಿ ಭಾರತಭೂಮಿಯನ್ನು ಕಂಡಂತೆಲ್ಲಾ ಆ ಕ್ಷೇತ್ರದ ಅಪರಿಮಿತ ರಮ್ಯತೆಯಲ್ಲಿಯೂ, ವೈವಿಧ್ಯದಲ್ಲಿಯೂ ಎಷ್ಟು ಅಲ್ಪ ಭಾಗವನ್ನು ಮಾತ್ರ ನಾನು ಕಂಡಿದ್ದೆನೆಂಬ ಸಂಕೋಚ ನನ್ನ ಮನದಲ್ಲಿ ಮೂಡಿತು. ಇನ್ನೂ ನೋಡಿ ತಿಳಿಯಬೇಕಾದ ಭಾಗವೆಷ್ಟು ಅಮೇಯವೆನ್ನಿಸುತ್ತಿತ್ತು! ದೇಶಮಾತೆ ಅನೇಕ ವೇಳೆ ನನ್ನನ್ನು ನೋಡಿ ಮುಗುಳ್ನಗೆ ನಕ್ಕಂತೆ ಕಂಡುಬರುತ್ತಿತ್ತು; ಅನೇಕ ವೇಳೆ ನನ್ನನ್ನು ನೋಡಿ ಅಪಹಾಸ್ಯಗೈದು ಕಣ್ಣೆದುರಿಗೆ ಮಾಯಗೊಂಡಂತೆ ಭಾಸವಾಗುತ್ತಿತ್ತು."

"ಅಪೂರ್ವವಾದರೂ ಅವಕಾಶ ದೊರೆತಾಗ ಒಂದೊಂದು ದಿನ ವಿರಾಮವನ್ನಿಟ್ಟುಕೊಂಡು ಸಮೀಪದಲ್ಲಿದ್ದ ದೃಶ್ಯಗಳನ್ನು ಕಣ್ಣಾರೆ ಕಾಣಲು ಹೊರಡುತ್ತಿದ್ದೆ. ಅಜಂತ ಚಿತ್ರಗಳನ್ನೂ, ಮೊಹೆಂಜುದಾರೋ

ವನ್ನೂ ಹಾಗೆಯೇ ಕಂಡೆ. ಸ್ವಲ್ಪಕಾಲ ಮಾತ್ರ ಮನಸ್ಸನ್ನು ಕನಸಿಗೊಯ್ದು ಆ ಚಿತ್ರಗಳಲ್ಲಿ ಕಂಡ ಬೋಧಿಸತ್ವರ ಸಹಾವಾಸವನ್ನೋ, ಅಪ್ಸರೆಯರ ರೂಪವನ್ನೋ ಭಾವಿಸಿಕೊಂಡು ಮನಸ್ಸಿನಲ್ಲಿ ಅವನ್ನೇ ತುಂಬಿಕೊಂಡೆನು. ಆಶ್ಚರ್ಯ! ಕೆಲದಿನಗಳ ತರುವಾಯ ಹೊಲಗಳಲ್ಲಿ ಕಳೆ ಕೀಳುತ್ತಲೋ, ಬಾವಿಯಿಂದ ನೀರು ಸೇದುತ್ತಲೋ ಇದ್ದ ಗ್ರಾಮಸ್ತ್ರೀಯರನ್ನು ಕಂಡ ಕೂಡಲೆ ಅಜಂತಾ ಚಿತ್ರಗಳಲ್ಲಿ ತಮ್ಮ ರೂಪವನ್ನು ತೋರುವ ರಮಣಿಯರ ಸೊಗಸು ಪುನಃ ಹುಟ್ಟಿಬಂದಂತೆ ಕಾಣುತ್ತಿತ್ತು.''

ಇದು ಅವರ ಸ್ವಂತ ಬರವಣಿಗೆಯ ಭಾಷಾಂತರ. ಇದರಿಂದ ಹೊರಹೊಮ್ಮಬಹುದಾದ ಇನ್ನೊಂದು ವಿಷಯವೇನೆಂದರೆ ಅವರು ಮುಂದೆ ಬರೆದ ''ಭಾರತದ ಪುನರ್ದರ್ಶನ'' (Discovery of India) ವೆಂಬ ಗ್ರಂಥಕ್ಕೆ ಈ ಪ್ರವಾಸಗಳೂ ಆ ಕಾಲದಲ್ಲಿ ಹೊರಹೊಮ್ಮಿದ ಭಾವನೆಗಳೂ ಪ್ರಚೋದಕವಾದುವೆಂಬುದು. ನೆಹರೂರವರಂತಹ ಮೇಧಾವಿಗಳೂ, ಭಾವುಕರೂ ತಮ್ಮ ಒಂದೊಂದು ಅನುಭವವನ್ನೂ ಒಂದೊಂದು ರೀತಿಯಲ್ಲಿ ಉಪಯೋಗಿಸಿಕೊಂಡು ಅವನ್ನು ಹೊಸ ದೃಷ್ಟಿಯಿಂದ ವಿವೇಚಿಸಿ ಪ್ರಪಂಚಕ್ಕೇ ಮಾರ್ಗದರ್ಶಕವಾಗಬಲ್ಲ ಗ್ರಂಥಗಳನ್ನು ನೀಡುತ್ತಾರೆ. ೧೯೩೬–೧೯೩೭ ನೆಯ ವರ್ಷಗಳನ್ನೆಲ್ಲಾ ನೆಹರೂರವರು ಪ್ರವಾಸಗಳಲ್ಲಿಯೇ ಕಳೆದರು. ಕಾಂಗ್ರೆಸ್ಸಿನ ಧ್ಯೇಯಸಾಧನೆಗಳನ್ನು ಜನತೆಗೆ ಅರಿವುಮಾಡಿ ಕೊಟ್ಟರು. ಕಾಂಗ್ರೆಸ್ಸಿಗೆ ಜನಾನುರಾಗವನ್ನೂ, ಪ್ರಜಾಬೆಂಬಲವನ್ನೂ ದೊರಕಿಸಿಕೊಟ್ಟರು. ದೇಶದ ನಾನಾ ಪ್ರಾಂತಗಳಲ್ಲದೆ ಬರ್ಮಾ ಮತ್ತು ಮಲಯಾ ಪ್ರಾಂತಗಳಲ್ಲಿಯೂ ಸಂಚಾರಮಾಡಿದರು. ಸುತ್ತಮುತ್ತಲ ದೇಶಗಳಲ್ಲಿಯೂ ಭಾರತದ ಸ್ವಾತಂತ್ರ್ಯಸಂಗ್ರಾಮದ ಅರಿವನ್ನು ಮಾಡಿ ಕೊಟ್ಟರು. ಈ ಪ್ರವಾಸಗಳ ಪರಿಣಾಮವಾಗಿ ಭಾರತದ ಒಟ್ಟು ಹನ್ನೊಂದು ಪ್ರಾಂತಗಳಲ್ಲಿ ಏಳು ಪ್ರಾಂತಗಳು ಕಾಂಗ್ರೆಸ್ ಮಂತ್ರಿಮಂಡಲ ಗಳನ್ನೇ ಪಡೆದವು.

ನೆಹರೂರವರು ಈ ಎಲ್ಲಾ ಪ್ರವಾಸಗಳನ್ನೂ ಮುಗಿಸಿಕೊಂಡು ಅನಾರೋಗ್ಯದಿಂದಿದ್ದ ತಾಯಿಯನ್ನು ನೋಡಲು ಅಲಹಾಬಾದನ್ನು ಸೇರಿದರು. ಆ ಹೊತ್ತಿಗೆ ಅವರ ಸಂಸಾರವೆಲ್ಲ ಅಲ್ಲಿ ಸೇರಿದ್ದಿತು. ವಿಜಯ

ಲಕ್ಷ್ಮಿ, ಕೃಷ್ಣೆ, ರಣಜಿತ್ ಪಂಡಿತರು— ಎಲ್ಲರೂ ಅಲ್ಲಿದ್ದರು. ತಾಯಿ, ಸ್ವರೂಪರಾಣಿಯವರು ಉತ್ತಮ ಆರೋಗ್ಯ ಹೊಂದಿದವರಹಾಗೇ ಕಾಣು ತ್ತಿದ್ದರು. ಅವರ ಮನಸ್ಸು ಉಲ್ಲಾಸವಾಗಿತ್ತು. ಆದರೆ ವಿಜಯಲಕ್ಷ್ಮಿ ರಾತ್ರಿ ಲಕ್ನೋ ರೈಲಿಗೆ ಹೊರಡಬೇಕೆಂದು ತಾಯನ್ನು ಬೀಳ್ಕೊಡಲು ಬಂದಾಗ ಅವರಿಗೆ ಮೂರ್ಛೆ ಬಂದಂತಾಯಿತು. ಡಾಕ್ಟರು ಬಂದರು. ಆದರೆ ಯಾರೂ ಏನೂ ಮಾಡುವಹಾಗಿರಲಿಲ್ಲ. ತಾ॥ ೧೦–೧–೧೯೩೮ ರ ಬೆಳಗಿನಝಾವ ಐದು ಘಂಟೆ ವೇಳೆಗೆ ಅವರ ಪ್ರಾಣಪಕ್ಷಿ ಹಾರಿ ಹೋಯಿತು. ಅವರು ತುಂಬಾ ದಿನ ಖಾಯಿಲೆಯಿಂದ ನರಳಿದ್ದರು. ಅದೇ ಸಂದರ್ಭದಲ್ಲೇ ಇನ್ನೊಂದು ಸೋಜಿಗದ ಸಂಗತಿ ನಡೆಯಿತು. ಬಾಲ್ಯ ದಿಂದ ಜವಾಹಿರರನ್ನಾಡಿಸಿದ ಅವರ ದೊಡ್ಡಮ್ಮ, ಸ್ವರೂಪರಾಣಿಯವರ ಅಕ್ಕ, ಸ್ವರೂಪರಾಣಿಯವರಿಗೆ ಶುಶ್ರೂಷೆಮಾಡಿಕೊಂಡು ಅವರ ಹತ್ತಿರವೇ ಇದ್ದರು. ಅವರನ್ನು ಎಲ್ಲರೂ ಬೀಬಿಯಮ್ಮನೆಂದು ಕರೆಯುತ್ತಿದ್ದರು. ಆಕೆ ಬಾಲವಿಧವೆ. ಸನ್ಯಾಸಿನಿಯಾಗಿ ಅವರು ನೆಹರೂರವರ ಮನೆ ಯಲ್ಲೇ ಇದ್ದುಬಿಟ್ಟಿದ್ದರು. ನೆಹರೂರವರನ್ನೂ, ಅವರ ತಂಗಿಯರನ್ನೂ ಲಾಲಿಸಿ ಪಾಲಿಸಿ ಬೆಳೆಸಿದವರು ಅವರು. ಎಲ್ಲರಿಗೂ ಅವರಲ್ಲಿ ಪ್ರೀತಿ ವಿಶ್ವಾಸಗಳು ಬಹಳ. ನೆಹರೂರವರು ತಾಯ ಕಳೇಬರವನ್ನು ದಹನಮಾಡಿ ಮನೆಗೆ ಬರುವಹೊತ್ತಿಗೆ ಆಕೆ ಖಾಯಿಲೆ ಮಲಗಿದರು. ಸ್ವರೂಪರಾಣಿ ಪ್ರಾಣಬಿಟ್ಟ ೨೪ ಘಂಟೆಗಳಿಗೆ ಸರಿಯಾಗಿ ಬೀಬಿಯಮ್ಮನೂ ಪ್ರಾಣವನ್ನರ್ಪಿಸಿದಳು. ನೆಹರೂರವರಿಗೆ ಪುನಃ ಶ್ಮಶಾನಯಾತ್ರೆ. ಬೀಬಿಯಮ್ಮ ಸನ್ಯಾಸಿನಿ. ಬಡಬಗ್ಗರ ಬಂಧುವಾಗಿಯೇ ಆಕೆ ಜೀವಿತ ವನ್ನು ಕಳೆದಿದ್ದಳು. ಜನರ ಗುಂಪಂತೂ ಹಿಂದಿನ ದಿನಕ್ಕಿಂತ ಹೆಚ್ಚಾಗಿತ್ತು. ಸಮಾಚಾರ ತಲಪಿದ ಕೂಡಲೆ ಬಾಪೂಜಿಯವರಿಂದ ತಂತಿ ಬಂತು. "ತಂಗಿಯನ್ನಗಲಿರಲಾರದ ಆಕೆಗೆ ಮೃತ್ಯುವೆಂಬುದು ಸುಖಾಶ್ರಯವಿತ್ತ ಸಖನಂತಾಯಿತು"— ಎಂದು.

ಜವಾಹಿರಲಾಲರು ತಮ್ಮ ಅಧ್ಯಕ್ಷತೆಯ ಅವಧಿಯಲ್ಲಿ ಭಾರತ ವಿಭಾಗವಾಗಬೇಕೆಂದು ಹಟಹಿಡಿದಿದ್ದ ಮಹಮ್ಮದಾಲಿ ಜಿನ್ನಾರೊಡನೆ ಬೇಕಾದಷ್ಟು ವ್ಯವಹಾರ ನಡೆಸಿ, ವೈಯಕ್ತಿಕವಾಗಿ ಕಂಡು, ಅವರ

ಹಟವನ್ನು ಬಿಡಿಸಬೇಕೆಂದು ಪ್ರಯತ್ನಿಸಿದರು. ಆದರೆ ಅದು ಸಾಧ್ಯವಾಗ ಲಿಲ್ಲ. ಜಿನ್ನಾರವರು ತುಂಬಾ ಹಟವಾದಿಗಳು. ಅವರಿಗೂ ಕಾಂಗ್ರೆಸ್ಸಿನ ನಾಯಕರಿಗೂ ಭಿನ್ನಾಭಿಪ್ರಾಯವು ಬೆಳೆಯುತ್ತಲೇ ಬಂತು. ನೆಹರೂ ರವರು ಕಾಂಗ್ರೆಸ್ಸನ್ನು ಬೆಳೆಸಿದಂತೆ ಜಿನ್ನಾರವರೂ ಮುಸ್ಲಿಂ ಲೀಗನ್ನು ಬೆಳೆಸಿದರು. ೧೯೩೮ ನೆಯ ಫೆಬ್ರುವರಿಯಲ್ಲಿ ಹರಿಪುರದಲ್ಲಿ ಕಾಂಗ್ರೆಸ್ ಸಮ್ಮೇಳನ ಸೇರಿತು. ಅದಕ್ಕೆ ಬಾಬು ಸುಭಾಸಚಂದ್ರ ಬೋಸರು ಅಧ್ಯಕ್ಷ ರಾದರು. ಇದರಿಂದ ಜವಾಹಿರರಿಗೆ ತಲೆಯ ಮೇಲಿನ ದೊಡ್ಡ ಭಾರ ಇಳಿಸಿದಂತಾಯಿತು. ಅತಿಯಾಗಿ ಆಯಾಸಪಟ್ಟಿದ್ದ ಜವಾಹಿರರು ಆಯಾಸ ವನ್ನು ಪರಿಹಾರಮಾಡಿಕೊಳ್ಳಲು ಹಿಮವತ್ಪ್ರಾಂತದ ಖಾಲಿ ಮತ್ತು ಗಹವಾರ್ಲ್ ಪ್ರದೇಶಗಳಿಗೆ ಪ್ರವಾಸ ಹೊರಟರು. ಆ ನಿಸರ್ಗದ ಮಡಲಿನಲ್ಲಿ ಅವರಿಗೆ ಬೇಕಾದ ಶಾಂತಿ ದೊರಕಿತು. ನೆಹರೂರವರು ಪುನಃ ಸಚೇತನರಾದರು.

ಹೀಗೆ ಮನಶ್ಶಾಂತಿ ಪಡೆದು ಹಿಂದಿರುಗಿದಮೇಲೆ ಏನು ಮಾಡ ಬೇಕೆಂದು ಯೋಚಿಸಿದರು. ಆ ವೇಳೆಗೆ ಯೂರೋಪಿನ ಸ್ಥಿತಿಗತಿಗಳು ಏರುಪೇರಾಗಿದ್ದುವು. ಇಟಲಿ ಅಬಿಸೀನಿಯವನ್ನು ನುಂಗಿತ್ತು. ಜರ್ಮನಿ ಹಿಟ್ಲರನ ನಾಜೀ ಪ್ರಭಾವದಿಂದ ವೀರನಾದಮಾಡುತ್ತಾ ಸಿಂಹದಂತೆ ಘರ್ಜಿಸುತ್ತಿತ್ತು. ಸ್ಪೆಯಿನಿನಲ್ಲಿ ಜನರಲ್ ಫ್ರಾಂಕೋ ರಾಜತ್ವವನ್ನೋಡಿಸಿ ದ್ದರಿಂದ, ದೇಶಕ್ಕೆ ದೇಶವೇ ಅಂತಯುದ್ಧದಲ್ಲಿ ತೊಡಗಿತ್ತು. ನೆಹರೂ ರವರಿಗೆ ಇಂತಹ ಬದಲಾವಣೆಯಾಗುತ್ತಿರುವ ಕಾಲದ ಯೂರೋಪನ್ನು ನೋಡಿಬರಬೇಕೆನ್ನಿಸಿತು. ಜೊತೆಗೆ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಭಾರತದ ಆಶಯಗಳನ್ನೂ ಅದು ಸ್ವಾತಂತ್ರ್ಯವನ್ನು ಪಡೆಯಲು ಅನುಸರಿಸು ತ್ತಿರುವ ಶಾಂತರೀತಿಯನ್ನೂ ವಿಶಾಲ ಪ್ರಪಂಚಕ್ಕೆ ತಿಳಿಸುವುದು ತುಂಬಾ ಆವಶ್ಯಕವಾಗಿದ್ದಿತು. ಪಾಶ್ಚಾತ್ಯರ ಕುತೂಹಲವನ್ನು ಕೆರಳಿಸಿ ಭಾರತದ ಸ್ವಾತಂತ್ರ್ಯಸಂಗ್ರಾಮಕ್ಕೆ ಯೂರೋಪಿನ ಬೆಂಬಲವನ್ನೂ ಸಹಾನುಭೂತಿ ಯನ್ನೂ ದೊರಕಿಸಿಕೊಳ್ಳಬೇಕಾಗಿತ್ತು. ಜೊತೆಗೆ ಭಾರತದ ಪರಿಸ್ಥಿತಿ ಯನ್ನು ದೂರದಲ್ಲಿದ್ದು ವಿವೇಚಿಸಿದರೆ ಆಗ ಅದಕ್ಕೆ ಸರಿಯಾದ ಬೆಲೆ ಕಟ್ಟ ಲಾದೀತು, ಲೋಪದೋಷಗಳ ಅರಿವಾದೀತು, ಅದರಿಂದ ಲೋಪಗಳನ್ನು

ಸರಿಪಡಿಸಲು ಸಾಧ್ಯವಾಗಬಹುದು— ಎಂಬ ಒಂದು ಯೋಚನೆಯೂ ಬಂದಿತ್ತು. ಈ ಎಲ್ಲ ವಿಷಯಗಳನ್ನೂ ಮನಸ್ಸಿನಲ್ಲಿಟ್ಟುಕೊಂಡು ಜವಾಹಿರರು ಜೂನ್ ತಿಂಗಳಲ್ಲಿ ಯೂರೋಪು ಪ್ರವಾಸವನ್ನು ಕೈಗೊಂಡರು. ಅವರಿಗೆ ಶುಭವನ್ನು ಕೋರಿ ನಡೆದ ಬೀಳ್ಕೊಡಿಗೆಯ ಸಮಾರಂಭದಲ್ಲಿ ಮಾತನಾಡುತ್ತ ವಲ್ಲಭಾಯಿ ಪಟೇಲರು 'ದೇಶದಲ್ಲಿ ಹೊಸದಾದ ಸ್ಫೂರ್ತಿಯೊಂದುಂಟಾಗಿದೆ. ದಿನದಿನಕ್ಕೆ ಕಾಂಗ್ರೆಸ್ಸಿನ ಶಕ್ತಿ ಹೆಚ್ಚುತ್ತಿದೆ. ಇಂಥ ಸಮಯದಲ್ಲಿ ಭಾರತದ ಆಕಾಂಕ್ಷೆಗಳನ್ನು ಹೊರಗಿನ ದೇಶಗಳಿಗೆ ಸಾಮರ್ಥ್ಯದಿಂದ ವಿವರಿಸಬಲ್ಲ ಶ್ರೇಷ್ಠ ಪ್ರತಿನಿಧಿಯಾಗಬಲ್ಲವರು ಜವಾಹಿರಲಾಲರೊಬ್ಬರೆ. ಅವರ ಪ್ರವಾಸದಿಂದ ಭಾರತಕ್ಕೆ ಶ್ರೇಯಸ್ಸಾಗುವುದೆಂದು ನಂಬಬಹುದು'— ಎಂದರು. ಅದರಂತೆ ಭಾರತದ ಪ್ರವಾಸಪ್ರತಿನಿಧಿಯಾಗಿ ಜವಾಹಿರ ಲಾಲರು ಯೂರೋಪಿಗೆ ಪ್ರಯಾಣ ಬೆಳೆಸಿದರು.

ಜೂನ್ ತಿಂಗಳಿಂದ ನವೆಂಬರ್ ತಿಂಗಳಿನವರೆಗೆ ಜವಾಹಿರರು ಯೂರೋಪಿನ ವಿವಿಧ ರಾಜ್ಯಗಳಲ್ಲಿ ಸಂಚರಿಸಿದರು. ಮೊದಲು ಸ್ಪೈನಿಗೆ ಹೋದರು. ಅಲ್ಲಿ ಫ್ರಾಂಕೋ ಸರ್ವಾಧಿಕಾರಕ್ಕೂ ಪ್ರಜಾಪ್ರಭುತ್ವದ ಅನುಯಾಯಿಗಳಿಗೂ ಅಂತರ್ಯುದ್ಧವಾಗುತ್ತಿದ್ದುದನ್ನು ನೋಡಿದರು. ಕೆಲವು ದಿವಸಗಳು ಅಲ್ಲೇ ಇದ್ದು, ವಿಮಾನಧಾಳಿಯ ಪ್ರಥಮ ಅನುಭವ ವನ್ನು ಪಡೆದರು. ಪ್ರಜಾಪಕ್ಷದ ಸೈನಿಕರು ಯುದ್ಧಮಾಡುತ್ತಿದ್ದ ರಣರಂಗದ ಹಿನ್ನೆಲೆಗೆ ಹೋಗಿ ಯುದ್ಧರಂಗದ ಪ್ರಥಮ ಅನುಭವವನ್ನು ಪಡೆದು ಅವರಿಗೆ ಉತ್ತೇಜನದ ಮಾತನ್ನಾಡಿದರು. ಯುದ್ಧರಂಗದ ಮಧ್ಯದಲ್ಲಿ ಬಂದುನಿಂತು ತಮಗೆ ಸಹಾನುಭೂತಿಯನ್ನು ತೋರಿಸಿದ ನೆಹರೂರವರ ಧೈರ್ಯಕ್ಕೆ ಆ ಜನಗಳು ಮನಸೋತರು. ಸ್ಪೈನಿನಿಂದ ಜವಾಹಿರರು ಇಂಗ್ಲೆಂಡಿಗೆ ಹೋದರು. ಅಲ್ಲಿ ಅನೇಕ ಸಭೆಗಳಲ್ಲಿ ಭಾಷಣಮಾಡಿದರು. ಅನೇಕ ಪತ್ರಿಕೆಗಳಿಗೆ ಲೇಖನಗಳನ್ನು ಬರೆದರು. 'ಭಾರತವು ಸ್ವತಂತ್ರ ವಾಗುತ್ತಿದೆ. ಯೂರೋಪಿನಲ್ಲಿ ಪ್ರಚಾರವಾಗುತ್ತಿರುವ ಸರ್ವಾಧಿಕಾರವೇ ಯೂರೋಪಿನಲ್ಲಿ ಗೆಲುವನ್ನು ಸಂಪಾದಿಸಬಹುದು. ಆದರೆ ಯೂರೋಪೇ ಪ್ರಪಂಚವಲ್ಲ. ನಾವು ಅಂತಹ ಸರ್ವಾಧಿಕಾರ ಪ್ರಭುತ್ವಕ್ಕೆ ದೂರವಾಗಿ ರುತ್ತೇವೆ'— ಇತ್ಯಾದಿಯಾಗಿ ಉಪನ್ಯಾಸಗಳನ್ನು ಕೊಟ್ಟರು. ಭಾರತದ

ಧ್ಯೇಯಸಾಧನೆಗಳನ್ನು ವಿವರಿಸಿದರು. ಭಾರತದ ವಿಚಾರವಾಗಿ ಮಾತ್ರವಲ್ಲ, ಯೂರೋಪಿಗೇ ನಾಜೀ ಪ್ರಭುತ್ವದಿಂದ ಅಪಾಯ ಒದಗುತ್ತದೆಯೆಂದು ಸೂಚನೆ ಕೊಟ್ಟರು. ಸ್ಪೈಯಿನಿನ ಪ್ರಜಾಪಕ್ಷಕ್ಕೆ ಇಂಗ್ಲೆಂಡು ಸಹಾಯ ಮಾಡುವುದು ಆವಶ್ಯಕವೆಂದು ಹೇಳಿ ಇಂಗ್ಲೆಂಡಿನ ಟ್ರೆಫಾಲ್ಗರ್ ಸ್ಕ್ವೇರಿನಲ್ಲಿ ನಿಂತು ಉಪನ್ಯಾಸಮಾಡುತ್ತಿದ್ದಾಗ ಅವರ ಮಗಳು ಇಂದಿರೆ ಸ್ಪೈಯಿನಿನ ಪ್ರಜಾಪಕ್ಷದ ಧ್ವಜವನ್ನು ಹಿಡಿದು ಮಗ್ಗುಲಲ್ಲಿ ನಿಂತಿದ್ದಳು. ಬ್ರಿಟಿಷರು ಜರ್ಮನಿಯ ಸರ್ವಾಧಿಕಾರವನ್ನು ಖಂಡಿಸುವುದನ್ನು ಪ್ರಸ್ತಾಪಿಸಿ ಅವರು ಜರ್ಮನಿಯನ್ನು ಖಂಡಿಸುವ ಮೊದಲು ತಮ್ಮ ಸಾಮ್ರಾಜ್ಯಷಾಹಿಯ ತತ್ತ್ವವನ್ನು ತ್ಯಜಿಸಬೇಕೆಂದೂ ಇಲ್ಲದಿದ್ದರೆ ಅವರ ಮಾತಿನಲ್ಲಿ ಇತರರಿಗೆ ನಂಬಿಕೆ ಬರಲಾರದೆಂದೂ ಅನೇಕ ಸಾರ್ವಜನಿಕ ಭಾಷಣಗಳಲ್ಲಿ ಹೇಳಿದರು. ಹಾಗೆಯೇ ಫ್ರಾನ್ಸ್, ಜೆಕೋಸ್ಲೋವೇಕಿಯಾಗಳಲ್ಲೂ ಸಂಚಾರಮಾಡಿ ಭಾಷಣಗಳನ್ನು ಮಾಡಿದರು. ಫ್ರಾನ್ಸಿಗೂ, ಜೆಕೋಸ್ಲೋವೇಕಿಯಾಕ್ಕೂ ನಾಜೀ ಜರ್ಮನಿಯಿಂದ ಆಗಬಹುದಾದ ಅಪಾಯವನ್ನು ಸೂಚಿಸಿದರು. ಹೀಗೆ, ಯೂರೋಪಿನಲ್ಲಿ ಸಂಚಾರಮಾಡಿ ಭಾರತೀಯ ಸ್ವಾತಂತ್ರ್ಯದ ಚಳುವಳಿಗೆ ಸಹಾನುಭೂತಿಯನ್ನು ಸಂಪಾದಿಸಿಕೊಂಡು ಬಂದರು. ಸಾಮ್ರಾಜ್ಯಷಾಹೀ ರಾಷ್ಟ್ರಗಳಿಂದ ಯಾವ ಸಣ್ಣ ರಾಷ್ಟ್ರ ತೊಂದರೆಗೀಡಾಗಿದ್ದರೂ ಅದಕ್ಕೆ ಕೈಲಾದ ಸಹಾಯ ಮಾಡಬೇಕೆಂಬುದು ನೆಹರೂರವರ ಇಷ್ಟ. ಅದರಂತೆ ಚೀನಾಕ್ಕೆ ಚಿಕಿತ್ಸಕರ ಗುಂಪೊಂದನ್ನು ಕಾಂಗ್ರೆಸ್ಸಿನ ಪರವಾಗಿ ಕಳುಹಿಸಿಕೊಡಲಾಯಿತು. ಹಾಗೇ ಸ್ಪೈನ್ ಜನರಿಗೂ ಕೂಡ ಆಹಾರವಸ್ತುಗಳನ್ನು ಕಳುಹಿಸಿದರು. ಯೂರೋಪಿನಿಂದ ಹಿಂದಿರುಗುವಾಗ ಅವರು ಅಲ್ಲಿಯ ಸ್ಥಿತಿಗತಿಗಳನ್ನು ಚೆನ್ನಾಗಿ ಮನನಮಾಡಿದ್ದರು. ಭಾರತಕ್ಕೆ ವಾಪಸು ಬಂದಕೂಡಲೇ ಯೂರೋಪಿನಲ್ಲಿ ಬೇಗನೆ ಯುದ್ಧ ಷುರುವಾಗುವುದೆಂದು ಭವಿಷ್ಯ ನುಡಿದರು.

ನೆಹರೂರವರು ಭಾರತಕ್ಕೆ ವಾಪಸುಬಂದಾಗ ಭಾರತದ ಸ್ಥಿತಿಯೂ ಹದಗೆಟ್ಟಿತ್ತು. ದೇಶೀಯ ಸಂಸ್ಥಾನಾಧಿಪತಿಗಳು ಪ್ರಜೆಗಳಿಗೆ ರಾಜಕೀಯ ಹಕ್ಕುಬಾಧ್ಯತೆಗಳನ್ನು ಕೊಡದೆ ಪೀಡಿಸುತ್ತಿದ್ದರು. ಅದರ ಸಂಬಂಧದಲ್ಲಿ ರಾಜಕೋಟೆಯಂತಹ ಪುಟ್ಟ ಸಂಸ್ಥಾನದಲ್ಲಿ ಗಾಂಧಿಯವರೇ ಸತ್ಯಾಗ್ರಹ

ಹೂಡಿ ಉಪವಾಸ ವ್ರತ ಮಾಡಬೇಕಾಯಿತು. ಬ್ರಿಟಿಷರೇ ಭಾರತದಲ್ಲಿ ಅಂತಹ ಹಕ್ಕುಗಳನ್ನು ಕೊಟ್ಟಿರುವಾಗ ಈ ರಾಜರದೇನು ಕಿರುಕುಳ! ಭಾರತದ ಪ್ರಜೆಗಳೆಲ್ಲರೂ ಒಂದೇ ಅಲ್ಲವೆ?—ಎಂದು ದೇಶೀಯ ಸಂಸ್ಥಾನದ ಕಾಂಗ್ರೆಸ್ ಪ್ರತಿನಿಧಿಗಳು ತಮ್ಮ ಸ್ವಾತಂತ್ರ್ಯವನ್ನು ಸಂಪಾದಿಸಿಕೊಳ್ಳಲು, ಲೂಧಿಯಾನಾದಲ್ಲಿ ೧೯೩೯ರಲ್ಲಿ ಸಂಸ್ಥಾನಗಳ ಪ್ರಜಾ ಸಮ್ಮೇಳನವೊಂದನ್ನು ನಡೆಸಿದರು. ಜವಾಹಿರಲಾಲರವರೇ ಅದರ ಅಧ್ಯಕ್ಷರಾಗಿದ್ದು ದೇಶೀಯ ಸಂಸ್ಥಾನಗಳಲ್ಲಿ ನಡೆಸಬೇಕಾದ ಕಾರ್ಯಕ್ರಮಗಳನ್ನು ಸೂಚಿಸಿದರು. ಕಾಂಗ್ರೆಸ್ಸಿನಲ್ಲೂ ಒಡಕು ತಲೆದೋರಿತು. ಅಧ್ಯಕ್ಷರಾದ ಸುಭಾಸಚಂದ್ರ ಬೋಸರು ಗಾಂಧೀ ತತ್ತ್ವಗಳನ್ನು ಒಪ್ಪಲಿಲ್ಲ. ಕಾಂಗ್ರೆಸ್ಸು ಹುಟ್ಟಿದಾಗಿನಿಂದ ಆ ತತ್ತ್ವಗಳನ್ನೇ ಬಲವಾಗಿ ಹಿಡಿದುಕೊಂಡಿತ್ತು. ಬೋಸರು ಮತ್ತು ಅವರ ಕೆಲವು ಅನುಯಾಯಿಗಳ ವಿನಾ ಬೇರೆ ಯಾರೂ ಗಾಂಧೀ ತತ್ತ್ವಗಳನ್ನು ಬಿಡಲು ಒಪ್ಪಲಿಲ್ಲ. ಅದರಲ್ಲೂ ಎಲ್ಲ ಹಿರಿಯನಾಯಕರೂ ಗಾಂಧೀ ತತ್ತ್ವವಾದಿಗಳೇ ಆಗಿದ್ದರು. ಕಾಂಗ್ರೆಸ್ಸಿಗೆ ಅದು ರಕ್ತಗತವಾಗಿ ಹೋಗಿತ್ತು. ನೆಹರೂರವರು ಈ ವೈಮನಸ್ಯಗಳನ್ನು ಸರಿಪಡಿಸಲು ಮಾಡಿದ ಪ್ರಯತ್ನಗಳೆಲ್ಲಾ ನಿಷ್ಫಲವಾದುವು. ೧೯೩೯ರಲ್ಲಿ ಕಾಂಗ್ರೆಸ್ ಸಮ್ಮೇಳನ ತ್ರಿಪುರಿಯಲ್ಲಿ ನಡೆಯಬೇಕಾಯಿತು. ಈ ಸಲವೂ ಬೋಸರೇ ಅಧ್ಯಕ್ಷರಾಗಿ ಆರಿಸಿ ಬಂದರು. ಆದರೆ ಕಾರ್ಯಕಾರೀ ಸಮಿತಿಯವರಿಗೂ ಬೋಸರಿಗೂ ಹೊಂದಾಣಿಕೆಯಾಗಲಿಲ್ಲ. ಜವಾಹಿರಲಾಲರೂ ಕೂಡಿ ಹದಿಮೂರು ಜನ ಆ ಸಮಿತಿಗೆ ರಾಜೀನಾಮೆ ಸಲ್ಲಿಸಿದರು. ಅವರನ್ನು ಬಿಟ್ಟು ಕಾಂಗ್ರೆಸ್ ಸಂಸ್ಥೆ ನಡೆಯಲಾರದೆಂದು ಯೋಚಿಸಿ ಸುಭಾಸಚಂದ್ರಬೋಸರವರೇ ಕಾಂಗ್ರೆಸ್ಸಿಗೆ ರಾಜೀನಾಮೆಯನ್ನು ಕೊಟ್ಟು ಫಾರ್ವರ್ಡ್ ಬ್ಲಾಕ್ ಎಂಬ ಹೊಸ ಪಕ್ಷವನ್ನು ಸ್ಥಾಪಿಸಿದರು.

ತಾ॥ ೩–೯–೧೯೩೯ನೆಯ ದಿನ ಇಂಗ್ಲೆಂಡು ಜರ್ಮನಿಯ ಮೇಲೆ ಯುದ್ಧ ಘೋಷಿಸಿತು. ಇಂಗ್ಲೆಂಡು ಯುದ್ಧ ಹೂಡಿದಾಗಲೇ ಭಾರತವೂ ಯುದ್ಧ ಹೂಡಿದಂತಾಯಿತೆಂದು ವೈಸರಾಯಿ ತಿಳಿಸಿದನು. ಯಾರ ಯುದ್ಧಕ್ಕೆ ಯಾರು ಹೊಡೆದಾಡಬೇಕು? ಈ ಚರ್ಚೆ ನಡೆಯುತ್ತಿರುವಾಗ ಜವಾಹಿರರು ಜಪಾನಿನಿಂದ ತೊಂದರೆಗೊಳಗಾಗಿದ್ದ ಚೀನಾವನ್ನು ನೋಡಿ

ಬರಬೇಕೆಂದುಕೊಂಡರು. ಚೀನಾ ದೇಶ ಪುರಾತನವಾದ ಉತ್ತಮ ಸಂಸ್ಕೃತಿಯನ್ನು ಹೊಂದಿದ್ದ ದೇಶ. ಭಾರತಕ್ಕೆ ನೆರೆನಾಡು. ಅವರ ಕಷ್ಟದಲ್ಲಿ ಸಹಾನುಭೂತಿಯನ್ನು ತೋರಿಸುವುದು ಭಾರತದ ಕರ್ತವ್ಯವೆಂದುಕೊಂಡು ನೆಹರೂರವರು ಚೀನಾಕ್ಕೆ ಪ್ರಯಾಣಮಾಡಿ ಅಲ್ಲಿ ಹದಿನೈದು ದಿವಸಗಳಿದ್ದು, ಜಪಾನೀಯರ ವಿಮಾನಧಾಳಿಯ ಅನುಭವಪಡೆದು ಚಿಯಾಂಗ್-ಕೈ-ಷೇಕ್‌ರವರೊಡನೆ ಮಾತುಕತೆಗಳನ್ನು ನಡೆಸಿ ಭಾರತದ ಸಹಾನುಭೂತಿಯನ್ನು ತೋರಿಸಿ ಬಂದರು. ಹಾಗೇ ಸಿಲೋನಿಗೂ ಭೇಟಿಕೊಟ್ಟರು. ಚೀನೀಯರೂ ಕೂಡ ಭಾರತದ ಬಗ್ಗೆ ತುಂಬಾ ಸಹಾನುಭೂತಿಯುಳ್ಳವರಾಗಿದ್ದಾರೆಂದು ಆ ಪ್ರವಾಸದಿಂದ ತಿಳಿಯಿತು. ಭಾರತದ ಸ್ವಾತಂತ್ರ್ಯದ ಹೋರಾಟಕ್ಕೆ ಅವರ ನೈತಿಕ ಬೆಂಬಲವನ್ನೂ ಅವರು ಪಡೆದು ಬಂದರು. ಅವರು ಬರುವುದನ್ನೇ ಕಾದಿದ್ದ ಕಾಂಗ್ರೆಸ್ ಕಾರ್ಯಕಾರೀ ಸಮಿತಿ ಅವರೊಡನೆ ಯುದ್ಧಘೋಷಣೆಯಿಂದಾದ ಹೊಸ ಪರಿಸ್ಥಿತಿಯನ್ನು ಪರಿಶೀಲಿಸಿತು. ಸಾಕಷ್ಟು ಚರ್ಚೆಗಳಾದ ಮೇಲೆ ಈ ರೀತಿ ನಿರ್ಣಯಮಾಡಿತು. "ಕಾಂಗ್ರೆಸ್ಸು ಎಂದೂ ನಾಜೀ ತತ್ತ್ವವನ್ನು ಪುರಸ್ಕರಿಸುವುದಿಲ್ಲ. ಅದು ಯಾವಾಗಲೂ ಪ್ರಜಾರಾಜ್ಯದ ತತ್ತ್ವಕ್ಕೆ (Democracy) ತನ್ನ ಒಪ್ಪಿಗೆಯನ್ನು ಕೊಡುತ್ತದೆ. ಈಗಲೂ ಕಾಂಗ್ರೆಸ್ಸಿನ ಬೆಂಬಲವು ಈ ಪ್ರಜಾರಾಜ್ಯದ ತತ್ತ್ವಕ್ಕಾಗಿ ಹೋರಾಡುವ ರಾಷ್ಟ್ರಗಳ ಕಡೆಗೇ ಇದೆ. ಇಂಗ್ಲೆಂಡು ಯುದ್ಧಾನಂತರದಲ್ಲಿ ಭಾರತಕ್ಕೆ ಪ್ರಜಾರಾಜ್ಯದ ತತ್ತ್ವದ ಆಧಾರವುಳ್ಳ ಸರಕಾರವನ್ನು ಕೊಡಬೇಕು. ತನ್ನ ಉದ್ದೇಶವು ಹೀಗೆಂದು ಈಗಲೇ ಬ್ರಿಟಿಷ್ ಸರಕಾರವು ಪ್ರಕಟಿಸುವುದಾದರೆ ಕಾಂಗ್ರೆಸ್ಸು ತನ್ನ ಪೂರ್ಣ ಸಹಕಾರವನ್ನು ಬ್ರಿಟಿಷರ ಯುದ್ಧಕ್ಕೆ ನೀಡುವುದು. ಆದುದರಿಂದ ಬ್ರಿಟಿಷ್ ಸರ್ಕಾರವು ಯುದ್ಧದ ಧ್ಯೇಯ (War Aims) ವೇನೆಂಬುದನ್ನು ಘೋಷಿಸಲಿ." ಆದರೆ ಇಂಗ್ಲೆಂಡು ಈ ರೀತಿಯ ಅಭಿಪ್ರಾಯವನ್ನು ಹೊಂದಿರಲಿಲ್ಲವಾದ್ದರಿಂದ ಅಂತಹ ಘೋಷಣೆಯನ್ನು ಅದು ಹೊರಡಿಸಲಿಲ್ಲ. ಈ ಅಭಿಪ್ರಾಯ ಘೋಷಣೆಯ ಬಗ್ಗೆ ವೈಸರಾಯರು ಗಾಂಧೀಜಿ ಮತ್ತು ಜವಾಹಿರರನ್ನು ಕರೆಸಿಕೊಂಡು ವಿಚಾರವಿನಿಮಯ ಮಾಡಿದರು. 'ಯುದ್ಧಕ್ಕೆ ಈಗ ಬೆಂಬಲ ಕೊಡಿ. ಯುದ್ಧ ಮುಗಿದಮೇಲೆ ಆ ವಿಷಯಗಳನ್ನು ಚರ್ಚಿಸೋಣ' — ಎಂಬುದು

ಅವರ ವಾದವಾಯಿತು. ನೆಹರೂರವರು ಅದಕ್ಕೆ ಒಪ್ಪಲಿಲ್ಲ. ಸಂಧಾನ ಮುರಿದುಬಿದ್ದ ಕೂಡಲೇ ನೆಹರೂರವರು ಪ್ರಾಂತಗಳಲ್ಲಿ ಮಂತ್ರಿಮಂಡಲಗಳನ್ನು ರಚಿಸಿ ಕಾರ್ಯನಿರತರಾಗಿದ್ದ ಕಾಂಗ್ರೆಸ್ ಮಂತ್ರಿಮಂಡಲಿಗಳಿಗೆ ರಾಜೀನಾಮೆ ಕೊಡುವಂತೆ ಸೂಚಿಸಿದರು. ಮಂತ್ರಿಮಂಡಲಗಳು ರಾಜೀನಾಮೆ ಇತ್ತುವು. ಅಲ್ಲೆಲ್ಲಾ ಗವರ್ನರ ಆಡಳಿತಗಳು ಏರ್ಪಾಟಾದುವು.

ಕಾಂಗ್ರೆಸ್ಸಿಗೆ ಸುಮ್ಮನೆ ಕೂಡುವುದಾಗಲಿಲ್ಲ. ಈ ಕಷ್ಟಕಾಲದಲ್ಲಿ ಇಂಗ್ಲಿಷಿನವರಿಗೆ ತೊಂದರೆಕೊಡಲೂ ಗಾಂಧಿಯವರು ಒಪ್ಪಲಿಲ್ಲ. ಆದರೂ ಕಾಂಗ್ರೆಸ್ಸು ತನ್ನ ಅಸಹಕಾರವನ್ನು ಸರ್ಕಾರದ ಗಮನಕ್ಕೆ ತರುವ ಪ್ರಯುಕ್ತ ಹೊಸರೀತಿಯ ಸತ್ಯಾಗ್ರಹವನ್ನಾಚರಿಸಬೇಕೆಂದು ಗಾಂಧಿಯವರು ಸೂಚಿಸಿದರು. ಯುದ್ಧಕಾರ್ಯದಲ್ಲಿ ನಿರತರಾಗಿರುವ ಬ್ರಿಟಿಷರಿಗೆ ಕೈಕಟ್ಟಿದಂತಾಗಬಾರದು. ಏತಕ್ಕೆಂದರೆ ಅವರೂ ಸರ್ವಾಧಿಕಾರಕ್ಕೆದುರಾಗಿಯೇ ಹೊಡೆದಾಡುತ್ತಿದ್ದಾರೆ. ಆದರೆ ಹಾಗೆಂದು ಕಾಂಗ್ರೆಸ್ಸು ತನ್ನ ಅಸಮ್ಮತಿಯನ್ನೂ ಸೂಚಿಸದೆ ಇರಬಾರದು. ಇಂತಹ ಒಂದು ಹೊಸ ಬಗೆಯ ಸತ್ಯಾಗ್ರಹವೇ ವೈಯಕ್ತಿಕ ಸತ್ಯಾಗ್ರಹ. ಭಾಷಣ ಸ್ವಾತಂತ್ರ್ಯದ ಹಕ್ಕಿನ ಸಂಬಂಧವಾಗಿ ಕಾಯಿದೆಭಂಗವನ್ನು ಮಾಡುವುದೆಂದು ಗೊತ್ತಾಯಿತು. ತಾವು ಹೆಸರಿಸುವವರು ಮಾತ್ರವೇ ಆ ಸತ್ಯಾಗ್ರಹವನ್ನು ಮಾಡತಕ್ಕದ್ದೆಂದು ಗಾಂಧಿಯವರು ಸೂಚಿಸಿದರು. ಮತ್ತು ಮೊದಲನೆಯ ಹೆಸರಾಗಿ ಆಚಾರ್ಯ ವಿನೋಬಾಭಾವೆಯವರನ್ನು ಸೂಚಿಸಿದರು. ವಿನೋಬಾ ಭಾವೆಯವರ ಕಡೆ ಭಾರತದ ಗಮನ ಹರಿದದ್ದು ಆಗಲೇ. ವಿನೋಬಾ ಭಾವೆಯವರು ಸರಕಾರಕ್ಕೆ ಸೂಚನೆಕೊಟ್ಟು ಚಳುವಳಿಯನ್ನು ಪ್ರಾರಂಭ ಮಾಡಿದರು. ಕೂಡಲೇ ಅವರು ದಸ್ತಗಿರಿಯಾದರು. ಗಾಂಧಿಯವರು ನೆಹರೂರವರ ಹೆಸರನ್ನು ಎರಡನೆಯ ಸತ್ಯಾಗ್ರಹಿಯಾಗಿ ಹೆಸರಿಸಿದರು. ಆದರೆ ನೆಹರೂರವರು ಸತ್ಯಾಗ್ರಹವನ್ನು ಷುರುಮಾಡುವ ಮೊದಲೇ ಸರ್ಕಾರ ಅವರನ್ನು ಬಂಧಿಸಿತು. ಭಾರತ ರಕ್ಷಣಾ ಶಾಸನದ (Defence of India Act) ಪ್ರಕಾರ ಅವರಿಗೆ ನಾಲ್ಕು ವರ್ಷಗಳ ಜೈಲುವಾಸವನ್ನು ವಿಧಿಸಲಾಯಿತು. ಇಷ್ಟು ಕಠಿಣವಾದ ಶಿಕ್ಷೆಯನ್ನು ಕೇಳಿ ಭಾರತೀಯರೂ

ವಿದೇಶೀಯರೂ ತುಂಬಾ ಕೋಪಗೊಂಡರು. ಐದು ವರುಷಗಳಾದನಂತರ ಪುನಃ ನೆಹರೂರವರು ಡೆಹರಾಡೂನ್ ಸೆರೆಮನೆಯನ್ನು ಪ್ರವೇಶಿಸಿದರು.

ದೂರಾಲೋಚನೆಯಿಲ್ಲದ ಸರ್ಕಾರ ನೆಹರೂರವರಿಗೆ ನಾಲ್ಕು ವರ್ಷಗಳ ಶಿಕ್ಷೆಯನ್ನೇನೋ ವಿಧಿಸಿತು. ಆದರೆ ಅಂತರರಾಷ್ಟ್ರೀಯ ಸ್ಥಿತಿಗತಿಗಳು ಅವರನ್ನು ಬೇಗನೆ ಬಿಡುಗಡೆ ಮಾಡಿಸಿದುವು. ದೇಶೀಯ ವಿದೇಶೀಯ ಪತ್ರಿಕೆಗಳು ನೆಹರೂರವರ ಶಿಕ್ಷೆಯ ಬಗ್ಗೆ ಪ್ರತಿಭಟಿಸಿ ಟೀಕೆಮಾಡಿದುವು. ಜೊತೆಗೆ ಯುದ್ಧದಲ್ಲಿ ಜಪಾನೀಯರ ಕೈವಾಡ ಮೇಲಾಗುತ್ತಾ ಬಂದು ಅವರು ಭಾರತವನ್ನೂ ಆಕ್ರಮಿಸಿಕೊಳ್ಳುವ ಹೆದರಿಕೆ ಹುಟ್ಟಿತು. ಈ ಮಧ್ಯೆ ಚೀನಾದ ನಾಯಕರಾದ ಚಿಯಾಂಗ್-ಕೈ-ಷೇಕ್‌ರವರು ಪತ್ನೀಸಮೇತರಾಗಿ ಭಾರತಕ್ಕೆ ಭೇಟಿಕೊಡುವ ಸುದ್ದಿ ಬಂತು. ಆ ಕಾಲದಲ್ಲಿ ಚಿಯಾಂಗ್-ಕೈ-ಷೇಕ್ ಮತ್ತು ಮ್ಯಾಡಮ್ ಚಿಯಾಂಗರ ಸ್ನೇಹವನ್ನೂ ಮೆಚ್ಚುಗೆಯನ್ನೂ ಸಂಪಾದಿಸಿಕೊಂಡುಬಂದಿದ್ದ ನೆಹರೂರವರನ್ನು ಸೆರೆಯಲ್ಲಿಟ್ಟಿರುವುದು ಬ್ರಿಟಿಷ್ ಸರ್ಕಾರಕ್ಕೆ ಅವಮಾನಕರವಾಗಿ ತೋರಿತು. ಯುದ್ಧ ಇಷ್ಟು ಹತ್ತಿರಕ್ಕೆ ಬಂದು ಮದರಾಸಿನ ಬಂದರಿಗೆ ಬಾಂಬ್ ಬೀಳುವ ಹೆದರಿಕೆ ಹತ್ತಿರವಾದಹಾಗೆಲ್ಲಾ ಬ್ರಿಟಿಷರು ನೆಹರೂರವರನ್ನು ಬಿಡುಗಡೆಮಾಡಿ ಏನಾದರೂ ಉಪಾಯದಿಂದ ಭಾರತದ ಮೈತ್ರಿಯನ್ನು ಸಂಪಾದಿಸುವುದೂ, ಭಾರತ ತನ್ನ ಎಲ್ಲ ಸಾಮರ್ಥ್ಯದಿಂದ ಶತ್ರುವನ್ನೆದುರಿಸುವಂತೆ ಮಾಡುವುದೂ ಆವಶ್ಯಕವಾಯಿತು. ಈ ಎಲ್ಲಾ ಕಾರಣಗಳಿಂದ ಬ್ರಿಟಿಷ್ ಸರ್ಕಾರವು ಸೆರೆಮನೆಗೆ ಸೇರಿದ ಹದಿಮೂರು ತಿಂಗಳಿಗೇನೇ ನೆಹರೂರವರನ್ನು ಬಿಡುಗಡೆ ಮಾಡಿತು. ಭಾರತದ ರಾಜಕೀಯ ಪರಿಸ್ಥಿತಿ ದಿನದಿನಕ್ಕೆ ಕೆಡುತ್ತಾ ಬಂದುದರಿಂದ ಇಂಗ್ಲೆಂಡಿನ ಪ್ರಧಾನಿ ಚರ್ಚಿಲ್ಲರು ಯುದ್ಧಕ್ಕೆ ಭಾರತದ ಸಹಕಾರವನ್ನು ಪಡೆಯುವ ಉದ್ದೇಶದಿಂದ ಸರ್ ಸ್ಟ್ಯಾಫರ್ಡ್‌ಕ್ರಿಪ್ಸ್‌ರವರನ್ನು ಸಂಧಾನಕ್ಕಾಗಿ ಕಳುಹಿಸಿದರು. ಕ್ರಿಪ್ಸರು ಭಾರತದ ಪ್ರಮುಖ ರಾಜಕಾರಿಣಿಗಳನ್ನೆಲ್ಲಾ ಕಂಡು ಅವರ ಮನೋಗತಗಳನ್ನು ತಿಳಿದುಕೊಂಡರು. ಮೊದಮೊದಲು ಕ್ರಿಪ್ಸರ ಮಾತುಗಳಿಂದ ಭಾರತಕ್ಕೂ ಬ್ರಿಟನ್ನಿಗೂ ರಾಜಿಯಾಗುವ ಸಂಭವ ತೋರಿಬಂದಿತಾದರೂ ಅವರ ಕಡೆಕಡೆಯ ಮಾತುಗಳಿಂದ ಯಾವ ಫಲವೂ ದೊರೆಯದಂತಾಯಿತು.

ಕ್ರಿಪ್ಸರವರ ಸಂಧಾನ ಮುರಿದುಬಿದ್ದಮೇಲೆ ನೆಹರೂರವರು ತಮ್ಮ ಮಗಳು ಇಂದಿರಾ ಪ್ರಿಯದರ್ಶಿನಿಯ ಮದುವೆ ಮಾಡಿದರು. ಇಂದಿರೆ ಶಾಂತಿನಿಕೇತನದಲ್ಲಿಯೂ ಆಮೇಲೆ ಸ್ವಿಟ್ಸರ್ಲೆಂಡಿನಲ್ಲಿಯೂ ವ್ಯಾಸಂಗ ಮಾಡಿದವಳು. ತುಂಬಾ ಆಧುನಿಕರೀತಿಯ ಸಂಸ್ಕಾರವನ್ನು ಪಡೆದವಳು. ಮದುವೆ ಪ್ರಸ್ತಾಪ ಬಂದಾಗ, ಅವಳು ಫಿರೋಜ್ ಗಾಂಧಿಯನ್ನು ಮದುವೆಯಾಗುವುದಾಗಿ ಹೇಳಿದಳು. ಫಿರೋಜ್ ಗಾಂಧಿ ಎಂಬ ಹೆಸರಲ್ಲಿರುವ 'ಗಾಂಧಿ' ಎಂಬ ಪದವನ್ನು ಕೇಳಿ ಅನೇಕರು ಈತನು ಮಹಾತ್ಮಾ ಗಾಂಧಿಯವರ ಸಂಬಂಧೀಕನೆಂದು ತಿಳಿದಿದ್ದಾರೆ. ಅದು ಸರಿಯಲ್ಲ. ಫಿರೋಜ್ ಗಾಂಧಿ ತುಂಬ ದಿವಸಗಳಿಂದ ನೆಹರೂರವರ ಮನೆಯಲ್ಲಿಯೇ ಇದ್ದಾತ. ಅನೇಕ ಸಮಯಗಳಲ್ಲಿ ನೆಹರೂರವರಿಗೆ ಅವರ ಕಾರ್ಯದರ್ಶಿಯಂತೆ ಕೆಲಸ ಮಾಡಿದವನು. ಯೂರೋಪಿನಲ್ಲಿ ಕಮಲಾ ನೆಹರು ರೋಗಗ್ರಸ್ಥಳಾಗಿದ್ದಾಗಂತೂ ಅತಿ ವಿಶ್ವಾಸದಿಂದ ಆಕೆಯ ಶಿಶ್ರೂಷೆ ಮಾಡಿದ್ದಾತ. ಸಹವಾಸದಿಂದ ಇಂದಿರೆ ಫಿರೋಜರು ಒಬ್ಬರನ್ನೊಬ್ಬರು ಪ್ರೀತಿಸಿದ್ದರು. ಕ್ರಮೇಣ ಆ ಪ್ರೇಮ ದೃಢವಾಯಿತು. ಆದರೆ ಫಿರೋಜ್ ಗಾಂಧಿ ಪಾರ್ಸಿ ಜಾತಿಯವರು. ಗಾಂಧಿ ಎಂಬ ಹೆಸರನ್ನಿಟ್ಟುಕೊಂಡಿದ್ದ ಗುಜರಾಥಿ. ಅನೇಕ ದೃಷ್ಟಿಗಳಿಂದ ಫಿರೋಜ್ ಗಾಂಧಿ, ಜವಾಹಿರಲಾಲರಂತಹ ಲೋಕವಿಖ್ಯಾತರಾದ ಬ್ರಾಹ್ಮಣಕುಲದ ರಾಜಕಾರಿಣಿಯ ಮಗಳಿಗೆ ಅನುರೂಪನಲ್ಲವೆಂದು ತೋರಿರಬೇಕು. ಆದರೆ ನೆಹರೂರವರೂ ಹಳೆಯ ಕಂದಾಚಾರಗಳಲ್ಲಿ ನಂಬಿಕೆಯಿಲ್ಲದವರು. ಮುಖ್ಯವಾಗಿ ಇರುವ ಒಬ್ಬ ಮಗಳು ಸುಖವಾಗಿರುವುದೇ ಅವರಿಗೆ ಬೇಕಾದುದು. ಮಗಳ ಸೌಖ್ಯವನ್ನೇ ಗುರಿಯಾಗಿಟ್ಟುಕೊಂಡ ತಂದೆ ಜಾತಿ ಮತಗಳ ಅಥವಾ ಸಮಾಜದಲ್ಲಿನ ಸ್ಥಾನಮಾನಗಳ ಕಾರಣದಿಂದ ಪ್ರೇಮದ ಮದುವೆಯನ್ನು ನಿಷೇಧಿಸಲಾದೀತೇ? ಉದಾರಚಿತ್ತರಾದ ನೆಹರೂರವರೂ ಒಪ್ಪಿದರು. ಬಾಪೂಜಿಯ ಆಶೀರ್ವಾದವೂ ಲಭಿಸಿತು. ಇಂದಿರೆ ಮತ್ತು ಫಿರೋಜ್ ಗಾಂಧಿಯವರ ವಿವಾಹವು ತುಂಬಾ ಸರಳರೀತಿಯಲ್ಲಿ ನಡೆಯಿತು. ಈ ಮದುವೆಯಾದ ಮೇಲೆ ನೆಹರೂರವರ ತಲೆಯಮೇಲಿನ ಭಾರ ತುಂಬಾ ಕಡಿಮೆಯಾಯಿತು. ಇನ್ನುಮುಂದೆ ಸಾಂಸಾರಿಕವಾದ ಯಾವ ಯೋಚನೆಯೂ ಅವರನ್ನು ಬಾಧಿಸುವಂತಿರಲಿಲ್ಲ.

ತಮ್ಮ ಸಮಸ್ತ ಕಾಲವನ್ನೂ ರಾಜಕೀಯಕ್ಕೇ ಮತ್ತು ದೇಶಸೇವೆಗೇ ಮುಡುಪಾಗಿಟ್ಟರು.

ಪ್ರಪಂಚದ ಎರಡನೆಯ ಮಹಾಯುದ್ಧ ಘೋರವಾಗುತ್ತಾ ಬಂತು. ಬ್ರಿಟಿಷರು ಕಾಂಗ್ರೆಸ್ಸು ಕೇಳಿದಂತೆ ಯುದ್ಧದ ಧ್ಯೇಯಗಳನ್ನು ಪ್ರಕಟಿಸಲಿಲ್ಲ. ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುತ್ತೇವೆಂದೂ ಹೇಳಲಿಲ್ಲ. ಕ್ರಿಪ್ಸರ ಸಂಧಾನ ವಿಫಲವಾಯಿತು. ಆಗ ಗಾಂಧಿಯವರು ಹೊಸದೊಂದು ಸ್ಫೂರ್ತಿಯುತವಾದ ಕಹಳೆಯನ್ನೂದಿದರು. ಅದೇ "ಬ್ರಿಟೀಷರೇ ಭಾರತವನ್ನು ಬಿಟ್ಟು ಹೊರಡಿ" (Quit India) ಎಂಬ ಘೋಷಣೆ. ರಾಮನಾಮ ಭಾರತದಲ್ಲಿ ಹಬ್ಬಿದಂತೆ ಈ ಘೋಷಣೆ ಆಸೇತುಹಿಮಾಚಲಪರ್ಯಂತ ಆಬಾಲವೃದ್ಧರಾದಿಯಾಗಿ ಎಲ್ಲರ ಬಾಯಲ್ಲೂ ನಲಿದಾಡಿತು. ಬ್ರಿಟಿಷರ ಇರುವಿಕೆ ಅಸಹನೀಯವಾಯಿತು. ಆದರೆ ಅದು ಯುದ್ಧದ ಕಾಲ. ಯಾರೂ ಅಲ್ಲಾಡುವಹಾಗಿರಲಿಲ್ಲ. ೯–೮–೧೯೪೨ರಲ್ಲಿ ಬೊಂಬಾಯಲ್ಲಿ ಕಾಂಗ್ರೆಸ್ ಕಾರ್ಯಕಾರೀ ಸಮಿತಿ ಸೇರಬೇಕೆಂದು ಗೊತ್ತಾಯಿತು. ಅಲ್ಲಿ ಮಹತ್ವದ ಕಾರ್ಯಕ್ರಮವನ್ನು ರೂಪಿಸಬೇಕಾಗಿತ್ತು. ಆ ಕಮಿಟಿ ಸೇರಿದ್ದರೆ ಮಹಾ ಅನರ್ಥವುಂಟಾಗುವುದೆಂದು ಬ್ರಿಟಿಷರು ಹೆದರಿದರು. ಆದ್ದರಿಂದ ೯ನೆಯ ತಾರೀಖು ಬೆಳಗಿನಝಾವ ಐದು ಘಂಟೆಗೇ ಎಲ್ಲ ಕಾರ್ಯಕಾರೀ ಸಮಿತಿಯ ಸದಸ್ಯರುಗಳನ್ನೂ ಅವರವರಿದ್ದ ಸ್ಥಳಗಳಲ್ಲಿಯೇ ದಸ್ತಗಿರಿ ಮಾಡಲಾಯಿತು. ಮತ್ತು ಅವರನ್ನೆಲ್ಲಾ ಅಜ್ಞಾತವಾದ ಸ್ಥಳದಲ್ಲಿಟ್ಟಿತು. ಈ ಸುದ್ದಿ ಹರಡಿದಕೂಡಲೇ ದೇಶದಾದ್ಯಂತ ಹರತಾಳಗಳೂ ಸಭೆ ಸಮಾರಂಭಗಳೂ ನಡೆದುವು. ಸರಿಯಾದ ನಾಯಕರಿಲ್ಲದುದರಿಂದ ಹಲಕೆಲವು ಸ್ಥಳಗಳಲ್ಲಿ ಅನ್ಯಾಯಗಳೂ ನಡೆದುವು. ಆದರೂ ಗಾಂಧೀ ತತ್ತ್ವದಲ್ಲಿಯೂ ಅಹಿಂಸಾ ತತ್ತ್ವದಲ್ಲಿಯೂ ತಯಾರಾದ ಭಾರತೀಯರು ಹಿಂಸಾವೃತ್ತಿಗೆ ಹೆಚ್ಚು ಎಡೆಗೊಡಲಿಲ್ಲ. ಸರ್ಕಾರವಾದರೋ ತುಂಬಾ ಕ್ರೂರವಾಗಿ ಜನರನ್ನು ಹಿಂಸಿಸಿತು. ಜವಾಹಿರರು ಇತರ ಮಿತ್ರರುಗಳೊಡನೆ ಅಹಮದಾಬಾದ್ ಜೈಲಿನಲ್ಲಿದ್ದರು. ಎಲ್ಲ ಕಾರ್ಯಕಾರೀ ಸಮಿತಿಯ ಸದಸ್ಯರೂ ಅಲ್ಲೇ ಇದ್ದುದರಿಂದ ಒಂದು ಬಗೆಯಲ್ಲಿ ಸಂತೋಷವಾಗಿಯೇ ಅಲ್ಲಿ ಅವರು ಕಾಲವನ್ನು ಕಳೆದರು. ವಾರಕ್ಕೊಂದುಬಾರಿ ನೆಹರೂರವರು

ಆ ಎಲ್ಲ ಸ್ನೇಹಿತರಿಗೂ ಟೀ ಮಾಡಿಕೊಡುತ್ತಿದ್ದರಂತೆ. ಅವರು ಮಾಡಿದ ಟೀ ತುಂಬಾ ರುಚಿಕರವಾಗಿರುತ್ತಿದ್ದುದರಿಂದ ಆ 'ಟೀ'ಗೆ ವಾರವೆಲ್ಲಾ ಸ್ನೇಹಿತರು ಬಾಯಿಬಿಟ್ಟುಕೊಂಡು ಕಾದಿರುತ್ತಿದ್ದರಂತೆ. ಈ ಅಹಮದಾಬಾದ್ ಜೈಲುವಾಸವೇ ನೆಹರೂರವರ ಕಡೆಯ ಜೈಲುವಾಸ. ಅಲ್ಲದೆ ಇನ್ನೊಂದು ದೃಷ್ಟಿಯಿಂದ ಅದು ಇನ್ನೂ ಮಹತ್ವಪೂರ್ಣವಾದುದು. ಈ ಜೈಲುವಾಸ ದಲ್ಲೇ ನೆಹರೂರವರು ತಮ್ಮ ಅಮರವಾದ "ಭಾರತದ ಪುನರ್ದರ್ಶನ" (Discovery of India) ಎಂಬ ಗ್ರಂಥವನ್ನು ಬರೆದರು. ಅದು ಭಾರತದ ಪುನರ್ದರ್ಶನವೂ ಅಹುದು, ನೆಹರೂರವರ ಪುನರ್ದರ್ಶನವೂ ಅಹುದು. ನೆಹರೂರವರ ಕಲಾತ್ಮಕ ದೃಷ್ಟಿಯಲ್ಲಿ ಭಾರತ ಹೇಗೆ ಕಂಡಿತೆಂಬುದನು ಅಲ್ಲಿ ಕಾಣಿಸಿದೆ. ತಮ್ಮ ಜೀವಮಾನದಲ್ಲಿ ಪಡೆದ ಪ್ರಪಂಚದ ಅನುಭವ ಗಳನ್ನೆಲ್ಲಾ ಅಲ್ಲಿ ವಿವರಿಸಿದ್ದಾರೆ, ವಿವೇಚಿಸಿದ್ದಾರೆ ನೆಹರೂರವರು. ನೆಹರೂ ರವರ ಪುಸ್ತಕಗಳಲ್ಲೆಲ್ಲಾ ಅತ್ಯುತ್ತಮವಾದ ಪುಸ್ತಕ ಇದು. ಅವರ ಹೃದಯಾಂತರಾಳವನ್ನು ಹೊಕ್ಕು, ನಿಜವಾದ, ಹಿರಿಯ ಜೀವನದ ನೆಹರೂ ರವರನ್ನು ಅದು ಧ್ವನಿಸುತ್ತದೆ. ಪ್ರಪಂಚದ ಸುಪ್ರಸಿದ್ಧ ಲೇಖಕರ ಹೆಸರಿನ ಜೊತೆಗೆ ನೆಹರೂರವರ ಹೆಸರನ್ನೂ ಸೇರಿಸುವಂತೆ ಮಾಡುತ್ತದೆ.

೧೯೪೫ರಲ್ಲಿ ದ್ವಿತೀಯ ಮಹಾಯುದ್ಧ ನಿಂತಿತು. ಜುಲೈ ತಿಂಗಳಲ್ಲಿ ನೆಹರೂರವರು ಬಿಡುಗಡೆಯಾದರು. ಯುದ್ಧ ಮುಗಿದ ಮೇಲೆ ಇಂಗ್ಲೆಂಡಿನ ಚುನಾವಣೆಗಳಲ್ಲಿ ಲೇಬರ್ (ಕೂಲಿಕಾರ) ಪಕ್ಷಕ್ಕೆ ಜಯ ಲಭಿಸಿತು. ಅದೂ ಭಾರತದ ಒಂದು ಪುಣ್ಯವೆಂದೇ ಹೇಳಬೇಕು. ಯುದ್ಧಕಾಲದ ಚರ್ಚಿಲ್ ಸರ್ಕಾರದ ರೀತಿನೀತಿಗಳಿಗೂ ತದನಂತರ ಬಂದ ಅಟ್ಲಿ ಸರ್ಕಾರದ ರೀತಿ ನೀತಿಗಳಿಗೂ ಅಜಗಜಾಂತರ ವ್ಯತ್ಯಾಸ. ಒಂದು ಸಾಮ್ರಾಜ್ಯಷಾಹಿ, ಇನ್ನೊಂದು ಅದಕ್ಕೆ ವಿರೋಧ. ಅಲ್ಲದೆ ಯುದ್ಧ ಮುಗಿಯುವವರೆಗೂ ಏನೋ ಒಂದು ಹುಮ್ಮಸ್ಸಿನಲ್ಲಿದ್ದ ಇಂಗ್ಲೆಂಡು ಯುದ್ಧ ಮುಗಿಯುವ ಹೊತ್ತಿಗೆ ಬಳಲಿ ಬೇಸತ್ತು ಹೋಗಿತ್ತು. ಅದರ ಆರ್ಥಿಕಸ್ಥಿತಿ ತೀರ ಅಸ ಮರ್ಪಕವಾಗಿತ್ತು. ಬಾಂಬಿನ ಧಾಳಿಯಿಂದ ಜರ್ಝರಿತವಾಗಿದ್ದ ದೇಶವನ್ನು ಅದು ಪುನರುಜ್ಜೀವನಗೊಳಿಸಬೇಕಾಗಿತ್ತು. ಭಾರತದಂತಹ ವಸಾಹತು ಗಳನ್ನು ಸಂರಕ್ಷಿಸಿಕೊಳ್ಳುವ ಉಪಪತ್ತಿಯಾಗಲೀ ಶಕ್ತಿಯಾಗಲೀ ಅದಕ್ಕಿರ

ಲಿಲ್ಲ. ಜೊತೆಗೆ ಭಾರತದ ವೀರರು ಒಂದಾಗುತ್ತಲೊಂದು ಚಳುವಳಿಯನ್ನು ಹೂಡುತ್ತಾ, ದೇಶಕ್ಕೆ ದೇಶವೇ ಸರ್ಕಾರಕ್ಕೆ ಎದುರುಬಿದ್ದು, ಬಲವಂತದ ಆಡಳಿತ ಕುಸಿದುಬೀಳುವಂತೆ ಮಾಡಿದ್ದರು. ಈ ಸಂದರ್ಭದಲ್ಲಿ ಎದುರು ಬಿದ್ದ ಭಾರತವನ್ನು ಆಳುವುದು ಕಷ್ಟವೆಂದು ಅಟ್ಲಿ ಸರ್ಕಾರ ಮನಗಂಡಿತು. ಮೇಲಾಗಿ ಅವರು ಸಾಮ್ರಾಜ್ಯವಾದಿಗಳೂ ಅಲ್ಲ. ಇವೆಲ್ಲಾ ಸನ್ನಿವೇಶಗಳ ಧರ್ಮಕರ್ಮ ಸಂಯೋಗದಿಂದ ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಟ್ಟು ಅದರ ಸ್ನೇಹ ಸೌಹಾರ್ದ ಸಹಕಾರಗಳನ್ನು ಪಡೆಯಬೇಕೆಂದು ಅಟ್ಲಿ ಸರ್ಕಾರವು ಭಾರತಕ್ಕೆ ಸ್ವಾತಂತ್ರ್ಯ ಕೊಡುವುದಾಗಿ ಘೋಷಿಸಿತು. ಅದರಂತೆ ಬ್ರಿಟಿಷ್ ಸರ್ಕಾರದ ಮೂವರು ಮಂತ್ರಿಗಳ ಮಂಡಲಿಯೊಂದನ್ನು ಕಳುಹಿಸಿ ಅಧಿಕಾರ ವರ್ಗಾವಣೆಯ ಬಗ್ಗೆ ಸಲಹೆ ಸೂಚನೆಗಳನ್ನು ಕೊಡುವಂತೆ ಹೇಳಿತು. ಇನ್ನೂರು ವರುಷ ಪ್ರಭುತ್ವ ನಡೆಸಿದ ಬ್ರಿಟಿಷರು 'ಸ್ವಾತಂತ್ರ್ಯವನ್ನು ಕೊಡುತ್ತೇವೆ, ತೆಗೆದುಕೊಳ್ಳಿ' ಎಂದು ಹೇಳುತ್ತಿದ್ದರೂ ಭಾರತದಲ್ಲಿ ಒಮ್ಮುಖವಾಗಿ ನಿಂತು, ಅಂತಹ ಒತ್ತಾಯದಿಂದಾದ ಔದಾರ್ಯವನ್ನು ಸ್ವೀಕರಿಸುವ ಒಮ್ಮ ಸಮ್ಮತವಿರಲಿಲ್ಲ. ಮಂತ್ರಿಮಂಡಲದ ನಿಯೋಗದವರು ಕಾಂಗ್ರೆಸ್ಸಿಗೂ ಮುಸ್ಲಿಂ ಲೀಗಿಗೂ ಇರುವ ಮಹತ್ತರವಾದ ಬಿರುಕನ್ನು ಕಂಡರು. ಮಹಮ್ಮದಾಲಿ ಜಿನ್ನಾರವರು ಎಷ್ಟು ಹೇಳಿದರೂ ಏಕರಾಷ್ಟ್ರ ತತ್ತ್ವಕ್ಕೆ ಒಪ್ಪಲಿಲ್ಲವಾದ್ದರಿಂದ ಬ್ರಿಟಿಷ್ ಮಂತ್ರಿಮಂಡಲದವರ ಸಂಧಾನ ಮುರಿದುಬಿದ್ದಂತಾಯಿತು. ಅವರು ಕೊನೆಗೆ ಭಾರತೀಯರು ಅವರ ರಾಜ್ಯಾಂಗವನ್ನು (Constitution) ಅವರೇ ಸ್ವತಂತ್ರವಾಗಿ ರೂಪಿಸಿ ಕೊಳ್ಳಬೇಕೆಂದು ಹೇಳಿಕೆಯಿತ್ತರು. ಅವರ ಹೇಳಿಕೆಯಲ್ಲಿ ಭಾರತವನ್ನು ಎರಡು ಭಾಗವಾಗಿ ಮಾಡಬೇಕಾಗುವುದೆಂಬ ಸಲಹೆ ಸೂಚಿತವಾಗಿತ್ತು. ಹೊಸದಾಗಿ ವೈಸರಾಯರಾಗಿದ್ದ ಲಾರ್ಡ್ ವೇವಲ್ಲರು ಕೋಮುವಾರು ಪ್ರಾತಿನಿಧ್ಯದ ಹೊಸ ಸರ್ಕಾರದ ಘಟನೆಯ ವಿಧಾನವನ್ನು ತಿಳಿಸಿ ಯಾವ ಸಂಸ್ಥೆ — ಕಾಂಗ್ರೆಸ್, ಮುಸ್ಲಿಂ ಲೀಗ್ ಇವೆರಡರಲ್ಲಿ— ಒಪ್ಪಿಗೆ ಕೊಡದಿದ್ದರೂ ಲಕ್ಷಿಸುವುದಿಲ್ಲವೆಂದೂ, ಒಪ್ಪಿಗೆಯಿಂದ ಮುಂದೆ ಬರುವ ಸಂಸ್ಥೆಗೆ ಅಧಿಕಾರವನ್ನು ವಹಿಸಿಬಿಡುವುದಾಗಿಯೂ ಘೋಷಿಸಿದರು. ಕಾಂಗ್ರೆಸ್ ಸಂಸ್ಥೆಯಂತೂ ಮೊದಲಿನಿಂದ ಇದಕ್ಕೆ ಒಪ್ಪಿಯೇ ಇತ್ತು.

ಮುಸ್ಲಿಂ ಲೀಗೂ ಕೂಡ ಈ ಸದವಕಾಶವನ್ನು ಕಳೆದುಕೊಂಡುಬಿಟ್ಟರೆ ಮುಂದೆ ಕಾಂಗ್ರೆಸ್ಸೇ ಬಲವಾಗುವುದೆಂದು ಹೆದರಿ ಮಂತ್ರಿಮಂಡಲದಲ್ಲಿ ಭಾಗವಹಿಸುವುದಾಗಿ ಹೇಳಿತು. ಅದರಂತೆ ನೆಹರೂರವರು, ವೈಯಕ್ತಿಕವಾಗಿ ಕೋಮುವಾರು ಪ್ರಾತಿನಿಧ್ಯಕ್ಕೆ ವಿರೋಧಿಗಳಾದರೂ, 'ಮೊದಲು ಆಡಳಿತ ಕೈಗೆ ಬರಲಿ, ಆಮೇಲೆ ಈ ಕೋಮುವಾರುಭೂತವನ್ನು ಸದೆಬಡಿದರಾಯಿತು'—ಎಂದುಕೊಂಡು ಆ ಕೋಮುವಾರು ಪ್ರಾತಿನಿಧ್ಯದ ಮಂತ್ರಿಮಂಡಲಕ್ಕೆ ನಾಯಕರಾಗಿ ನಿಂತು ಭಾರತ ಸರ್ಕಾರದ ಜವಾಬುದಾರಿಯನ್ನು ಹೊತ್ತರು. ಈ ನೂತನ ಮಂತ್ರಿಮಂಡಲ, ತಾತ್ಕಾಲಿಕ ಸರ್ಕಾರ (Interim Government) ವೆಂಬ ಹೆಸರಿನಿಂದ ತಾರೀಖು ೧–೯–೧೯೪೬ ನೆಯ ದಿವಸ ಅಧಿಕಾರ ವಹಿಸಿತು. ಆ ದಿನವೇ ಭಾರತಕ್ಕೆ ಸ್ವಾತಂತ್ರ್ಯ ಬಂದ ದಿನವೆಂದು ಕರೆದರೂ ಕರೆಯಬಹುದಾಗಿದೆ. ರೇಡಿಯೋ ಮೂಲಕ ಭಾಷಣ ಮಾಡುತ್ತಾ ಜವಾಹಿರರು ಹೀಗೆ ಹೇಳಿದರು: "ಈ ಪ್ರಪಂಚವು ಹೋರಾಟದ ನಡುವೆ, ಭಿನ್ನಭಾವನೆಗಳ ನಡುವೆ, ಅನಿವಾರ್ಯವಾಗಿ ಏಕಮತ್ಯದ ಕಡೆಗೆ ಮುಂದುವರಿಯುತ್ತಿದೆ. ಏಕಪ್ರಪಂಚ—ಪ್ರಜಾಪ್ರಭುತ್ವ ಸಂಘದ (World Commonwealth) ಕಡೆಗೆ ಮುಂದುವರಿಯುತ್ತಿದೆ. ಈ ಏಕಪ್ರಪಂಚದ ಭಾವನೆಗೇ ಸ್ವತಂತ್ರ ಭಾರತವು ದುಡಿಯುವುದು. ಸ್ವತಂತ್ರ ಜನಾಂಗಗಳ ಇಷ್ಟಪೂರ್ವಕವಾದ ಸಹಕಾರವು ಸ್ಥಾಪಿತವಾಗಿ, ಪಂಗಡಗಳ ಕಲಹಗಳು ಕೊನೆಗೊಂಡ ಈ ಏಕಪ್ರಪಂಚ—ಪ್ರಜಾಪ್ರಭುತ್ವದ ಭಾವನೆಗಾಗಿಯೇ ಭಾರತವು ದುಡಿಯುವುದು. ಭಾರತವು ಚಲಿಸತೊಡಗಿದೆ. ಹಳೆಯ ವಿಧಾನಗಳು ಹೋದುವು. ಬಹಳ ಕಾಲದಿಂದ ನಾವು ಸ್ತಬ್ಧರಾಗಿ ಪ್ರೇಕ್ಷಕರಾಗಿದ್ದೇವೆ. ಇತರರ ಕೈಗೊಂಬೆಗಳಾಗಿದ್ದೇವೆ. ಈಗ ನಮ್ಮ ಜನಕ್ಕೆ ಕೈ ಬಂದಿದೆ. ನಮ್ಮ ಇಷ್ಟಕ್ಕೆ ಅನುಗುಣವಾದ ಇತಿಹಾಸವನ್ನು ರಚಿಸುತ್ತೇವೆ. ಈ ಘನವಾದ ಕಾರ್ಯದಲ್ಲಿ ಎಲ್ಲರೂ ಸೇರೋಣ. ಭಾರತವು ನಮ್ಮ ಹೃದಯಕ್ಕೆ ಮೆಚ್ಚಿಕೆಯಾಗುವಂತೆ ಮಾಡೋಣ. ರಾಷ್ಟ್ರಗಳಲ್ಲಿ ದೊಡ್ಡದೂ, ಪ್ರಗತಿಯ ಮತ್ತು ಶಾಂತಿಯ ಕಲೆಗಳಲ್ಲಿ ಅಗ್ರೇಸರವಾದುದೂ ಎನಿಸುವಂತೆ, ಭಾರತವನ್ನು ಮುಂದಕ್ಕೆ ಒಯ್ಯೋಣ." ಇಂತಹ ಉನ್ನತವಾದ ಆಸೆ ಆಕಾಂಕ್ಷೆಗಳನ್ನೊ

ಧ್ಯೇಯುಗಳನ್ನೂ ಇಟ್ಟುಕೊಂಡು ನೆಹರೂರವರು ರಾಜ್ಯಸೂತ್ರಗಳನ್ನು ಕೈಗೆ ತೆಗೆದುಕೊಂಡರೂ ದಾರಿಯಲ್ಲಿ ಮುಳ್ಳುಹಾಸಿದಂತೆ ಮುಸ್ಲಿಂ ಲೀಗು ರಾಜಕಾರಣದಲ್ಲಿ ಹೆಜ್ಜೆ ಹೆಜ್ಜೆಗೂ ಅಡಚಣೆಗಳನ್ನೊಡ್ಡಿತು. ವಾಸ್ತವವಾಗಿ ಮುಸ್ಲಿಂ ಲೀಗು ಮಂತ್ರಿಮಂಡಲವನ್ನುಸೇರಿದುದಕ್ಕೆ ಕಾರಣ, ಸಹಕಾರವಲ್ಲ, ಕಾಂಗ್ರೆಸ್ಸು ಕೆಲಸ ನಡೆಸದಂತೆ ಅಡ್ಡಿ ಆತಂಕಗಳನ್ನೊಡ್ಡುವುದು. ಇದರಲ್ಲಿ ಅದು ಯಶಸ್ವಿಯೂ ಆಯಿತು.

ಜಿನ್ನಾರವರು ರಾಷ್ಟ್ರವಿಭಜನೆಯ ತತ್ತ್ವವನ್ನು ಪ್ರಚಾರ ಮಾಡುತ್ತಾ ಬಂದರು. ಕಡೆಗೆ ಆಗಸ್ಟ್ ೧೬ನೆಯ ತಾರೀಖನ್ನು ಪಾಕೀಸ್ಥಾನದ ಸ್ಥಾಪನೆಗಾಗಿ ಹೋರಾಟದ ದಿನ (Direct Action Day) ವೆಂದು ಸಾರಿದರು. ಅದೊಂದು ಭಾರತದ ಚರಿತ್ರೆಯಲ್ಲಿ ದುರ್ದಿನ. ಕಲ್ಕತ್ತಾ, ಬೀಹಾರ ಪ್ರಾಂತಗಳಲ್ಲೂ ಪಶ್ಚಿಮದ ಕಡೆ ಪಂಜಾಬಿನಲ್ಲೂ ಆ ದಿನ ಪ್ರಾರಂಭವಾದ ದುಷ್ಕೃತ್ಯಗಳಿಗೆ ಕೊನೆಮೊದಲಿಲ್ಲ. ಕೊಲೆ, ಸುಲಿಗೆ, ದರೋಡೆ; ಹೆಂಗಸರ ಅಪಮಾನ, ಮಾನಭಂಗ, ಅಪಹರಣ; ಮನೆಗಳಿಗೆ ಬೆಂಕಿಹಚ್ಚುವುದು, ಹಳ್ಳಿ ಹಳ್ಳಿಗಳನ್ನೇ ಸುಡುವುದು, ಬಲವಂತವಾಗಿ ಮತಾಂತರಗೊಳಿಸುವುದು—ಹೀಗೆ ನಾನಾರೀತಿಗಳ 'ಚಿತ್ರಹಿಂಸೆ-ಯಮನ ಬಾಧೆ' ನಡೆಯಿತು. ಮುಹಮ್ಮದೀಯರು ಭಾರತದಲ್ಲಿ ಕಾಲಿಟ್ಟ ಕಾಲದಿಂದ ಅಂದರೆ ಕ್ರಿ. ಶ. ೭೧೨ರಲ್ಲಿ ಮಹಮುದ್-ಬಿನ್-ಕಾಸಿಂ ಎಂಬ ಅರಬ್ ಯೋಧನು ಸಿಂಧುನದಿಯ ಪ್ರಾಂತದಲ್ಲಿ ನೆಲಸಿದ ಕಾಲದಿಂದ ಇದುವರೆಗೆ ೧,೨೩೪ ವರ್ಷಗಳಿಂದ ನೆಲಸಿದ್ದ ಹಿಂದೂ ಮುಹಮ್ಮದೀಯರ ಮೈತ್ರಿ ಅಂದು ಒಡೆಯಿತು. ೧,೨೦೦ ವರ್ಷಗಳಿಂದ ನಡೆಯುದಿದ್ದ ಹತ್ಯಾಕಾಂಡ ಅಂದು ಜರುಗಿತು. ಅಹಿಂಸೆಯೇ ಪಾರಾಯಣದ ಮಂತ್ರವಾಗಿದ್ದ ಗಾಂಧಿಯವರಿಗೆ ಇದು ಸಹಿಸದಾಯಿತು. ಯಾರೆಷ್ಟು ತಡೆದರೂ ಕೇಳದೆ, ಜೀವದ ಹಂಗುತೊರೆದು ಗಾಂಧಿಯವರು ನೌಖಾಲಿ ಪ್ರಾಂತಗಳಲ್ಲಿ ಸಂಚಾರಮಾಡಿ ಆ ಹತ್ಯಾಕಾಂಡವನ್ನು ನಿಲ್ಲಿಸಿದರು. ನೊಂದವರಿಗೆ ಸ್ವಾಂತವಚನಗಳನ್ನಾಡಿ ದುಃಖಶಮನಮಾಡಿದರು. ಜವಾಹಿರರು ಬೀಹಾರಕ್ಕೆ ತೆರಳಿ ಅಲ್ಲಿಯ ಪರಿಸ್ಥಿತಿಯನ್ನು ಹತೋಟಿಗೆ ತಂದರು. ಈ ಅನ್ಯಾಯದ ಅಂಟುಜಾಡ್ಯ ದೆಹಲಿಗೂ ಆವರಿಸುವುದರಲ್ಲಿತ್ತು. ನೆಹರೂ

ರವರು, "ನಾವು ನ್ಯಾಯವಾದ ರೀತಿಯಲ್ಲಿ ಹೋಗೋಣ. ಇನ್ನೊಬ್ಬರು ತಪ್ಪು ದಾರಿಯಲ್ಲಿ ಹೋಗುತ್ತಿದ್ದಾರೆ, ಆದ್ದರಿಂದ ನಾವೂ ತಪ್ಪು ದಾರಿಯಲ್ಲಿ ಹೋಗೋಣ ಎನ್ನುವುದು ಸರಿಯಲ್ಲ. ದುಷ್ಕೃತ್ಯಗಳಿಗೆ ದುಷ್ಫಲಗಳೂ, ಸತ್ಕೃತ್ಯಗಳಿಗೆ ಸತ್ಫಲಗಳೂ ಲಭಿಸುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ನಾವು ಸನ್ಮಾರ್ಗದಲ್ಲಿಯೇ ನಡೆಯೋಣ"—ಎಂದು ಸಾರಿದರು. ತಪ್ಪು ದಾರಿಯಲ್ಲಿ ಹೋಗುವವರನ್ನು ಉಗ್ರವಾಗಿ ಶಿಕ್ಷಿಸುವುದಾಗಿ ಹೆದರಿಸಿದರು; ಅನ್ಯಾಯವನ್ನು ತಡೆಗಟ್ಟಿದರು. 'ಇತರರು ಏನಾದರೂ ಮಾಡಲಿ ಅವರ ಪಾಪ ಅವರದು. ಆದರೆ ನಾವು ಮಾತ್ರ ನ್ಯಾಯಮಾರ್ಗದಲ್ಲಿಯೇ ನಡೆಯೋಣ'—ಎಂಬ ನೀತಿ ಅವರದು. ಅವರು 'ಮುಯ್ಯಿಗೆ ಮುಯ್ಯಿ' ಪಂಥದವರಲ್ಲ.

ಮುಸ್ಲಿಂ ಲೀಗನ್ನು ಸೇರಿಸಿಕೊಂಡ ಮಂತ್ರಿಮಂಡಲದಲ್ಲಿ ನೆಹರೂರವರು ದಿನಗಂಡ ಕ್ಷಣಗಂಡಗಳನ್ನು ಎದುರಿಸಬೇಕಾಯಿತು. ಆದ್ದರಿಂದ ಬಹುದಿನ ರಾಜ್ಯದ ಆಡಳಿತಗಳನ್ನು ಸುಸೂತ್ರವಾಗಿ ನಡೆಸಲಾಗಲಿಲ್ಲ. ಲೇಬರ್ ಸರ್ಕಾರವು ವೇವೆಲ್ಲರನ್ನು ಹಿಂದಕ್ಕೆ ಕರೆಸಿಕೊಂಡಿತು. ಲಾರ್ಡ್ ಮೌಂಟ್‌ಬ್ಯಾಟನರು ವೈಸರಾಯರಾದರು. ಹಿಂದಿನ ವೈಸರಾಯರುಗಳಂತೆ ಮೌಂಟ್‌ಬ್ಯಾಟನರು ಅಧಿಕಾರ ಚಲಾಯಿಸುವುದಕ್ಕೆ ಬರಲಿಲ್ಲ; ಅಧಿಕಾರವನ್ನು ವರ್ಗಾಯಿಸುವುದಕ್ಕೆ ಬಂದರು. ಇಲ್ಲಿಯ ಸ್ಥಿತಿಗತಿಗಳನ್ನು ವಿಚಾರಿಸಿಕೊಂಡು, ಹಿಂದೂ ಮುಸ್ಲಿಂ ಐಕ್ಯತೆ ಇಲ್ಲದಿರುವುದನ್ನು ಕಂಡರು. ಎರಡು ಪಂಗಡದ ಪ್ರಮುಖರನ್ನೂ ಅವರು ಕರೆಸಿ, 'ನಾನು ಬ್ರಿಟಿಷ್ ಸರ್ಕಾರದ ಅಧಿಕಾರವನ್ನು ಮುಕ್ತಾಯಗೊಳಿಸುವುದಕ್ಕೆ ಬಂದಿದ್ದೇನೆ. ನೀವುಗಳು ಒಂದು ಒಪ್ಪಂದಕ್ಕೆ ಬಂದರೆ ಸರಿ. ಇಲ್ಲದಿದ ರೆ ನಾನು ಅಧಿಕಾರವನ್ನು ತ್ಯಜಿಸಿ ಹೊರಟುಹೋಗುತ್ತೇನೆ. ಅದರಿಂದ ಈ ರಾಜ್ಯದಲ್ಲಿ ಸರ್ಕಾರವೇ ಇಲ್ಲದೆ ಹೋಗಬಹುದು. ಅದರಿಂದಾಗಬಹುದಾದ ಅನಾಯಕತ್ವದ ಪರಿಣಾಮಗಳಿಗೆ ನಾನು ಜವಾಬ್ದಾರನಲ್ಲ. ಆದುದರಿಂದ ಚೆನ್ನಾಗಿ ಯೋಚಿಸಿ ಒಂದು ನಿರ್ಧಾರಕ್ಕೆ ಬನ್ನಿರಿ'—ಎಂದು ಹೇಳಿದರು. ಜಿನ್ನಾರವರು ಪಾಕೀಸ್ತಾನವಾಗಲೇಬೇಕೆಂದು ಹಟಹಿಡಿದಿದ್ದರು. ಭಾರತದ ವಿಭಜನೆ ಅನಿವಾರ್ಯವಾಯಿತು. ಕಾಂಗ್ರೆಸ್ ಪ್ರಮುಖರು ಏಕೈಕ ಸ್ವತಂತ್ರ ಭಾರತಕ್ಕಾಗಿ ಶ್ರಮಿಸಿದ ಐವತ್ತು ವರ್ಷಗಳ ಶ ಮ ವಿಫಲವಾಯಿತು. ಸ್ವಾತಂತ್ರ್ಯ

ವೇನೋ ಬಂತು. ಆದರೆ ಭಾರತ ಇಬ್ಭಾಗವಾಗಿ, ಭಾರತ ಪಾಕೀಸ್ತಾನ ಗಳು ಹುಟ್ಟಿಕೊಂಡುವು. ಜವಾಹಿರಲಾಲ ನೆಹರೂರವರು ತಾರೀಖು ೧೫-೮-೧೯೪೭ನೆಯ ದಿನ ಭಾರತದ ಪ್ರಧಾನ ಮಂತ್ರಿಯಾಗಿ ಅಧಿಕಾರ ವನ್ನು ವಹಿಸಿಕೊಂಡರು. ೧೯೧೬ರಲ್ಲಿ ಗಾಂಧಿಯವರನ್ನು ನೋಡಿದಾಗಿ ನಿಂದ ಭಾರತ ಸ್ವಾತಂತ್ರ್ಯಕ್ಕಾಗಿ ತನು ಮನ ಧನಗಳಿಂದ ಶ್ರಮಿಸಿದ ನೆಹರೂ ರವರ ಕನಸು ೩೧ ವರ್ಷಕ್ಕೆ ನನಸಾಯಿತು. ಇನ್ನೂರು ವರ್ಷಗಳ ದಾಸ್ಯ ಅಂದು ಕೊನೆಗೊಂಡಿತು. ಆಸೇತುಹಿಮಾಚಲಪರ್ಯಂತ ಭಾರತವು ಸ್ವಾತಂತ್ರ್ಯೋತ್ಸವದಲ್ಲಿ ನಲಿದಾಡಿತು.

ಇಲ್ಲಿಂದ ಮುಂದಿನ ಜವಾಹಿರಲಾಲರ ಕತೆಯು ಭಾರತದ ಚರಿತ್ರೆ ಯಲ್ಲಿ ಲೀನವಾಗಿದೆ. ಭಾರತದ ಪ್ರಪ್ರಥಮ ಪ್ರಧಾನಮಂತ್ರಿಯಾದ ಮೇಲೆ ನೆಹರೂರವರಿಗೆ ಎದುರುಬಿದ್ದ ತೊಂದರೆ ತೊಡಕುಗಳು, ಅವರು ಅದನ್ನು ನಿವಾರಿಸಿದ ರೀತಿ, ಅವರ ವಿದೇಶಾಂಗ ನೀತಿ, ಅದರಿಂದ ಭಾರತಕ್ಕೆ ಲಭ್ಯವಾಗಿರುವ ಪುರಸ್ಕಾರ, ಅವರ ದೇಶ ವಿದೇಶಗಳ ಪರ್ಯಟನೆ, ಶಾಂತಿ ದೌತ್ಯ, ಮಾರಕಾಸ್ತ್ರಗಳ ಭಯದಿಂದ ತಲ್ಲಣಿಸುತ್ತಿರುವ ಪ್ರಪಂಚಕ್ಕೆ ಅವರು ನೀಡಿರುವ ಪಂಚಶೀಲ, ಅದರ ನೀತಿಯಿಂದುಂಟಾಗಿರುವ ಭಯ ನಿವಾರಣೆ, ಅವರು ಬರೆದಿರುವ ಪುಸ್ತಕಗಳಲ್ಲಿ ಪ್ರತಿಪಾದಿಸಿರುವ ಪ್ರಪಂಚದ ವಿದ್ಯಮಾನಗಳನ್ನು ವಿಮರ್ಶಿಸಿ ತಿಳಿಯಬೇಕಾದ ಹೊಸದೃಷ್ಟಿ, ಅವುಗಳಲ್ಲಿ ಎದ್ದು ಕಾಣುವ ನೆಹರೂರವರ ಮಹಾವ್ಯಕ್ತಿತ್ವ; ಇಂತಹ ಮಹಾವ್ಯಕ್ತಿ, ಅನೇಕ ವಿಧಗಳಲ್ಲಿ ಹಿಂದೆಬಿದ್ದಿರುವ ಭಾರತ ಜನಾಂಗವನ್ನು ಪ್ರಪಂಚದ ಅತ್ಯುತ್ತಮ ರಾಷ್ಟ್ರಗಳಿಗೆ ಸರಿಸಮಾನವಾಗಿ ನಿಲ್ಲಿಸಬೇಕೆಂಬ ಮಹತ್ವಾ ಕಾಂಕ್ಷೆಯಿಂದ ಹೂಡಿರುವ ಮೊದಲನೆಯ ಮತ್ತು ಎರಡನೆಯ ಪಂಚ ವಾರ್ಷಿಕ ಮಹಾಯೋಜನೆಗಳು— ಇತ್ಯಾದಿಗಳನ್ನು ಮನನಮಾಡಿದರೆ ನೆಹರೂರವರ ಪೂರ್ಣ ವ್ಯಕ್ತಿತ್ವದ ಅರಿವಾಗುವುದು. ಈ ಒಂದೊಂದು ವಿಷಯಗಳೂ ಒಂದೊಂದು ಪುಸ್ತಕಕ್ಕೇ ವಸ್ತುವಾಗತಕ್ಕಷ್ಟು ವಿಪುಲ ಸಾಮಗ್ರಿಗಳನ್ನುಳ್ಳವು. ಆದುದರಿಂದ, ಹೆಚ್ಚಾದ ವಿವರಗಳನ್ನು ಬಿಟ್ಟು ಅತಿ ಮುಖ್ಯಾಂಶಗಳನ್ನು ಮಾತ್ರ ಸಂಕ್ಷೇಪವಾಗಿ ತಿಳಿಸುವ ಪ್ರಯತ್ನವನ್ನು ಈ ಮುಂದೆ ಮಾಡಲಾಗಿದೆ.

# ೨. ನೆಹರೂರವರ ಸಂಸಾರ

ನೆಹರೂರವರ ಸಂಸಾರ ಒಂದು ಆದರ್ಶವಾದ ಸಂಸಾರ. ಅವರ ಚರಿತ್ರೆ ಒಂದು ಮಹಾ ಕಾವ್ಯಕ್ಕೆ ವಸ್ತುವಾಗಬಲ್ಲ ಚರಿತ್ರೆ. ರವೀಂದ್ರನಾಥ ಠಾಕೂರರು ರಾಮಾಯಣದ ವಿಚಾರವಾಗಿ ಬರೆಯುತ್ತಾ ಹೀಗೆ ಹೇಳಿದ್ದಾರೆ. "ಕವಿಗೆ ತನ್ನ ಸ್ವಂತ ಸುಖ, ದುಃಖ, ಕಲ್ಪನೆ, ಜೀವನದ ಅಭಿಜ್ಞತೆಗಳ ಮೂಲಕ ಮಾನವ ಜಾತಿಗೆ ಸಾಮಾನ್ಯವಾದ ಚಿರಂತನ ಹೃದಯಾವೇಗವನ್ನೂ ಜೀವನದ ಮಾರ್ಮಿಕ ವಿಷಯಗಳನ್ನೂ ವ್ಯಕ್ತಪಡಿಸುವ ಶಕ್ತಿಯು ಇರುತ್ತದೆ. ಈ ಪಂಗಡದ ಕವಿಗಳಿಗಿರುವಂತೆಯೇ ಮತ್ತೊಂದು ಪಂಗಡದ ಕವಿಗಳೂ ಇರುತ್ತಾರೆ. ಅವರ ಕಾವ್ಯಗಳ ಮುಖಾಂತರವಾಗಿ ಒಂದು ಸಮಗ್ರ ದೇಶವು ಅಥವಾ ಕಾಲವು ತನ್ನ ಹೃದಯವನ್ನೂ ಅಭಿಜ್ಞತೆಯನ್ನೂ ವ್ಯಕ್ತಪಡಿಸಿ ಅದನ್ನು ಮಾನವನ ಶಾಶ್ವತ ಸಾಮಗ್ರಿಯನ್ನಾಗಿ ಮಾಡುತ್ತದೆ. ಈ ಎರಡನೆಯ ಪಂಗಡದ ಕವಿಗೆ ಮಹಾಕವಿಯೆಂದು ಹೆಸರು. ಸಮಗ್ರ ದೇಶದ ಅಥವಾ ಜನಾಂಗದ ವಾಣಿಯು ಇವರನ್ನು ಆಶ್ರಯಿಸಬಲ್ಲುದು. ಇವರು ರಚಿಸುವ ಕಾವ್ಯವು ಒಬ್ಬ ಮನುಷ್ಯನು ರಚಿಸಿದ್ದೆಂದು ಮನಸ್ಸಿಗೆ ತೋರುವುದಿಲ್ಲ. ಅದು ಒಂದು ಮಹಾ ವೃಕ್ಷದಂತೆ ದೇಶದ ಭೂಗರ್ಭದಿಂದ ಆವಿರ್ಭವಿಸಿ ಆ ದೇಶಕ್ಕೆ ಆಶ್ರಯಚ್ಛಾಯೆಯನ್ನು ದಾನಮಾಡುವಂತೆ ತೋರುತ್ತದೆ. ಶಾಕುಂತಲ, ಕುಮಾರಸಂಭವಗಳಲ್ಲಿ ಕಾಳಿದಾಸನ ಲೇಖನ ನೈಪುಣ್ಯದ ಪರಿಚಯವನ್ನು ಹೊಂದಬಹುದು. ಆದರೆ ರಾಮಾಯಣ ಮಹಾಭಾರತಗಳು ಗಂಗಾ ಹಿಮಾಲಯಗಳಂತೆ ಸಮಗ್ರ ಭರತ ಖಂಡದವುಗಳು; ವ್ಯಾಸ ವಾಲ್ಮೀಕಿಗಳು ಉಪಲಕ್ಷ್ಯಮಾತ್ರ.....ಆದರೆ ಭರತ ಖಂಡವು ಮಾತ್ರ ತನ್ನ ಸ್ವರೂಪವನ್ನು ರಾಮಾಯಣ ಮಹಾಭಾರತಗಳಲ್ಲಿ ಸ್ವಲ್ಪವೂ ಬಿಡದೆ ಪ್ರಕಾಶಪಡಿಸಿಕೊಂಡಿರುತ್ತದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.....ರಾಮಾಯಣ ಮಹಾಭಾರತಗಳು ಕೇವಲ ಮಹಾ ಕಾವ್ಯಗಳೆಂದು ಹೇಳಿದರೆ ಸಾಲದು. ಅವು ಇತಿಹಾಸವೂ ಆಗಿವೆ. ಆದರೆ ಅವು ಸಂಗತಿಗಳ ಇತಿಹಾಸವಲ್ಲ. ಏಕೆಂದರೆ ಅಂತಹ

ಇತಿಹಾಸವು ಸಮಯ ವಿಶೇಷವನ್ನು ಅವಲಂಬಿಸುತ್ತದೆ. ರಾಮಾಯಣ ಮಹಾಭಾರತಗಳು ಭರತ ಖಂಡದ ಶಾಶ್ವತವಾದ ಇತಿಹಾಸಗಳು. ಮಿಕ್ಕ ಇತಿಹಾಸಗಳು ಎಷ್ಟೋ ವ್ಯತ್ಯಸ್ತವಾಗುತ್ತವೆ. ಆದರೆ ಈ ಇತಿಹಾಸಕ್ಕೆ ಬದಲಾವಣೆ ಎಂಬುದೇ ಇಲ್ಲ. ಏಕೆಂದರೆ ಯಾವುದು ಭರತ ಖಂಡದ ಸಾಧನೆಯೋ, ಯಾವುದು ಅದರ ಆರಾಧನೆಯೋ, ಯಾವುದು ಅದರ ಸಂಕಲ್ಪವೋ ಅದಗ ಇತಿಹಾಸವು ಈ ಎರಡು ದೊಡ್ಡ ಕಾವ್ಯ ಸೌಧಗಳಲ್ಲಿ ಚಿರಕಾಲದ ಸಿಂಹಾಸನದ ಮೇಲೆ ವಿರಾಜಿಸುತ್ತದೆ.... ರಾಮಾಯಣದಲ್ಲಿ ದೇವನು ತನ್ನ ದೇವತ್ವವನ್ನು ಕುಗ್ಗಿಸಿಕೊಂಡು ಮನುಷ್ಯತ್ವಕ್ಕೆ ಇಳಿದಿಲ್ಲ. ಮನುಷ್ಯನು ತನ್ನ ಗುಣಗಳಿಂದ ದೇವತ್ವಕ್ಕೆ ಏರಿ ಹೋಗಿದ್ದಾನೆ. ಭಾರತೀಯ ಕವಿಯು ಮಹಾಕಾವ್ಯವನ್ನು ರಚನೆ ಮಾಡಿದ್ದು ಮನುಷ್ಯನ ಉಚ್ಚತಮ ಆದರ್ಶವನ್ನು ಸ್ಥಾಪಿಸುವುದಕ್ಕಾಗಿಯೇ. ಮನುಷ್ಯನ ಆ ಆದರ್ಶ ಚರಿತ್ರವರ್ಣನೆಯನ್ನೇ ಭಾರತೀಯರು ಅಂದಿನಿಂದ ಇಂದಿನವರೆಗೂ ಅತ್ಯಂತ ಉತ್ಸಾಹದಿಂದ ಓದುತ್ತಾ ಬಂದಿದ್ದಾರೆ. ಸಂಸಾರದ ಕತೆಗೆ ಅತ್ಯಂತ ಮಹತ್ವವನ್ನು ಕೊಟ್ಟಿರುವುದೇ ರಾಮಾಯಣದಲ್ಲಿರುವ ಮುಖ್ಯ ವಿಶೇಷತ್ವ. ತಂದೆ ಮಕ್ಕಳು, ಅಣ್ಣ ತಮ್ಮಂದಿರು, ಗಂಡ ಹೆಂಡಿರು, ಇವರಿಗಿರುವ ಧರ್ಮದ ಬಂಧನಕ್ಕೂ ಪ್ರೇಮಮೂಲವಾದ ಸಂಬಂಧಕ್ಕೂ ರಾಮಾಯಣವು ಎಷ್ಟು ಮಹತ್ವವನ್ನು ಕೊಟ್ಟಿರುವುದೆಂದರೆ—ಸಂಸಾರದ ಚರಿತ್ರೆಯು ಅತಿ ಸಹಜವಾಗಿ ಮಹಾಕಾವ್ಯಕ್ಕೆ ಉಪಯುಕ್ತವಾಗಿದೆ. ದೇಶಜಯ, ಶತ್ರುವಿನಾಶ ಪ್ರಬಲವಾದ ಎರಡು ಶತ್ರುಪಕ್ಷಗಳ ಪ್ರಚಂಡವಾದ ಹೋರಾಟ—ಈ ಸಮಸ್ತ ವ್ಯಾಪಾರವೂ ಸಾಧಾರಣವಾಗಿ ಮಹಾಕಾವ್ಯಗಳಲ್ಲಿ ಆಂದೋಲನವನ್ನೂ ಉದ್ದೀಪನದ ಸಂಚಾರವನ್ನೂ ಉಂಟುಮಾಡುತ್ತವೆ. ಆದರೆ ರಾಮಾಯಣದ ಮಹಿಮೆಯು ರಾಮರಾವಣರ ಯುದ್ಧವನ್ನು ಆಶ್ರಯಿಸಿಲ್ಲ. ಆ ಯುದ್ಧದ ಸಂಗತಿಯು ರಾಮಸೀತೆಯರ ದಾಂಪತ್ಯ ಪ್ರೀತಿಯನ್ನು ಉಜ್ವಲಮಾಡಿ ತೋರಿಸತಕ್ಕ ಉಪಲಕ್ಷ್ಯಮಾತ್ರವಾಗಿದೆ. ತಂದೆಯಲ್ಲಿ ಮಗನಿಗಿರುವ ವಿಧೇಯತೆ, ಅಣ್ಣನಿಗಾಗಿ ತಮ್ಮನ ಸ್ವಾರ್ಥತ್ಯಾಗ, ಗಂಡ ಹೆಂಡಿರಿಗೆ ಒಬ್ಬರಿಗೊಬ್ಬರಲ್ಲಿರುವ ನಿಷ್ಠೆ ಮತ್ತು ಪ್ರಜೆಗಳ ವಿಷಯದಲ್ಲಿ ರಾಜನ ಕರ್ತವ್ಯ—ಇವು

ಎಷ್ಟುದೂರ ಹೋಗಬಲ್ಲವೆಂಬುದನ್ನು ರಾಮಾಯಣವು ತೋರಿಸಿರುತ್ತದೆ. ವ್ಯಕ್ತಿ ವಿಶೇಷದ, ಮುಖ್ಯವಾಗಿ ಸಂಸಾರದ ಸಂಬಂಧವು, ಈ ರೀತಿಯಾಗಿ ವರ್ಣನೆಯ ವಿಷಯಗಳೆಂದು ಮತ್ತಾವ ಕಾವ್ಯದಲ್ಲಿಯೂ ಪರಿಗಣಿತ ವಾಗಿಲ್ಲ."

ರವೀಂದ್ರರ ಮಾತನ್ನು ಇಷ್ಟು ವಿಪುಲವಾಗಿ ಉದಾಹರಿಸಿರುವುದರ ಮುಖ್ಯ ಉದ್ದೇಶ, ನೆಹರೂರವರ ಚರಿತ್ರೆ ಹೇಗೆ ಮಹಾಕಾವ್ಯಕ್ಕೆ ವಸ್ತುವಾಗಬಹುದೆಂಬುದನ್ನು ಸೂಚಿಸುವುದಕ್ಕೆ. ಭರತ ಖಂಡದ ಮಹಾ ಪರ್ವಕಾಲದಲ್ಲಿ ನೆಹರೂರವರು ಜನಿಸಿದ್ದಾರೆ. ರಾಷ್ಟ್ರದ ಸ್ವಾತಂತ್ರ್ಯಕ್ಕೆ, ಸ್ವಾತಂತ್ರ್ಯ ಬಂದಮೇಲೆ ಹೊಸರಾಷ್ಟ್ರ ನಿರ್ಮಾಣಕ್ಕೆ ಶ್ರಮಿಸುತ್ತಿದ್ದಾರೆ. ಅವರ ಚರಿತ್ರೆಯಲ್ಲಿ ಭಾರತ ದೇಶ ತನ್ನ ಹೃದಯವನ್ನೂ ಅಭಿಜ್ಞತೆಯನ್ನೂ ವ್ಯಕ್ತಪಡಿಸುತ್ತಲಿದೆ. ನೆಹರೂರವರು ಹೊಡೆದಾಡಿ ಗೆದ್ದಿರುವ ಸ್ವಾತಂತ್ರ್ಯ ಸಂಗ್ರಾಮ, ನೋವು ನರಳುವಿಕೆಗಳ ಆಯುಧಸಂಗ್ರಾಮವಲ್ಲ; ಭಾರತದ ಸಂಸ್ಕೃತಿಯ ತಿರುಳಾದ ಸತ್ಯ ಅಹಿಂಸೆಗಳ ಸಂಗ್ರಾಮ. ಅದರ ಚರಿತ್ರೆ, ಸಮಗ್ರ ದೇಶದ ಅಥವಾ ಜನಾಂಗದ ವಾಣಿಯಾಗಿದ್ದು ಮಾನವನ ಶಾಶ್ವತ ಸಾಮಗ್ರಿಯಾಗಲರ್ಹತೆಯುಳ್ಳುದು. ನೆಹರೂರವರ ಚರಿತ್ರೆ ಕೇವಲ ವ್ಯಕ್ತಿಯ ಚರಿತ್ರೆಯಲ್ಲ, ಅದೊಂದು ದೇಶದ ಇತಿಹಾಸವೂ ಅಹುದು; ಭರತಖಂಡದ ಶಾಶ್ವತವಾದ ಇತಿಹಾಸ. ರಾಮಾಯಣದಂತೆ ಇಲ್ಲಿಯೂ ನೆಹರೂರವರು ತಮ್ಮ ವ್ಯಕ್ತಿತ್ವ ಸಾಧನೆಗಳಿಂದ ಮಾನವತ್ವವನ್ನು ಮೀರಿದ್ದಾರೆ, ನಲವತ್ತುಕೋಟಿ ಪ್ರಜಾಸಂಖ್ಯೆಗೆ ಸ್ವಾತಂತ್ರ್ಯವನ್ನು ಸಾಧಿಸಿಕೊಟ್ಟು ಅವರ ಜೀವನಮಟ್ಟವನ್ನು ಮೇಲಕ್ಕೆತ್ತುತ್ತಿರುವ ಪ್ರಯತ್ನ; ಪ್ರಪಂಚದ ಯುದ್ಧಭೀತರಾದ ಜನಾಂಗಕ್ಕೆ ಶಾಂತಿಯನ್ನೊದಗಿಸಿ, ಭಯವನ್ನು ನಿವಾರಣೆಮಾಡಲು ಪಡುತ್ತಿರುವ ಪ್ರಚಾರ ಪ್ರಯತ್ನಗಳು—ಸಾಮಾನ್ಯ ಮಾನವನ ಮಟ್ಟವನ್ನು ಮೀರಿದ್ದಲ್ಲವೆ? ಅವರಿಗೆ ಸಮನಾದವರು ಇಂದಿನ ಪ್ರಪಂಚದಲ್ಲಿ ಬೇರೆ ಇದ್ದಾರೆಯೆ? ರಾಮಕೃಷ್ಣರಂತಹವರು ಒಂದು ಕಾಲಕ್ಕೆ ಒಂದು ಜನಾಂಗಕ್ಕೆ ಮಾಡಿದ ಉಪಕಾರವನ್ನು ನೆಹರೂರವರು ಇಂದು ವಿಶಿಷ್ಟ ಪ್ರಪಂಚಕ್ಕೂ ಆ ಪ್ರಪಂಚದ ಎಲ್ಲ ಜನಾಂಗಗಳಿಗೂ ಮಾಡುತ್ತಿದ್ದಾರೆ. ಜೊತೆಗೆ ಅವರ ಕತೆ ಒಂದು

ಸಂಸಾರದ ಕತೆಯೂ ಹೌದು. ಮೊದಲು ಮೋತೀಲಾಲರು, ಅವರು ಕಾಲವಾದಮೇಲೆ ಗಾಂಧಿಯವರೇ ನೆಹರೂರವರ ತಂದೆಯಾದರು. ಆ ತಂದೆ ಮಕ್ಕಳು, ಗಂಡ ಹೆಂಡಿರು, ಅಣ್ಣ ತಂಗಿಯರು—ಇವರಲ್ಲಿರುವ ಧರ್ಮದ ಬಂಧನ, ಪ್ರೇಮದ ಬಂಧನ ತುಂಬಾ ಆದರ್ಶವಾದುದು. ಶ್ರೀರಾಮಚಂದ್ರನು ತಂದೆಯ ವಾಕ್ಯಪರಿಪಾಲನೆಗಾಗಿ ಅರಣ್ಯವಾಸವನ್ನು ಕೈಗೊಂಡು, ವಿವಿಧ ಕಷ್ಟಗಳನ್ನನುಭವಿಸಿ, ರಾವಣನು ಹೆಂಡತಿಯನ್ನು ಕದ್ದುದರಿಂದ, ಹೆಂಡತಿಯಿಂದ ದೂರನಾಗಿರಬೇಕಾಗಿ ಬಂದು, ಕೈಗೂಡಿದ ಯುದ್ಧದಲ್ಲಿ ಪ್ರಚಂಡವಾಗಿ ಯುದ್ಧಮಾಡಿ ರಾವಣನನ್ನು ಕೊಂದು ಗೆಲುವನ್ನೂ ಕೀರ್ತಿಯನ್ನೂ ಸಂಪಾದಿಸಿಕೊಂಡನು. ನೆಹರೂರವರು, ಮೋತೀಲಾಲರೂ ಗಾಂಧಿಯವರೂ ಆಜ್ಞೆಮಾಡಿದಂತೆ ಭಾರತದ ಸ್ವಾತಂತ್ರ್ಯ ಸಮರವನ್ನು ಪ್ರವೇಶಿಸಿ, ಜೈಲುವಾಸವನ್ನು ಕೈಗೊಂಡು, ಕೈಹಿಡಿದ ಹೆಂಡತಿಯಿಂದ ದೂರವಾಗಿದ್ದು, ನಿಶ್ಶಸ್ತ್ರರಾಗಿ ಶಾಂತಿ ಸತ್ಯ ಅಹಿಂಸೆ ಗಳಿಂದ ಸತ್ಯಾಗ್ರಹಸಮರದಲ್ಲಿ ಜಯಶೀಲರಾದರು. ಯುದ್ಧದಲ್ಲಿ ಗೆದ್ದುದರಿಂದ ರಾಮನಿಗೆ ಸೀತೆ ದೊರಕಿದಳು. ಆದರೆ ಕಮಲಾ ನೆಹರೂ ರವರು ಗಂಡನ ಜೈಲುವಾಸಗಳಿಂದಾದ ವಿರಹದಿಂದ ಗೆಲುವಾಗುವುದರ ಮೊದಲೇ ಸಾವನ್ನಪ್ಪಿದ್ದರು. ಆ ಸಮರದ ಯಜ್ಞಕುಂಡದಲ್ಲಿ ಹೆಂಡತಿ ಯನ್ನು ನೆಹರೂರವರು ಹೋಮಮಾಡಿದರೆಂದು ಹೇಳಿದರಾಗಲೀ ಕಮಲಾ ನೆಹರೂರವರು ಹಾಗೆಯೇ ಗಂಡನನ್ನು ಭಾರತದ ಸೇವೆಗೆ ಸಲ್ಲಿಸಿ ಮಹಾತ್ಯಾಗಿ ಯಾದರೆಂದು ಹೇಳಿದರಾಗಲಿ ಅತಿಶಯೋಕ್ತಿಯೇನಿಲ್ಲ. ಈ ಸ್ವಾತಂತ್ರ್ಯ ಸಮರದಲ್ಲಿ ನೆಹರು, ಅವರ ತಾಯಿ, ತಂದೆ, ಹೆಂಡತಿ, ಸೋದರಿಯರು, ಭಾವಮೈದುನ—ಸಂಸಾರದಲ್ಲಿ ಎಲ್ಲರ ಗುರಿ ಒಂದೇ, ಮನೋಭಾವ ವೊಂದೇ; ಎಲ್ಲರೂ ದೇಶದ ಸ್ವಾತಂತ್ರ್ಯಕ್ಕಾಗಿ ಆತ್ಮಾರ್ಪಣೆಗೆ ಸಿದ್ಧ ವಾಗಿದ್ದವರು. ಅವರಲ್ಲಿ ಹಲವರು—ಮೋತೀಲಾಲರು, ಕಮಲಾ ನೆಹರು—ಆತ್ಮಾರ್ಪಣೆಮಾಡಿಯೇ ಅಮರರಾದರು. ಇಂತಹ ಅಮರಕತೆ ನೋಡುವ ಕಣ್ಣೊಂದಿದ್ದು, ಭಾವುಕನ ಮನಸೆಳೆಯುವುದಾದರೆ ಮಹಾಕಾವ್ಯವಾಗದೆ ಇದ್ದೀತೆ? ಮಹಾ ಕವಿಯೊಬ್ಬನ ಮನವನ್ನು ಬೇಗನೆ ಇದು ಆಕರ್ಷಿಸು ವಂತಾಗಬೇಕು, ಅಷ್ಟೆ.

ಮೋತೀಲಾಲ ನೆಹರೂರವರು ೧೮೮೨ರಲ್ಲಿ ಸ್ವರೂಪರಾಣಿ ದೇವಿಯವರನ್ನು ವಿವಾಹವಾದರು. ಅವರದು ಅನುಕೂಲ ದಾಂಪತ್ಯ. ಆ ವೇಳೆಗೆ ಮೋತೀಲಾಲರು ಒಳ್ಳೆ ವಕೀಲರಾಗಿದ್ದರು. ಅವರ ಸಂಪಾದನೆ ದಿನದಿನಕ್ಕೆ ಹೆಚ್ಚಿತ್ತು. ಅವರದು ತುಂಬಾ ಧಾರಾಳವಾದ ಮನಸ್ಸು. ಸಂಪಾದನೆ ಹೆಚ್ಚಿದ ಹಾಗೆ ವೆಚ್ಚವೂ ಹೆಚ್ಚಾಯಿತು. ಕೋರ್ಟುಗಳಲ್ಲಿ ಸಿಂಹದಂತೆ ರಾಜಠೀವಿಯಿಂದ ಮೆರೆಯುತ್ತಿದ್ದ ಮೋತೀಲಾಲರು ಮನೆಯಲ್ಲೂ ಇಂಗ್ಲಿಷ್ ಪದ್ಧತಿಗಳನ್ನೇ ಜಾರಿಗೆ ತಂದರು. ಮನೆಯ ಆಡಳಿತ, ಗವರ್ನರುಗಳ ಮನೆಯ ಆಡಳಿತದಂತೆ ವಿಜೃಂಭಣೆಯಿಂದಲೂ ಅಟ್ಟಹಾಸದಿಂದಲೂ ಸಾಗಿತ್ತು. ೧೯೧೦ರಲ್ಲಿ ನಿಹಾಲಸಿಂಗರು ಅವರನ್ನು ಕಂಡಾಗ ಅವರ ಸಂಪಾದನೆ ವರ್ಷಕ್ಕೆ ನಾಲ್ಕು ಲಕ್ಷ ರೂಪಾಯಿಗಳಿಗೆ ಕಡಿಮೆಯಿಲ್ಲವೆಂದಿದ್ದರು. ಅದು ವರ್ಷೇ ವರ್ಷೇ ಇನ್ನೂ ಅಭಿವೃದ್ಧಿಯಾಗುತ್ತಿತ್ತು. ತಮ್ಮ ಸಂಪಾದನೆ ಎಷ್ಟೆಂಬುದು ಮೋತೀಲಾಲರಿಗೇ ಗೊತ್ತಿರುತ್ತಿದ್ದಿಲ್ಲ. ಅವರು ತುಂಬಾ ಉದಾರಿಗಳು. ತನ್ನ ಆಶ್ರಯದಲ್ಲಿರುವವರಿಗೆ ಸುಖಸಮೃದ್ಧಿಯಿರಬೇಕೆಂಬುದು ಅವರ ಆಸೆ. ಅವರು 'ಇಂಡಿಪೆಂಡೆಂಟ್' ಎಂಬ ಪತ್ರಿಕೆಯನ್ನು ಸ್ಥಾಪಿಸಿದಾಗ ಸಂಪಾದಕರಾಗಿ ಗೊತ್ತಾಗಿದ್ದವರು 'ಸಂಬಳವೆಷ್ಟು' ಎಂದರು. ಅದಕ್ಕೆ ಮೋತೀಲಾಲರು 'ನೀವು ಬಯಸಿದಷ್ಟು' ಎಂದುತ್ತರಕೊಟ್ಟರು. ಅಂತಹ ಉದಾರತೆ ಅವರದು. ಅವರದು ರಾಜಠೀವಿ, ಬಿಂಕ. ಅವರು ಓಡಾಡುವುದು, ಕುಳಿತುಕೊಳ್ಳುವುದು, ನಡೆಯುವುದು, ಮಾತನಾಡುವುದು—ಎಲ್ಲದರಲ್ಲಿಯೂ ಒಂದು ಘನತೆ ಗಾಂಭೀರ್ಯವಿತ್ತು. ಅವರು ಉಪನ್ಯಾಸ ಮಾಡುವಾಗಲೂ ಅದೇ ಗಾಂಭೀರ್ಯವಿರುತ್ತಿತ್ತು. ಅವರು ಮೈಕೈ ಆಡಿಸುತ್ತಿದ್ದಿಲ್ಲ. ಭಾವನೆಯ ಉದ್ರೇಕವನ್ನು ದೃಷ್ಟಿಬೀರುವುದರಲ್ಲೋ ಅಥವಾ ಸ್ವರದಲ್ಲಿಯೋ ಕಾಣಬೇಕು. ಅವರ ಮನೆಗೆ ಗವರ್ನರುಗಳೂ ರಾಜ ಮಹಾರಾಜರುಗಳೂ ಅತಿಥಿಗಳಾಗಿ ಬರುತ್ತಿದ್ದರು. ಕೋಪ ಬಂದಾಗ ಅವರದು ನರಸಿಂಹಾವತಾರವೇ, ಅದೂ ಉಗ್ರನರಸಿಂಹ. ಅವರಿಗೆ ಎದುರುವಾದಿಸಿ ಬದುಕಿದವರಿಲ್ಲ. ಸ್ವರಾಜ್ ಪಕ್ಷವನ್ನು ಕಟ್ಟಿಕೊಂಡು ದಿಲ್ಲಿಯ ಶಾಸನ ಸಭೆಯಲ್ಲಿದ್ದಾಗ ಅವರ ಚರ್ಚೆಗಳಿಗೆ ಸರ್ಕಾರೀ

ಪಕ್ಷದವರು ಹೆದರುತ್ತಿದ್ದರು. ಶಾಸನ ಸಭೆಯಲ್ಲಿ ಮೋತೀಲಾಲರೊಂದಿಗೆ ಹೆಣಗಾಡಿದ್ದ ಸರ್ ಮಾಲ್ಕೋಂಹೈಲಿಗೆ ಪಂಜಾಬಿನ ಗವರ್ನರಾಗಿ ವರ್ಗವಾದಾಗ 'ಸದ್ಯಕ್ಕೆ ಕಷ್ಟ ತಪ್ಪಿತು. ಪಂಜಾಬಿನಲ್ಲಿ ಮೋತೀಲಾಲ ಪಂಡಿತರೂ ಇಲ್ಲ ಪಟೇಲರೂ ಇಲ್ಲ'—ಎಂದು ಹಾಯಾಗಿ ನಿಟ್ಟುಸಿರು ಬಿಟ್ಟನಂತೆ. ಒಂದು ಸಲ ಮೋತೀಲಾಲರು ಲಂಡನ್ನಿಗೆ ಹೊರಟಾಗ ಮಗಳು ಕೃಷ್ಣೆಗೆ ಅಲ್ಲಿಂದ ನಿನಗೇನು ತರಬೇಕು ಎಂದು ಕೇಳಿದ್ದರು. ಕೃಷ್ಣೆ ಒಂದು ಚಿಕ್ಕ ಚರ್ಮದಂಗಿಯನ್ನು ತನ್ನಿ—ಎಂದು ಹೇಳಿದ್ದಳು. ಮೋತೀಲಾಲರು ಪ್ಯಾರಿಸ್ಸಿಗೆ ಹೋಗಿ ಸೆಲ್ಫ್ರಿಡ್ಜ್ ಎಂಬ ಭಾರಿ ಮಳಿಗೆಗೆ ಹೋಗಿ, ಮ್ಯಾನೇಜರನ್ನು ಕಂಡು, ಅವರ ಅಂಗಡಿಯಲ್ಲಿ ಕೆಲಸಕ್ಕಿದ್ದ ಇಪ್ಪತ್ತು ವರ್ಷದ ಯುವತಿಯರನ್ನೆಲ್ಲಾ ಸಾಲಾಗಿ ನಿಲ್ಲಿಸಿ, ಅವರಲ್ಲಿ ಯಾರು ಕೃಷ್ಣೆಯ ಎತ್ತರ ದಪ್ಪದವರಿದ್ದರೋ ಆ ಅಳತೆಯ ಅಂಗಿಯನ್ನು ಕೊಂಡು ತಂದರು. ಆದರೆ ಈ ಕತೆಯನ್ನು ಕೇಳಿದ ಜವಾಹಿರಲಾಲರು ತಂದೆಯವರ ವರ್ತನೆಯನ್ನು ಔದ್ಧತ್ಯವೆನ್ನುತ್ತ ಆಗ್ರಹದಿಂದ ಖಂಡಿಸಿದರಂತೆ. ತಂದೆ ಮಕ್ಕಳಿಗಿದ್ದ ವ್ಯತ್ಯಾಸ ಇದು.

ಮೊದಮೊದಲು ಮೋತೀಲಾಲರು ತಮ್ಮ ವಕೀಲಿ, ಸಂಪಾದನೆ, ಇದರಲ್ಲೇ ನಿರತರಾಗಿರುತ್ತಿದ್ದರು. ತಿಲಕ್ ಮೊದಲಾದ ದೇಶಭಕ್ತರ ಉಪನ್ಯಾಸಗಳನ್ನು ಖಂಡಿಸುತ್ತಿದ್ದರು. ಜವಾಹಿರಲಾಲರು ಇಂಗ್ಲೆಂಡಿನಿಂದ ಬಂದಮೇಲೆ ಮೋತೀಲಾಲರಲ್ಲಿ ವ್ಯತ್ಯಾಸಕ್ಕಾರಂಭವಾಯಿತು. ತಂದೆಯ ಪ್ರಭಾವ ಮಗನ ಮೇಲೆ ಹೇಗೆ ಬಿದ್ದಿತ್ತೋ ಹಾಗೇ ಮಗನ ಪ್ರಭಾವವೂ ತಂದೆಯ ಮೇಲೆ ಬಿತ್ತು. ಗಾಂಧೀಜಿಯವರ ಪ್ರಭಾವ ಮೂಡಿದ ಮೇಲೆ ಮೋತೀಲಾಲರು ಉಗ್ರದೇಶಭಕ್ತರಾದರು. ಗಾಂಧೀ ಪ್ರಭಾವಕ್ಕೆ ಬೀಳುವ ಮುನ್ನ ಮೋತೀಲಾಲರು ಐರೋಪ್ಯರಂತೆ ಬಟ್ಟೆ ಧರಿಸುತ್ತಿದ್ದರು. ಅದಾದಮೇಲೆ ಯಾವಾಗಲೂ ಶುಭ್ರವಾದ ಬಿಳಿ ಯುಡುಪು. ಕಾಲಲ್ಲಿ ಮೆಟ್ಟುತ್ತಿದ್ದ ಮೋಜ ಕೂಡ ಬಿಳಿಯದೇ ಇರುತ್ತಿತ್ತು. ಯಾವಾಗಲೂ ಝಳ ಝಳ. ಆನಂದ ಭವನದಲ್ಲಿ ಪರದೇಶೀ ವಸ್ತ್ರಗಳನ್ನು ಹೊರಕ್ಕೆಸೆದು ಬೆಂಕಿಯಿಡಲು ಗುಡ್ಡೆಮಾಡಿದಾಗ ಅದು ಒಂದು ಚಿಕ್ಕ ಬೆಟ್ಟದಷ್ಟಿತ್ತಂತೆ. ಮೋತೀಲಾಲರು ದೇಶಸೇವೆಗೆ ಟೊಂಕಕಟ್ಟಿ ನಿಂತ

ಮೇಲೆ ವಕೀಲಿ ವೃತ್ತಿ ಬಿಟ್ಟುಬಿಟ್ಟರು. ಆಮೇಲೆ ಒಬ್ಬ ಕಕ್ಷಿಗಾರರು ಒಂದು ಲಕ್ಷ ರೂಪಾಯಿ ಮುಂದಿಟ್ಟು ತಮ್ಮ ಕೇಸು ವಾದಿಸುವಂತೆ ಪ್ರಾರ್ಥನೆ ಮಾಡಿದನಂತೆ. ಆಗ ಮೋತೀಲಾಲರು ಪಕ್ಕದಲ್ಲಿ ನಿಂತಿದ್ದ ಕೃಷ್ಣೆಯನ್ನು ಕುರಿತು, 'ನೀನೇನು ಹೇಳುವಿ?' ಎಂದರಂತೆ. ಆ ದೇಶಭಕ್ತರ ಮಗಳು 'ನನಗೆ ಇದು ನ್ಯಾಯವೆಂದು ಕಾಣುವುದಿಲ್ಲ' ಎಂದಳಂತೆ. ಆಗ ಅವರು ಕಕ್ಷಿಗಾರನಿಗೆ 'ಕ್ಷಮಿಸಿ, ನನ್ನ ಪುಟ್ಟ ಮಗಳು ಕೂಡ ಆಕ್ಷೇಪಿಸು ವುದನ್ನು ಕಂಡಿರೋ ಇಲ್ಲವೋ'—ಎಂದು ಹೇಳಿ ಆತನನ್ನು ಕಳುಹಿಸಿ ಕೊಟ್ಟರಂತೆ. ನ್ಯಾಯ ಶಾಸ್ತ್ರದಲ್ಲಿ ಅವರು ಅದ್ವಿತೀಯ ಪಂಡಿತರಾಗಿದ್ದರು. ಬಿಡುವಿನ ಕಾಲದಲ್ಲೋದುವುದಕ್ಕೆಂದು 'ಹೋಮಿಯೋಪತಿ' ಗ್ರಂಥಗಳು ಕೂಡ ಅವರ ಬಳಿ ಇರುತ್ತಿತ್ತು.

ಮೋತೀಲಾಲರಿಗೆ ಹೆಂಡತಿ ಮಕ್ಕಳಲ್ಲಿ ಅಪಾರವಾದ ಪ್ರೇಮ. ಅದರಲ್ಲೂ ಏಕಮಾತ್ರ ಪುತ್ರ ಜವಾಹಿರರ ಮೇಲೆ ಇನ್ನೂ ಹೆಚ್ಚಿನ ಪ್ರೇಮ ವಿತ್ತು. ಜವಾಹಿರರು ಕೇವಲ ಬಾಲಕರಾಗಿದ್ದಾಗ ಕುದುರೆ ಸವಾರಿಗೆ ಹೋಗಿದ್ದರು. ಕುದುರೆಯಿಂದ ಅವರು ಬಿದ್ದು ನಡೆದುಬರುತ್ತಿದ್ದರು. ಮೊದಲು ಕುದುರೆಯೊಂದೇ ಮನೆಮುಂದೆ ಬಂದು ನಿಂತಿತು. ಜವಾಹಿರರು ಏನಾದರೋ ಎಂದು ಮೋತೀಲಾಲರ ತಳಮಳವೇ ತಳಮಳ. ಸೌಖ್ಯ ವಾಗಿದ್ದ ಅವರನ್ನು ಕಾಣುವವರೆಗೆ ಅವರಿಗೆ ಜೀವದಲ್ಲಿ ಜೀವವಿರಲಿಲ್ಲ. ಸೈಮನ್ ಕಮಿಷನ್ನಿನ ಸಂದರ್ಭದಲ್ಲಿ ನೆಹರೂರವರಿಗೆ ಲಾಠಿ ಏಟು ಬಿತ್ತೆಂದು ತಿಳಿದಾಗ, ರೈಲುವೇಳೆಯಾಗಿಬಿಟ್ಟಿದ್ದುದರಿಂದ, ಮೋಟಾರಿನಲ್ಲೇ ನೂರಾರು ಮೈಲಿಗಳ ದೂರ ಧಾವಿಸಿ ಓಡಿಬಂದಿದ್ದರು. ನೆಹರೂರವರಿಗೆ ಜೈಲುವಾಸ ವಾಗುವುದು ತಪ್ಪಿದ್ದಲ್ಲವೆಂದು ತಿಳಿದಾಗ, ಬರಿಯ ನೆಲದಮೇಲೆ ಮಗ ಮಲಗಿದರೆ ಹೇಗಿರುತ್ತೋ ಎಂದು ಅನುಭವಿಸಿ ತಿಳಿಯಲು ತಾವೇ ಬರೀ ನೆಲದ ಮೇಲೆ ಕೆಲದಿನಗಳ ಕಾಲ ಮಲಗುತ್ತಿದ್ದರಂತೆ. ಮಗ ಜೈಲು ಸೇರುವುದು ಸಹಿಸದಾದುದರಿಂದ ಗಾಂಧಿಯವರನ್ನು ಕರೆಕಳಿಸಿ ಅವರಿಂದ ಜವಾಹಿರರಿಗೆ ಆತುರಪಡಬಾರದೆಂದು ಬುದ್ಧಿವಾದ ಕೂಡ ಹೇಳಿಸಿದರು. ಅಂದು ಜೈಲಾಗುವುದು ತಪ್ಪಿದರೂ ಆಮೇಲೆ ಸುಮಾರು ಹನ್ನೆರಡು ವರ್ಷ ಗಳ ಕಾಲ ನೆಹರೂರವರು ಜೈಲಿನಲ್ಲೇ ಕಳೆಯಬೇಕಾಯಿತು. ಜವಾಹಿರರ

ವಿಷಯದಲ್ಲಿ ಬೇರೆ ಯಾರು ಆಕ್ಷೇಪಿಸುವುದನ್ನೂ ಅವರು ಸಹಿಸರು. ಡೊಮಿನಿಯನ್ ಸ್ಟೇಟಸ್ ಮತ್ತು ಸಂಪೂರ್ಣ ಸ್ವಾತಂತ್ರ್ಯಗಳ ಬಗ್ಗೆ ತಂದೆ ಮಕ್ಕಳಿಗೆ ವಾದ ವಿವಾದಗಳೆದ್ದಾಗ ಮೋತೀಲಾಲರು 'ಇಂಥ ಮಗನ ತಂದೆಯಾಗಿರುವುದಕ್ಕೆ ನನಗೆ ಎಷ್ಟೋ ಹೆಮ್ಮೆಯಾಗುತ್ತದೆ' ಎಂದರಂತೆ. ಹಾಗೆಯೇ ಲಾಹೋರು ಕಾಂಗ್ರೆಸ್ಸಿಗೆ ನೆಹರು ಅಧ್ಯಕ್ಷ ರಾದಾಗ ಹಿಂದಿನ ವರುಷ ರಾಷ್ಟ್ರಪತಿಯಾಗಿದ್ದ ಮೋತೀಲಾಲರೇ ತಮ್ಮ ಪಟ್ಟವನ್ನು ಮಗನಿಗೆ ಬಿಟ್ಟುಕೊಡಬೇಕಾಗಿ ಬಂತು. ಮೋತೀಲಾಲರ ಹೆಮ್ಮೆಗೆ ಅಂದು ಮೇರೆಯಿರಲಿಲ್ಲ.

ಮೋತೀಲಾಲರು ಸಂಸಾರದಲ್ಲಿ ಸುಖಿಗಳಾಗಿದ್ದರೆಂದು ನಿಸ್ಸಂಶಯ ವಾಗಿ ಹೇಳಬಹುದು. ಅವರ ಮಗಳು ಕೃಷ್ಣಾ ಹತೀಸಿಂಗ್ ತಂದೆಯನ್ನು ಈ ರೀತಿ ವರ್ಣಿಸಿದ್ದಾರೆ. "ತಮ್ಮ ಕುಟುಂಬದೊಡನೆ ತಾವು ಕಳೆಯು ತ್ತಿದ್ದ ಕಾಲವೇ ತಂದೆಯವರಿಗೆ ಸಂತೋಷದ ಕಾಲವೆಂದು ಹೇಳಬಹುದು. ಮನೆಯಲ್ಲಿ ನಾವು ನಾವೇ ಇರುವ ದಿನಗಳು ಕಡಿಮೆ. ಸಂಜೆಯ ಹೊತ್ತಿ ನಲ್ಲಿ ಸ್ನೇಹಿತರೂ ನೆಂಟರೂ ನಿತ್ಯವೂ ಮನೆಗೆ ಬರುವರು. ಆಗ ಅವರೊಡ ನೆಲ್ಲ ತಂದೆಯವರು ಹಾಯಾಗಿ ಮಾತುಕತೆಗಳನ್ನಾಡುವರು. ಹಗಲೆಲ್ಲಾ ಬಹಳ ಶ್ರಮಪಟ್ಟು ಕೆಲಸಮಾಡುವರು. ಸಂಜೆಯಲ್ಲಿ ತಮ್ಮ ಪ್ರೀತಿಯ ನೆಂಟರಿಷ್ಟರ ನಡುವೆ ಅಗ್ರಸ್ಥಾನದಲ್ಲಿ ಕುಳಿತುಕೊಂಡು, ಎಲ್ಲರ ಕಡೆಗೂ ನೋಡುತ್ತಾ, ಎಲ್ಲರ ಮಾತನ್ನೂ ಕೇಳುತ್ತಾ, ನಗುತ್ತಾ ಕೀಟಲೆ ಮಾಡುತ್ತಾ, ಹಾಸ್ಯಮಾಡುತ್ತಾ ಅವರಿದ್ದುದನ್ನು ನೋಡಬೇಕು. ಹೊರಗಿ ನವರು ಕಠಿಣ ಮನುಷ್ಯನೆಂದು ತಿಳಿದುದು ನಮಗೆ ಆಗ ಸ್ವಲ್ಪವೂ ಹಾಗೆ ತೋರುತ್ತಿರಲಿಲ್ಲ. ನಮ್ಮ ರೀತಿಗಳನ್ನೆಲ್ಲಾ ಅವರು ಗಮನಿಸುವರು. ಉಡುಪನ್ನುಡುವುದರಲ್ಲಿ ಹೊಸದೊಂದು ಬಗೆ, ತಲೆಬಾಚಿಕೊಂಡಿರುವುದ ರಲ್ಲಿ ಬೇರೆ ರೀತಿ—ಇವುಗಳನ್ನೆಲ್ಲಾ ಗಮನಿಸುವರು. ಇನ್ನೊಬ್ಬರ ಮನಸ್ಸಿ ನಲ್ಲಿರುವ ಯೋಚನೆಗಳೇನೆಂಬುದನ್ನು ಸರಿಯಾಗಿ ಊಹೆಮಾಡುವರು. ನಮ್ಮನ್ನು ಒಂದೊಂದು ವೇಳೆ ಹೊಗಳುವುದೂ ಉಂಟು. ಆದರೆ ಮಕ್ಕಳನ್ನು ಮೃದೂಕ್ತಿಗಳಿಂದ ಲಾಲಿಸುವುದು ಅವರ ಸ್ವಭಾವವಲ್ಲ. ನಮ್ಮ ತಾಯನ್ನೂ ಒಂದೊಂದು ವೇಳೆ ಹೊಗಳುವರು. ತಾಯಿ ಸಂಕೋಚ

ಗೊಳ್ಳುವರು. ಹಿಂದೆ ನಡೆದ ಯಾವುದಾದರೊಂದು ಸಂಗತಿಯನ್ನು ಹೇಳುವಾಗ ತಂದೆಯವರಿಗೆ ವರ್ತಮಾನಕಾಲವು ಮರತೇಹೋಗಿ ಹಿಂದಿನ ಯೌವನವೂ ಉತ್ಸಾಹವೂ ಅವರ ಮನಸ್ಸಿನಲ್ಲುಂಟಾಗುತ್ತಿದ್ದುವು."

ಮೋತೀಲಾಲರ ಕರ್ತವ್ಯನಿಷ್ಠೆ ಅಪಾರವಾದುದು. ವಕೀಲಿತನದಲ್ಲಿ ಅವರು ಎಂತಹ ನಿಷ್ಠೆಯನ್ನು ತೋರುತ್ತಿದ್ದರೋ ಗಾಂಧೀಜಿಯ ಭಕ್ತರಾದ ಮೇಲೆ ಕಾಂಗ್ರೆಸ್ ಕಾರ್ಯಗಳಲ್ಲೂ ಅಂತಹ ನಿಷ್ಠೆಯನ್ನೇ ತೋರಿದರು. ಅವರು ಅದಕ್ಕಾಗಿ ಅನೇಕ ಸಲ ಜೈಲುವಾಸವನ್ನನುಭವಿಸಬೇಕಾಯಿತು. ರಾಜರ ಸುಖಸಂಪತ್ತುಗಳಲ್ಲಿ ಬೆಳೆದವರು ಜೈಲಿನಲ್ಲಿ ನೆಲದಮೇಲೆ ಮಲಗ ಬೇಕಾಯಿತು. ಮ್ಯಾಂಚೆಸ್ಟರ್ ಬಟ್ಟೆಗಳನ್ನೇ ಧರಿಸುತ್ತಿದ್ದವರು, ಒರಟಾದ ಖಾದಿಯನ್ನು ಉಡಬೇಕಾಯಿತು. ತಾವುಮಾತ್ರವಲ್ಲ, ತಮ್ಮ ಸಂಸಾರದ ಹೆಂಡತಿ ಮಕ್ಕಳಿಗೂ ಕೂಡ ಆ ಬದಲಾವಣೆಯಾಗಬೇಕಾಯಿತು. ಅವರು ಅದಾವುದನ್ನೂ ಲಕ್ಷಿಸಲಿಲ್ಲ. ಕೊನೆಕೊನೆಯಲ್ಲಿ ಅವರ ಆರೋಗ್ಯ ಕೆಟ್ಟಿತು. ಆ ಅನಾರೋಗ್ಯದಲ್ಲಿಯೂ ಸಹ ಅವರು ಕಾಂಗ್ರೆಸ್ಸಿನ ಕೆಲಸಗಳನ್ನು ಉಪೇಕ್ಷಿಸಲಿಲ್ಲ. ಒಂದು ರಾತ್ರಿ ನೆಹರೂ ಕಮಲಾ ಇಬ್ಬರೂ ಬರುವರೆಂದು ಎದುರುನೋಡುತ್ತಿದ್ದಾಗ ಬಾಗಿಲಲ್ಲಿ ನೆಹರೂರವರ ದಸ್ತಗಿರಿಯಾಯಿತು. ಕಮಲಾ ಒಬ್ಬಳೇ ಒಳಗೆ ಪ್ರವೇಶಿಸಿದಳು. ತುಂಬಾ ನಿಶ್ಶಕ್ತರಾಗಿದ್ದ ಮೋತೀಲಾಲರು ವಿಷಯವನ್ನು ಕೇಳಿದಕೂಡಲೇ ಎದ್ದು, ಮುಷ್ಟಿಯಿಂದ ಮೇಜನ್ನಪ್ಪಳಿಸಿ ಘರ್ಜಿಸುವ ಸಿಂಹದಂತೆ ಭೀಷಣರಾಗಿ 'ಇನ್ನು ನಾನು ಮಲಗುವುದಿಲ್ಲ. ಖಾಯಿಲೆಗೆ ವಶನಾಗುವುದಿಲ್ಲ. ಊರಿನಿಂತು ಕೆಲಸ ನಡೆಸುತ್ತೇನೆ, ನೋಡಲಿ'—ಎಂದು ಶಪಥಮಾಡಿದರು. ಹಾಗೇ ಸಂಯುಕ್ತ ಪ್ರಾಂತದಲ್ಲಿ ನಡೆಯುತ್ತಿದ್ದ ಆಂದೋಲನವನ್ನು ವ್ಯವಸ್ಥೆಗೊಳಿಸುತ್ತಾ ಹಗಲಿರುಳೂ ಶ್ರಮಪಟ್ಟು, ಇದ್ದ ಆರೋಗ್ಯವನ್ನೂ ಕೆಡಿಸಿಕೊಂಡರು. ಚಕ್ರಗೋಷ್ಠಿಯ ಕಾಲದಲ್ಲಿ ನಡೆದ ಒಂದು ಕಾಂಗ್ರೆಸ್ ಕಾರ್ಯಕಾರೀ ಸಮಿತಿಯಲ್ಲಿ ಯಾರೋ ಒಬ್ಬರು ಬ್ರಿಟಿಷ್ ಪ್ರಧಾನಿಗೆ ಪ್ರಸನ್ನಭಂಗಿಯನ್ನು ತೋರಲು ಶಾಸನಭಂಗ ಚಳುವಳಿಯನ್ನು ಸ್ವಲ್ಪಮಟ್ಟಿಗೆ ಕಡಿಮೆಮಾಡ ಬೇಕೆಂದು ಸೂಚಿಸಿದರು. ಅದರಿಂದ ಕೋಪಗೊಂಡ ಮೋತೀಲಾಲರು ಕೆರಳಿದ ಸಿಂಹದಂತೆ, 'ನಮ್ಮ ಗುರಿ ಮುಟ್ಟುವವರೆಗೆ ಸಮಾಧಾನ

ಸಾಧ್ಯವಿಲ್ಲ. ನಾನೊಬ್ಬನೇ ಉಳಿದರೂ ಕರ್ತವ್ಯವನ್ನು ಜರುಗಿಸಿಯೇ ಜರುಗಿಸುತ್ತೇನೆ' ಎಂದು ಘರ್ಜಿಸಿದರು. ಈ ಉದ್ವೇಗದಿಂದ ಅವರ ಖಾಯಿಲೆ ಉಲ್ಬಣವಾಯಿತು. ಸಾಯುವವರೆಗೆ ಆ ನಿಷ್ಠೆ ಅವರಲ್ಲಿ ಕಡಿಮೆ ಯಾಗಲಿಲ್ಲ.

ಮೋತೀಲಾಲರ ದೇಶಪ್ರೇಮ ಅಗಾಧವಾದುದು. ಅವರ ಖಾಯಿಲೆ ಅಪಾಯಸ್ಥಿತಿಗೆ ತಿರುಗುತ್ತಲೇ ಸರ್ಕಾರದವರು ನೆಹರೂರವರನ್ನು ಜೈಲಿನಿಂದ ಬಿಡುಗಡೆಮಾಡಿದರು. ನೆಹರೂರವರು ತಂದೆಯವರ ಶುಶ್ರೂಷೆಯಲ್ಲಿ ನಿರತರಾದರು. ಗಾಂಧಿಯವರೂ ಬಂದು ಸೇರಿದರು. ಅಲ್ಲಿಯೇ ಕಾಂಗ್ರೆಸ್ಸಿನ ಕಾರ್ಯಕಾರೀ ಸಮಿತಿ ಸೇರಲೆಂದು ಹೇಳಿ, ಮೋತೀಲಾಲರೂ ಎದುರಿಗೆ ಕುಳಿತರು. ಆಗ ಅವರಾಡಿದ ಮಾತುಗಳು ಸ್ಮರಣೀಯವಾಗಿವೆ; ಅವರ ಗಾಢವಾದ ದೇಶಭಕ್ತಿಯನ್ನು ಸೂಚಿಸುತ್ತವೆ. "ಭಾರತದ ಇತ್ಯರ್ಥ ಸ್ವರಾಜ್ಯಭವನದಲ್ಲಿಯೇ ನಡೆಯಲಿ! ನನ್ನೆದುರಿಗೇ ನಿಶ್ಚಯಮಾಡಿರಿ. ಮಾತೃಭೂಮಿಯ ಭವಿಷ್ಯವನ್ನು ನಿರ್ಧರಿಸುವ ಕಾರ್ಯದಲ್ಲಿ ನನಗೂ ಪಾಲಿರಲಿ. ಸ್ವಾತಂತ್ರ್ಯಗೊಂಡ ಭಾರತವೆದಿ ಮೇಲಿರುವಾಗಲೇ ನನಗೆ ಸಾವು ಬರಲಿ"—ಎಂದರು. ಕಡೆಗಾಲದಲ್ಲಿ ಮಿತ್ರರು ತಂಡೋಪತಂಡವಾಗಿ ನೋಡಿಹೋಗಲು ಬಂದಾಗ ಮಲಗದೆ 'ನನ್ನ ಮಿತ್ರರು ಬಂದಾಗ ನಾನು ಕುಳಿತೇ ಇರಬೇಕು'— ಎಂದು ಕುರ್ಚಿ ಯಲ್ಲಿ ಕುಳಿತು ಎಲ್ಲರಿಗೂ ಪ್ರತಿವಂದನೆಯನ್ನು ಮಾಡಿದರು. ಕಡೆಯ ಘಳಿಗೆ ಯಲ್ಲಿ ಗಾಂಧೀಜಿಯವರನ್ನು ಕಂಡು "ನಾನು ಬೇಗನೆ ಹೊರಡತಕ್ಕವನಾಗಿ ದ್ದೇನೆ, ಮಹಾತ್ಮಾಜಿ! ಸ್ವರಾಜ್ಯಸಿದ್ಧಿಯನ್ನೆದುರುಗೊಳ್ಳಲು ನಾನಿರು ವುದಿಲ್ಲ. ಆದರೆ ಅದನ್ನು ನೀವು ಸಾಧಿಸಿದ್ದೀರಿ, ಬೇಗನೆ ಹಸ್ತಗತಮಾಡಿ ಕೊಳ್ಳುವಿರಿ. ನನ್ನ ಮನಸ್ಸಿಗೆ ಗೊತ್ತು"—ಎಂದರು. ಬಂಧುಬಳಗಗಳೂ ಇಷ್ಟಮಿತ್ರರುಗಳೂ ಜೊತೆಯಲ್ಲಿರುವಾಗಲೇ ಆ ದೇಶಭಕ್ತರು ದಿವಂಗತ ರಾದರು. ಅವರಿಗಿದ್ದ ಒಂದು ಕೊರತೆಯೆಂದರೆ ತಮ್ಮ ಜೀವಮಾನದಲ್ಲಿ ಭಾರತ ಸ್ವತಂತ್ರವಾಗುವುದನ್ನು ನೋಡಲಾಗಲಿಲ್ಲವಲ್ಲಾ ಎಂಬುದು.

ಜವಾಹಿರಲಾಲ ನೆಹರೂರವರಂತಹ ಸತ್ಪುತ್ರನನ್ನು ಹೊತ್ತು ಹೆತ್ತು ಸಾಕಿ ಸಲಹಿದವಳು ಸ್ವರೂಪರಾಣಿ ದೇವಿ. ಆಕೆಯ ಸೌಂದರ್ಯಕ್ಕೆ

ಆಕೆಯ ಹೆಸರು ಅನ್ವರ್ಥ. ಮದುವೆಯಾದ ಮೇಲೆ ಆಕೆ ಮೋತೀಲಾಲರ ಮನೆಯನ್ನು ಸೇರಿದಳು. ಆಗ ಮೋತೀಲಾಲರ ಮನೆಯಲ್ಲಿ ಅವರ ತಾಯಿಯದೇ ಆಡಳಿತ. ತಾಯಿ ಮಗ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರು. ಮೋತೀಲಾಲರು ತಾಯಿಯ ಮನಸ್ಸನ್ನು ಎಂದೂ ನೋಯಿಸಿ ದುದಿಲ್ಲ. ಸ್ವರೂಪರಾಣಿ ಅವರ ತಂದೆ ತಾಯಿಗಳ ಕಿರಿಯ ಮಗಳು. ಪ್ರೇಮದ ಮಗಳೆಂದು ಆಕೆಯನ್ನು ತಂದೆ ತಾಯಿಗಳು ಬಹು ಮುದ್ದಿನಿಂದ ಸಾಕಿದ್ದರು. ಸ್ವರೂಪರಾಣಿ ಗಂಡನ ಮನೆಗೆ ಬಂದಮೇಲೆ ಅತ್ತೆಯವರ ಕಟ್ಟುಪಾಡಿಗೆ ಒಳಗಾದರು. ಜವಾಹಿರಲಾಲರು ತಮ್ಮ ಅಜ್ಜಿಯ ಬಗ್ಗೆ ಬರೆಯುತ್ತಾ, "ಅಜ್ಜಿಯು ಬಹಳ ಹಟದ ಸ್ವಭಾವದವಳಾಗಿದ್ದುದರಿಂದ ಇತರರು ಆಕೆಯನ್ನು ಅಸಡ್ಡೆ ಮಾಡುವಂತಿರಲಿಲ್ಲ. ಆಕೆ ಕಾಲವಾಗಿ ಆಗಲೇ ಐವತ್ತು ವರ್ಷಗಳಾದುವು. ಆದರೂ, ಆಕೆಯ ದೃಢಸಂಕಲ್ಪಕ್ಕೆ ಯಾರಾದರೂ ವಿರೋಧವಾಗಿ ನಡೆದಿದ್ದರೆ ಅಥವಾ ಎದುರುಮಾತಾಡಿದ್ದರೆ, ಭಯಾನಕವಾಗುತ್ತಿದ್ದ ಆಕೆಯ ನೆನಪು, ಹಳಬರಾದ ಕಾಶ್ಮೀರೀ ಹೆಂಗಸರಲ್ಲಿ ಇನ್ನೂ ನಿಂತಿದೆ"— ಎಂದು ಹೇಳಿದ್ದಾರೆ. ಸ್ವರೂಪರಾಣಿ ಇಂತಹ ಕೋಪಿಷ್ಟ ಅತ್ತೆಯ ಕೈಕೆಳಗೆ ಬಿದ್ದರು. ಆದರೂ ನಯಭಯಗಳಿಂದ ಸಂಸಾರ ನಡೆಸುತ್ತಾ ಅಂತಹ ಅತ್ತೆಯವರಿಂದಲೂ 'ಸೈ' ಎನಿಸಿಕೊಂಡರು. ಅತ್ತೆಯೂ ಸೊಸೆಯನ್ನು ಪ್ರೀತಿಸಲು ಶುರುಮಾಡಿದರು. ಈ ಹೊತ್ತಿಗೆ ಮೋತೀಲಾಲರ ಅಣ್ಣಂದಿರು ಕಾಲವಾದ್ದರಿಂದ ಮೋತೀಲಾಲರಿಗೇ ಮನೆಯ ಆಡಳಿತ ಸೇರಿತು. ಅವರು ಪ್ರಯಾಗದಲ್ಲಿ ನೆಲಸಿದರು. ಆಗ ಸ್ವರೂಪರಾಣಿಯವರಿಗೆ ಯಜಮಾನಿಕೆ ಬಂತು. ಆದರೆ ಆಕೆ ಯಾಜಮಾನ್ಯವನ್ನು ನಡೆಸಲಿಲ್ಲ. ಮಾತು ಕೂಡ ಗಟ್ಟಿಯಾಗಿ ಆಡುತ್ತಿರಲಿಲ್ಲ. ಎಲ್ಲರ ಪ್ರೀತಿಯನ್ನೂ ಸಂಪಾದಿಸಿದ್ದುದರಿಂದ ಎಲ್ಲರೂ ಆಕೆಯನ್ನು ಸಂತೋಷಪಡಿಸುವುದರಲ್ಲಿ ಉತ್ಸುಕರಾಗಿದ್ದರು. ಆಕೆಯ ಮನಸ್ಸೂ ಸೂಕ್ಷ್ಮ, ಆರೋಗ್ಯವೂ ಸೂಕ್ಷ್ಮ. ಆಕೆಯ ಇಂಗಿತವನ್ನರಿತು ಆಕೆಗೆ ಬೇಕಾದುದನ್ನು ನಡೆಸಿಕೊಡುತ್ತಾ ಮೋತೀಲಾಲರು ಆಕೆಯ ಆಸೆ ಆಕಾಂಕ್ಷೆಗಳನ್ನು ಈಡೇರಿಸುತ್ತಿದ್ದರು. ಆಕೆಯ ಬಾಯಲ್ಲಿ ಬಂದುದು ಆಗಿಹೋಗುತ್ತಿತ್ತು. ಜವಾಹಿರಲಾಲರವರು ಹುಟ್ಟಿದಮೇಲೆ ಆಕೆಯ ಆರೋಗ್ಯವಿನ್ನೂ ಸೂಕ್ಷ್ಮವಾಯಿತು.

ವಿಶೇಷ ಚಿಕಿತ್ಸೆಯನ್ನೊದಗಿಸಲು ಮೋತೀಲಾಲರು ಆಕೆಯನ್ನು ಯೂರೋಪಿಗೆ ಕರೆದುಕೊಂಡುಹೋಗಿ ವೈದ್ಯಚಿಕಿತ್ಸೆ ನಡೆಸಿದರು. ಜವಾಹಿರಲಾಲರ ಬಳಿಕ ಹುಟ್ಟಿದವರು ಇಬ್ಬರು ಹೆಣ್ಣುಮಕ್ಕಳು, ವಿಜಯಲಕ್ಷ್ಮಿ ಮತ್ತು ಕೃಷ್ಣೆ. ಅಲ್ಲಿಂದಾಚೆಗಂತೂ ಅವರ ಆರೋಗ್ಯ ಬಹು ಸೂಕ್ಷ್ಮವಾಯಿತು. ಏಕಮಾತ್ರ ಪುತ್ರನಾದ ಜವಾಹಿರರಲ್ಲಿ ಆಕೆಯ ಪ್ರೇಮ ಬಹಳ. ಮಕ್ಕಳುಗಳೆಲ್ಲಾ ಪಾಶ್ಚಾತ್ಯ ಸಂಪ್ರದಾಯಗಳಲ್ಲೇ ಬೆಳೆದರು. ದಾದಿ ದಾಸಿಯರ ಸೇವೆಯಲ್ಲೇ ದೊಡ್ಡವರಾದರು. ಮನೆತನದ ಪದ್ಧತಿಯಂತೆ ನೆಹರೂರವರಿಗೆ ಮುಂಜಿಯಾಯಿತು. ಆ ಮುಂಜಿಯ ವಟು, ಜವಾಹಿರರನ್ನು ನೋಡಿದರೆ ಸಾಕು. ಸ್ವರೂಪರಾಣಿ ಎಷ್ಟು ಸಂಪ್ರದಾಯ ಬದ್ಧರೆಂಬುದು ತಿಳಿಯುವುದು. ಏಕೆಂದರೆ ಮೋತೀಲಾಲರು ಹಿಂದಿನ ಪದ್ಧತಿಗಳಲ್ಲಿ ನಂಬಿಕೆ ಇಟ್ಟದ್ದವರಲ್ಲ. ಮಗನೇನೋ ಇಂಗ್ಲೆಂಡಿಗೆ ಹೋಗಿ ವಿದ್ಯಾರ್ಜನೆಮಾಡಿ ಬಂದ. ಹೆಣ್ಣುಮಕ್ಕಳೂ ವಿದ್ಯಾವತಿಯರಾದರು. ಆದರೆ ಅವರು ಪಾಶ್ಚಾತ್ಯರ ಉಡಿಗೆ ತೊಡಿಗೆ ವೇಷಭೂಷಣ ಅಲಂಕಾರಗಳನ್ನು ಮಾಡಿಕೊಳ್ಳುತ್ತಿದ್ದುದರಿಂದ ಸಂಪ್ರದಾಯಬದ್ಧರಾದ ಸ್ವರೂಪರಾಣಿಗೆ ಸ್ವಲ್ಪ ಅಸಮಾಧಾನವಾಯಿತು. ಆದರೆ ಹಾಗೆ ಅವರು ಅಸಮಾಧಾನವನ್ನು ಸೂಚಿಸುವವರಲ್ಲ; ಸೂಚಿಸಲೂ ಇಲ್ಲ. 'ಆನಂದಭವನ'ದಂತಹ ಅರಮನೆ, ರಾಣಿಯರಿಗೆ ಸಮನಾದ ಐಶ್ವರ್ಯ, ಭೀಮಸೇನನಂತಹ ಗಂಡ— ಆಕೆಗೆ ಇನ್ನೇನುಬೇಕು? ಮಕ್ಕಳೆಲ್ಲಾ ವಿದ್ಯಾವಂತರಾದರು. ಭಂಗಾರದಂತಹ ಸೊಸೆ ಬಂದಳು. ಅತ್ತೆ ಸೊಸೆಯರಿಗೆ ಒಂದು ಕುತ್ತಿಗೆಯಲ್ಲೇ ಪ್ರಾಣ. ಸುಖಸಂತೋಷಗಳು ಮನೆಯಲ್ಲಿ ತುಂಬಿತ್ತು.

ಜವಾಹಿರರು ವ್ಯಾಸಂಗವನ್ನು ಮುಗಿಸಿ ಇಂಗ್ಲೆಂಡಿನಿಂದ ವಾಪಸ್ಸು ಬಂದಮೇಲೆ ಮನೆಯಲ್ಲಿ ಹೊಸ ವಾತಾವರಣವೇರ್ಪಟ್ಟಿತು. ತಂದೆಯ ಕೋಪ, ಠೀವಿ, ಶುಭ್ರತೆ—ಇವುಗಳನ್ನು ಮಗನೂ ಪಡೆದಿದ್ದನು. ಜೊತೆಗೆ ಇಬ್ಬರೂ ಹಿಡಿದ ಪಟ್ಟನ್ನು ಬಿಡದಿರುವ ಹಟದ ಸ್ವಭಾವದವರು. ತಂದೆಗೆ ಭಾರತದ ಸ್ವಾತಂತ್ರ್ಯದ ಚಳುವಳಿಯಲ್ಲಿ ಮನಸ್ಸಿಲ್ಲ; ಮಗನ ಎಲ್ಲಾ ಮನಸ್ಸೂ ಅದರ ಮೇಲೇ. ತಂದೆ ಬ್ರಿಟಿಷರ ಬಗ್ಗೆ ಹೆಚ್ಚು ಪಕ್ಷಪಾತಿ, ಮಗನಿಗೆ ಬ್ರಿಟಿಷರ ಮೇಲೆ ದ್ವೇಷವಿಲ್ಲದಿದ್ದರೂ ಅವರ ರಾಜಕೀಯ

ಪಬ್ಬಾಳಿಕೆಯ ಮೇಲೆ ಆಗ್ರಹ. ಸ್ವಾತಂತ್ರ್ಯ ಪಡೆಯುವಾಗಲೂ ಮೆಟ್ಟಿಲು ಮೆಟ್ಟಿಲಾಗಿ ಅದನ್ನು ಪಡೆಯೋಣ ಎಂದು ತಂದೆ; ಸಂಪೂರ್ಣ ಸ್ವರಾಜ್ಯ ವನ್ನು ಒಟ್ಟಿಗೇ ಒಮ್ಮೆಲೇ ಪಡೆಯೋಣವೆಂದು ಮಗ. ಹೀಗೆ ಇಬ್ಬರಿಗೂ ಅಭಿಪ್ರಾಯಭೇದಗಳು ಬಲಿತುವು. ತಾಯಿಗೆ ಚಿಂತೆ ಹಿಡಿಯಿತು. ಸೊಸೆ ಸಮಾಧಾನಮಾಡಿದರೂ ತೀರಲಿಲ್ಲ. ಆಗ ದೈವವೇ ಕಣ್ತೆರೆದಂತೆ ಗಾಂಧಿ ಯವರು ಮನೆಗೆ ಬಂದರು. ಅಭಿಪ್ರಾಯಭೇದಗಳು ಬಹುಪಾಲು ನಿವಾರಣೆ ಯಾಯಿತು. ಉಳಿದ ಭಾಗಕ್ಕೂ ಗಾಂಧಿಯವರೇ ಮಧ್ಯಸ್ಥಗಾರರು. ಸ್ವರೂಪರಾಣಿಗೆ ಮನಸ್ಸು ಹಗುರವಾಯಿತು. ಸಂಸಾರದ ಒಡಕು ಮುಚ್ಚಿತು. ಆದರೆ ಇನ್ನೊಂದು ಬಗೆಯ ನೋವು ಕಾಣಿಸಿತು. ಗಾಂಧಿ ಯವರ ಸಹವಾಸದಿಂದ ಮೋತೀಲಾಲರೂ ಜವಾಹಿರಲಾಲರೂ ಭಾರತದ ಸ್ವಾತಂತ್ರ್ಯಕ್ಕೆ ಟೊಂಕಕಟ್ಟಿ ನಿಂತರು. ಆ ಸಮರದಲ್ಲಿ ಸೇರಿದಂದಿನಿಂದ ಸೆರೆಮನೆವಾಸ ಶುರುವಾಯಿತು. ತಂದೆ–ಮಗ ಇಬ್ಬರೂ ಜೈಲಿಗೆ ಹೋಗಿ ಬರುತ್ತಿದ್ದರು. ಸತ್ಯಾಗ್ರಹದಲ್ಲಿ ಭಾಗವಹಿಸಿ ಲಾಠಿ ಏಟುಗಳನ್ನು ತಿಂದರು. ಹೆಣ್ಣುಮಕ್ಕಳೂ ಮತ್ತು ಸೊಸೆಯೂ ಹಾಗೇ ಚಳುವಳಿಯನ್ನು ಸೇರಿದರು, ಏಟುಗಳನ್ನು ತಿಂದರು, ಜೈಲಿಗೆ ಹೋದರು. ಬಹುಶಃ ಆಕೆ ರೇಷ್ಮೆಯ ಸೀರೆಯನ್ನು ಬಿಟ್ಟು ನೂಲಿನ ಸೀರೆಯನ್ನು ಕಂಡದ್ದೇ ಇರಲಿಲ್ಲ. ಈಗ ರೇಷ್ಮೆ ಬದುಲು ಖಾದಿ ಸೀರೆ ಬಂತು. ಆ ಕಾಲವೆಲ್ಲಾ ಆಕೆಯು ಒಂದು ತಪಸ್ಸನ್ನು ಮಾಡುತ್ತಿದ್ದಿರಬಹುದು. ಜೀವನದಲ್ಲಿ ನಿರ್ಲಿಪ್ತತೆ ಬಂತು. ಸ್ವಾತಂತ್ರ್ಯದ ಯಜ್ಞಕ್ಕಾಗಿ ತನ್ನ ಸಂಸಾರಕ್ಕೆ ಸಂಸಾರವೇ ದುಡಿಯುತ್ತಿರು ವಾಗ ತಾನೊಬ್ಬಳು ಮಾತ್ರ ಅನಾರೋಗ್ಯನಿಮಿತ್ತ ಅನಿವಾರ್ಯವಾಗಿ ಹಿಂದುಳಿಯಬೇಕಾಗಿದೆಯಲ್ಲಾ ಎಂದು ಮನಸ್ಸು ಬಾಧಿಸುತ್ತಿದ್ದಿರಬಹುದು. ಈ ಮಧ್ಯೆ ಮೋತೀಲಾಲರ ಮರಣದಿಂದ ಆಕೆಗೆ ಸಿಡಿಲುಬಡಿದಹಾಗಾಯಿತು. ಸ್ವಲ್ಪ ಚೇತರಿಸಿಕೊಳ್ಳುವ ಹೊತ್ತಿಗೆ ಉಪ್ಪಿನ ಸತ್ಯಾಗ್ರಹ ಬಂತು. ತಾನೂ ಅದರಲ್ಲಿ ಧುಮುಕಿದಳು. ಲಾಠಿ ಏಟುಗಳನ್ನು ತಿಂದಳು. ತಲೆಯೊಡೆದು ರಕ್ತ ಸುರಿಯಿತು. ಎರಡು ಸಲ ದಸ್ತಗಿರಿಯಾಯಿತು. ಆಗ ಆಕೆಯ ಸಂತೋಷ ಎಂತಹುದು? ಸ್ವಾತಂತ್ರ್ಯಸಮರದಲ್ಲಿ ನಾನೂ ಭಾಗಿಯಾದೆ ನಲ್ಲಾ, ನಾನೇ ಭಾಗ್ಯವಂತಳು ಎಂದು ತಿಳಿದರು. ನೆಹರೂರವರಿಗೆ

ಆ ತಾಯಿಯ ಮೇಲೆಷ್ಟು ಪ್ರೇಮ? ಜೈಲಿನಲ್ಲಿದ್ದಾಗ ತಾಯಿ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಳೆಂದೂ ಬೆತ್ತದೇಟುಗಳನ್ನು ತಿಂದಳೆಂದೂ ತಿಳಿಯಿತು. ಆಗಿನ ಅವರ ಮನಸ್ಸಿನ ಉದ್ವೇಗವನ್ನು ಅವರ ಮಾತಿನಿಂದಲೇ ತಿಳಿಯ ಬೇಕು. "ಈ ಸುದ್ದಿಗಳೆಲ್ಲಾ ಪ್ರಸಕ್ತಿ ನಡೆದ ಕೆಲವು ದಿನಗಳ ಮೇಲೆ ನನಗೆ ಬಂದಾಗ, ಕೃಶಳಾದ ನನ್ನ ವೃದ್ಧ ಮಾತೆಯು ನೆತ್ತರನ್ನು ಸುರಿಸುತ್ತ ಧೂಳಿಡಿದ ರಸ್ತೆಯಲ್ಲಿ ಬಿದ್ದಿರುವ ಭಾವನಾಚಿತ್ರವು ನನ್ನ ಕಣ್ಣಮುಂದೆ ನಿಂತಿತು. ಆ ದೃಶ್ಯವನ್ನು ನಾನು ನೋಡಿದ್ದರೆ ಏನುಮಾಡುತ್ತಿದ್ದೆನೆಂಬುದು ಗೊತ್ತಿಲ್ಲ. ನನ್ನ ಅಹಿಂಸಾಮಾರ್ಗವು ಎಷ್ಟರಮಟ್ಟಿಗೆ ನನ್ನನ್ನು ತಡೆಯ ಬಹುದಾಗಿದ್ದಿತೋ ಹೇಳಲಾರೆ. ಬಹಳಮಟ್ಟಿಗೆ ತಡೆಯುತ್ತಿರಲಿಲ್ಲವೆಂದು ತೋರುತ್ತದೆ. ಹನ್ನೆರಡು ವರ್ಷಗಳಿಗಿಂತ ಹೆಚ್ಚಾದ ಕಾಲದಲ್ಲಿ ಮಾಡಿದ ಅಭ್ಯಾಸವು ಮರತೇಹೋಗುತ್ತಿತ್ತೆಂದು ತೋರುತ್ತದೆ. ನನಗಾಗುವ ಅಪಾಯವನ್ನಾಗಲೀ ಬೇರೆಯವರಿಗಾಗುವ ಅಪಾಯವನ್ನಾಗಲೀ ಆಗ ನಾನು ಲಕ್ಷಿಸುತ್ತಿರಲಿಲ್ಲವೆಂಬಂತೆ ತೋರುತ್ತದೆ." ಏಟಿನ ಘಾಯಗಳಿಂದ ಚೇತರಿಸಿಕೊಂಡ ಸ್ವರೂಪರಾಣಿ ನೆಹರೂರವರನ್ನು ಬರೈಲಿ ಜೈಲಲ್ಲಿ ಕಂಡಾಗ ತಾಯಿಯವರ ಬಟ್ಟೆಕಟ್ಟಿದ ಗಾಯಗಳನ್ನು ನೋಡಿ ನೆಹರು ಮರುಗಿದರು. ಅದಕ್ಕೆ ಉತ್ತರವಾಗಿ ತಾಯಿ ಮಗನನ್ನು ಸಮಾಧಾನಪಡಿಸುತ್ತಾ, "ಮಗು! ನಮ್ಮ ವಾಲಂಟಿಯರ್ ಮಕ್ಕಳಂತೆ ನಾನೂ ನನ್ನ ಪಾಲಿನ ಏಟು ತಿಂದೆ" ಎಂದು ಹೇಳಿ, ಸಂತೋಷವನ್ನೂ ಹೆಮ್ಮೆಯ ನೋಟವನ್ನೂ ಬೀರಿದರು. ತಾಯಿಗೆ ತಕ್ಕ ಮಗ; ಮಗನಿಗೆ ತಕ್ಕ ತಾಯಿ. ಇದಾದ ಮೇಲೆ ಸ್ವರೂಪರಾಣಿ ವಾರ್ಧಾದಲ್ಲಿ ಸ್ವಲ್ಪ ದಿನವಿದ್ದು ಕಿರಿಮಗಳ ಮನೆಗೆ ಬೊಂಬಾಯಿಗೆ ಹೋದರು. ಅಲ್ಲಿ ಅವರಿಗೆ ವಾಯುರೋಗ ಹಿಡಿಯಿತು. ಅದು ವಾಸಿಯಾಗುವಹೊತ್ತಿಗೆ ಸೊಸೆ ಕಮಲಾದೇವಿಯ ನಿಧನದ ವಾರ್ತೆ ಮುಟ್ಟಿತು. ಆಕೆಯ ದುಃಖ ಮೇರೆತಪ್ಪಿತು. ಮಗನೇ ಬಂದು ಸಮಾಧಾನ ಹೇಳಬೇಕಾಯಿತು. ಹೆಚ್ಚು ದಿನ ಆಕೆಯು ಜೀವಿಸಲು ಇಷ್ಟಪಡಲಿಲ್ಲ. ೧೯೩೮ನೆಯ ಜನವರಿ ೧೦ನೆಯ ತಾರೀಖಿನ ದಿನ ಆಕೆ ಸ್ವರ್ಗಸ್ಥ ರಾದರು. ಕಡೆಗಾಲದಲ್ಲಿ ಮಗನೂ ಇತರ ಎಲ್ಲ ಬಂಧುವರ್ಗಗಳವರೂ ಹತ್ತಿರವಿದ್ದರು.



ನೆಹರೂರವರ ಪರಿವಾರ

ನಿಂತಿರುವವರು: ಎಡದಿಂದ ಬಲಕ್ಕೆ: ಲಾಡಲೀ ಪ್ರಸಾದ್ ಜುತ್ಷಿ, ಶ್ರೀಮತಿ ಮಹಾರಾಜ ಬಹದ್ದೂರ್ ತಕ್ರು, ಪಂಡಿತ ಮೋತೀಲಾಲ ನೆಹರು.
ಕುಳಿತಿರುವವರು: ಶ್ರೀಮತಿ ಸ್ವರೂಪರಾಣಿ ನೆಹರು, ಜವಾಹಿರಲಾಲ್, ವಿಜಯಲಕ್ಷ್ಮಿ.
ಕೆಳಗಡೆ: ಶ್ರೀಮತಿ ಲಾಡಲೀ ಪ್ರಸಾದ್ ಜುತ್ಷಿ.

ಜವಾಹಿರಲಾಲ ನೆಹರೂರವರ ಹೆಂಡತಿ ಕಮಲಾದೇವಿ, ಪುಣ್ಯವಂತೆ. ಶ್ರೀಮಂತರ ಮಗಳು. ಶ್ರೀಮಂತ ಪುತ್ರನನ್ನೇ ಮದುವೆಯಾದಳು. ಮಹಾ ಮೇಧಾವಿಯಾದ ಗಂಡ, ಕೋಟ್ಯಾಧೀಶ್ವರನಾದ ಮಾವ, ಮಗಳಿಗಿಂತ ಹೆಚ್ಚಾದ ಪ್ರೀತಿಯಿಂದ ನೋಡಿಕೊಳ್ಳುವ ಅತ್ತೆ. ಕಮಲಾದೇವಿಯ ಸೌಭಾಗ್ಯಕ್ಕೇನು ಕಡಿಮೆ? ಒಡವೆ ವಸ್ತ್ರಗಳೋ, ಊಟ ಉಪಚಾರಗಳೋ, ಆಳು ಕಾಳುಗಳೋ, ಯಾವುದರಲ್ಲೂ ಕೊರತೆಯಿಲ್ಲ. ರೂಪದಲ್ಲಿ ಸುಂದರಿ, ಮನಸ್ಸು ಮಗುವಿನ ಮನಸ್ಸು, ವಯಸ್ಸಾದಾಗಲೂ ಚಿರಯೌವನೆಯಾಗಿ ಕಾಣುವ ಅಂಗಸೌಷ್ಠವ, ಎಳೇ ಖಳೆ. ಆಕೆಯು ಸಂಸಾರಸುಖವನ್ನನುಭವಿಸಿದುದು ಕೇವಲ ಅಲ್ಪಕಾಲ ಮಾತ್ರ. ಮದುವೆಯಾದ ತರುಣದಲ್ಲೇ ಗಾಂಧಿಯವರು ಆನಂದ ಭವನವನ್ನು ಪ್ರವೇಶಿಸಿದರು. ಅಂದಿನಿಂದ ಗಂಡ ತನ್ನನ್ನು ಮದುವೆಯಾಗಿದ್ದನೋ ಕಾಂಗ್ರೆಸ್ಸನ್ನು ಮದುವೆಯಾಗಿದ್ದನೋ ತಿಳಿಯದು. ಅಂತೂ ಕಾಂಗ್ರೆಸ್ಸೆಂಬ ಸವತಿ ಹುಟ್ಟಿಕೊಂಡಳು. ಮದುವೆಯಾದದ್ದು ೧೯೧೬ ರಲ್ಲಿ, ಕಾಲವಾದದ್ದು ೧೯೩೬ ರಲ್ಲಿ. ಈ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಆರು ವರ್ಷಗಳು ಗಂಡನಿಗೆ ಜೈಲುವಾಸ. ಕಡೆಯ ಐದು ವರ್ಷಗಳು ಕೆಟ್ಟ ಖಾಯಿಲೆಯಿಂದ ನರಳಬೇಕಾಯಿತು. ಗಂಡನೊಡನೆ ಸಂತೋಷವಾಗಿ ಕಳೆದ ಕಾಲವೆಂದರೆ ಏಳೆಂಟು ವರುಷಗಳು ಮಾತ್ರ.

ಮದುವೆಯಾದ ವರ್ಷದ ಮೇಲೆ ಇಂದಿರೆ ಹುಟ್ಟಿದಳು. ಇದಾದ ಏಳು ವರುಷಗಳ ಮೇಲೆ ಒಂದು ಗಂಡುಮಗು ಹುಟ್ಟಿ ಮೂರು ದಿನಗಳಿದ್ದು ತೀರಿಕೊಂಡಿತು. ಆ ಬಳಿಕ ಕಮಲಾದೇವಿಗೆ ಸ್ತ್ರೀಸಹಜವಾದ ಮಗನಿಲ್ಲವೆಂಬ ಕೊರಗು ಅಂತರಂಗವನ್ನು ಕೊರೆಯುತ್ತಿತ್ತು. ವಿದೇಶೀ ವಸ್ತ್ರ ಬಹಿಷ್ಕಾರದ ಚಳುವಳಿ ಪ್ರಾರಂಭವಾದಮೇಲೆ ರೇಷ್ಮೆ ಸೀರೆ ಕುಪ್ಪುಸಗಳ ಸ್ಥಾನದಲ್ಲಿ ಒರಟಾದ ದಪ್ಪವಾದ ಖಾದಿ ಬಂತು. ಒಡವೆ ವಸ್ತುಗಳೇನೋ ಬೇಕಾದಷ್ಟಿದ್ದುವು. ಆದರೆ ಅದನ್ನು ತೊಡುವ ಅವಕಾಶವೆಲ್ಲಿ? ಅವೆಲ್ಲಾ ಬ್ಯಾಂಕಿನಲ್ಲಿ ಭದ್ರವಾಗಿದ್ದುವು. ಶ್ರೀಮಂತ ಪುತ್ರಿಯಾದರೂ ಲಕ್ಷಾಧೀಶ್ವರರ ಮನೆ ಸೇರಿದ್ದರೂ ಆಕೆಗೆ ಲಭ್ಯವಿದ್ದುದು ಕೇವಲ ಅಲ್ಪವೇ. ಅದೊಂದು ವಿಧಿಯ ಕುಹಕ. ಆದರೆ ಹಾಗೆಂದು ಒಂದು ದಿನವೂ ಆಕೆ ಅಸಮಾಧಾನವನ್ನು ಸೂಚಿಸಿದವಳಲ್ಲ. ಆಕೆ ಸೀತೆಯಂತಹ ಪತಿವ್ರತೆ.

ಸೀತೆ ಗಂಡನೊಡನೆ ವನವಾಸವನ್ನು ಕೈಗೊಂಡಳು. ಕಮಲಾದೇವಿಯೂ ಸೀತೆಯಂತೆ ಗಂಡನೊಡನೆ ಭಾರತದ ಸ್ವಾತಂತ್ರ್ಯಸಮರದಲ್ಲಿ ಸೈನಿಕಳಾಗಿ ಸೇರಿದಳು. ಸೀತೆ ಅರಮನೆಯ ಸಕಲ ಸೌಭಾಗ್ಯಗಳನ್ನೂ ತ್ಯಜಿಸಿದಂತೆ ಈಕೆಯೂ ರಾಜಯೋಗ್ಯವಾದ ಜೀವನವನ್ನು ತ್ಯಜಿಸಿ ಸರಳಜೀವನವನ್ನು ಕೈಗೊಂಡಳು. ಇವೆಲ್ಲಕ್ಕೂ ಕಲಶವಿಟ್ಟಂತಿದ್ದದ್ದು ಗಂಡ ಹೆಂಡಿರ ಅವಿಚಲ ಪ್ರೇಮ. ಗಂಡ ಹೆಂಡಿರು ಒಬ್ಬರ ಮನಸ್ಸನ್ನೊಬ್ಬರು ಅರ್ಥಮಾಡಿಕೊಂಡಿದ್ದರು. ಒಬ್ಬರು ಮಾಡಿದ್ದನ್ನು ಇನ್ನೊಬ್ಬರು ಮೆಚ್ಚಿಕೊಳ್ಳುತ್ತಿದ್ದರು. ಇಬ್ಬರ ದೇಹಗಳು ಎರಡಾಗಿದ್ದರೂ ಮನಸ್ಸು ಒಂದೇ ಎನ್ನುವಂತಿತ್ತು. ಗಂಡ ಸತ್ಯಾಗ್ರಹವನ್ನಾಚರಿಸಿ ಜೈಲು ಸೇರಿದರೆ ತಾನೂ ಅದರಲ್ಲಿ ಭಾಗ ವಹಿಸಲಿಲ್ಲವಲ್ಲಾ ಎಂದು ಹೆಂಡತಿಯ ಮನಸ್ಸು ಕರುಬುತ್ತಿತ್ತು. ಹಾಗೇ ತಾನೂ ಅದರಲ್ಲಿ ಭಾಗವಹಿಸಿದ್ದೂ ಆಯಿತು. ಆಗ ಒಂದು ಸಂಗತಿ ನಡೆಯಿತು. ಕಮಲಾ ನೆಹರು ಹೂವಿನಂತೆ ಕೋಮಲವಾದ ಹೆಂಗಸು. ಸತ್ಯಾಗ್ರಹವನ್ನಾಚರಿಸುತ್ತಾ ಸ್ವಯಂಸೇವಕರಿಗೆ ಮುಂದಾಳಾಗಿದ್ದು ಪೋಲೀಸಿನವರು ತಡೆದಾಗ ಬರೀ ನೆಲದಮೇಲೆ ಕುಳಿತುಕೊಂಡುಬಿಟ್ಟರು. ರಾತ್ರೀ ಹಗಲೂ ಅಲ್ಲಿಂದ ಆಕೆ ಕದಲಲಿಲ್ಲ. ಶ್ರೀ॥ ರುದ್ರರವರು ಅದನ್ನು ಕಂಡು ಪಕ್ಕದಂಗಡಿಯಿಂದ ಒಂದು ರಗ್ಗನ್ನು ತಂದುಕೊಟ್ಟು ಅದನ್ನು ಕೆಳಗೆ ಹಾಕಿಕೊಂಡು ಕುಳಿತುಕೊಳ್ಳುವಂತೆ ಹೇಳಿದರು. ಆಕೆ 'ಹಾಗೇ ಆಗಲಿ' — ಎಂದಳು. ಅವರು ವಾಪಸು ಬರುವಾಗ ನೋಡಿದರೆ, ಆ ರಗ್ಗನ್ನು ಮಗ್ಗುಲಲ್ಲಿದ್ದ ಒಬ್ಬ ವಯಸ್ಸಾದ ಸ್ವಯಂಸೇವಕಿಗೆ ಹೊದ್ದಿಸಲಾಗಿತ್ತು. ಕಮಲಾ ನೆಹರು ನಗುತ್ತಾ ಹೇಳಿದರು 'ನನಗಿಂತ ಆ ತಾಯಿಯ ಆವಶ್ಯಕತೆ ಹೆಚ್ಚಾಗಿತ್ತು'— ಎಂದು. ಆಮೇಲೆ ಕಮಲಾದೇವಿಯ ದಸ್ತಗಿರಿಯೂ ಆಯಿತು. ಜೈಲು ಸೇರುವ ಮುನ್ನ ಒಬ್ಬ ಸುದ್ದಿಕಾರ ಸಂದೇಶಕ್ಕಾಗಿ ಯಾಚಿಸಿದ. ಕೂಡಲೇ ಉತ್ತರ ಬಂತು, "ನನ್ನ ಪತಿಯನ್ನು ಹಿಂಬಾಲಿಸಲು ನನಗೆ ಅತಿ ಸುಖವಾಗಿದೆ; ಹೆಮ್ಮೆಯಾಗಿದೆ. ನಮ್ಮ ದೇಶಬಂಧುಗಳು ನಮ್ಮ ಧ್ವಜವನ್ನೆಂದಿನಂತೆ ಎತ್ತರವಾಗಿ ಹಾರಿಸುತ್ತಿರಲಿ"— ಎಂದು. ಗಂಡನ ಕಾರ್ಯದಲ್ಲಿ ತನಗೂ ಎಂತಹ ನಿಷ್ಠೆ, ಎಂತಹ ದೇಶಭಕ್ತಿ ಪ್ರದರ್ಶನ. ಈ ಸುದ್ದಿಯನ್ನು ಜೈಲಿನಲ್ಲಿದ್ದ ನೆಹರೂರವರು ಕೇಳಿದಾಗ

ಹೇಳಿದರು "ನನ್ನ ತಾಯಿ, ಹೆಂಡತಿ, ತಂಗಿಯರಿಬ್ಬರೂ ತೊಡಗಿದ್ದ ಚಲನವಲನಗಳನ್ನು ತಿಳಿದು ನನಗೆ ಬಹಳ ಸಂತೃಪ್ತಿಯುಂಟಾಯಿತು. ಇವರಿಂದ ದೂರವಾಗಿ ನಾನು ಸೆರೆಮನೆಯಲ್ಲಿದ್ದರೂ, ಇನ್ನೂ ಹತ್ತಿರ ಹತ್ತಿರ ವಾಗುತ್ತಿದ್ದ ನಮ್ಮ ನಮ್ಮ ನಂಟು ಮತ್ತು ಮಹಾಧ್ಯೇಯವೊಂದಕ್ಕಾಗಿ ದುಡಿಯಲು ಕಟ್ಟುಬಿದ್ದ ಗೆಳೆತನ ಇವುಗಳ ಅರಿವುಂಟಾಯಿತು····"—ಎಂದು.

ಕಮಲಾದೇವಿಗೆ ಖಾಯಿಲೆ ಹೆಚ್ಚಾದಾಗ ನೆಹರೂರವರು ಅವಳ ಹತ್ತಿರದಲ್ಲಿದ್ದರೆ ಖಾಯಿಲೆ ವಾಸಿಯಾಗುವುದೆಂದೂ, ರಾಜಕೀಯದಲ್ಲಿ ಭಾಗವಹಿಸುವುದಿಲ್ಲವೆಂದು ಹೇಳಿದರೆ ಸಾಕು, ಅವರನ್ನು ಬಿಡುಗಡೆ ಮಾಡುವುದಾಗಿಯೂ ನೆಹರೂರವರಿಗೆ ಆಸೆ ತೋರಿಸಿದರು. ಹೆಂಡತಿಯ ಮೇಲಿನ ಅಗಾಧ ಪ್ರೇಮ ಅವರ ಮನಸ್ಸನ್ನು ಕದಡಿತು. ಆಗ ಕಮಲಾದೇವಿ ಆ ಸಂದರ್ಭದಲ್ಲಿ ತನಗೆ ಗಂಡನ ಸಹವಾಸ ಅತ್ಯವಶ್ಯಕವಾಗಿದ್ದರೂ 'ಹಾಗೆ ಮಾತುಕೊಡಬೇಡಿ' ಎಂದು ಗಂಡನಿಗೆ ಎಚ್ಚರಿಸಿದಳು. ಆ ಸಮಯದಲ್ಲಿ ನೆಹರೂರವರನ್ನು ಮೀರಿಸಿತ್ತು ಆಕೆಯ ದೇಶಪ್ರೇಮ ಮತ್ತು ಸ್ವಾರ್ಥತ್ಯಾಗ. ನೆಹರೂರವರು ನೈನಿ ಆಲ್ಮೋರಾ ಜೈಲುಗಳಲ್ಲಿದ್ದಾಗ ಖಾಯಿಲೆಬಿದ್ದಿದ್ದ ಹೆಂಡತಿಯನ್ನು ನೋಡಲು ಎಷ್ಟು ಆತುರರಾಗಿದ್ದರು! ತಡವಾದರೆ ಎಷ್ಟು ಕಳವಳ! ತುಂಬಾ ಖಾಯಿಲೆಯಿದ್ದ ಕಮಲಾದೇವಿಯನ್ನು ನೋಡಲೆಂದು ಜೈಲಿನಲ್ಲಿದ್ದ ನೆಹರೂರವರು ಹನ್ನೊಂದು ದಿನದ ಬಿಡುಗಡೆಯ ಮೇಲೆ ಬಂದರು. ಆಗ ಆಕೆ ಕೃಶವಾಗಿ ಕಂಡರು. ಅವರನ್ನು ನೋಡಿದಾಗ ನೆಹರೂರವರಿಗೆ ತಮ್ಮ ಹಿಂದಿನ ದಾಂಪತ್ಯಜೀವನವೆಲ್ಲಾ ಕಣ್ಣಮುಂದೆ ನಿಂತಿತು. ಆ ಭಾವೋದ್ವೇಗವನ್ನು ಅವರ ಮಾತಿನಿಂದಲೇ ಅರ್ಥಮಾಡಿಕೊಳ್ಳಬೇಕು.

"ಅತಿ ದುರ್ಬಲಿಯಾಗಿ ತನ್ನ ರೋಗದೊಡನೆ ಕಾದಾಡುತ್ತಾ ಕಮಲೆ ಮಲಗಿದ್ದಳು. ತೀರಾ ಕೃಶವಾಗಿಹೋಗಿದ್ದಳು. ನನ್ನನ್ನು ಬಿಟ್ಟು ಹೊರಟೇಹೋಗುವಳೋ, ಎಂತೋ, ಎಂಬ ಚಿಂತೆ ಮನಸ್ಸಿಗೆ ಬಲವಾಗಿ ಅಂಟಿಕೊಂಡಿತು. ನಮ್ಮ ಮದುವೆ ನಡೆದು ಹದಿನೆಂಟೂವರೆ ವರ್ಷಗಳು ಕಳೆದಿದ್ದವು. ಅಂದಿನಿಂದ ಸಂಭವಿಸಿದುದೆಲ್ಲವೂ ಸ್ಮರಣೆಯಲ್ಲಿ ಓಲಾಡಿತು. ನನಗಾಗ ಇಪ್ಪತ್ತಾರು ವರ್ಷ; ಕಮಲೆ ಹದಿನೇಳು ವರ್ಷ

ವಯಸ್ಸಿನ ಹುಡುಗಿ, ಲೋಕವ್ಯಾಪಾರವನ್ನು ಸ್ವಲ್ಪವಾದರೂ ಅರಿಯದವಳು. ವಯಸ್ಸಿನಲ್ಲಿದ್ದ ವ್ಯತ್ಯಾಸವಲ್ಲದೆ ಮನಃಪರಿಣತಿಯಲ್ಲಿ ಇಬ್ಬರಿಗೂ ದೊಡ್ಡ ಅಂತರವಿತ್ತು. ಬೇಕಾದ ಪರಿಜ್ಞಾನವನ್ನು ನಾನು ಪಡೆದಿದ್ದಾಗ್ಯೂ ನನ್ನಲ್ಲಿ ಹುಡುಗುತನವೇ ಇತ್ತು. ಕೋಮಲಸ್ವಭಾವದ ಈ ಹುಡುಗಿಯ ಮನಸ್ಸು ಎಷ್ಟು ಸೂಕ್ಷ್ಮವೆಂಬುದನ್ನೂ, ಎಷ್ಟು ಎಚ್ಚರಿಕೆಯಿಂದ ಆ ಮನಸ್ಸಿನ ವಿಕಸನವನ್ನು ಗಮನಿಸತಕ್ಕುದೆಂಬುದನ್ನೂ ನಾನು ಚೆನ್ನಾಗಿ ತಿಳಿದಿದ್ದೆನೆಂದು ಹೇಳಲಾಗದು. ನಮ್ಮಿಬ್ಬರಿಗೂ ಸುಲಭ ಕೋಪವಿತ್ತು. ಸೂಕ್ಷ್ಮಗ್ರಾಹಿತನವಿತ್ತು. ಮಾನದೃಷ್ಟಿಯಿತ್ತು. ಸಣ್ಣಪುಟ್ಟ ಕಾರಣಗಳಿಂದ ಚಿಲ್ಲರೆ ಕಲಹಗಳನ್ನು ಆಡುತ್ತಿದ್ದಾಗ್ಯೂ ಬೇಗನೆ ಸಮಾಧಾನಗೊಳ್ಳುತ್ತಿದ್ದೆವು. ಪರಸ್ಪರ ವಿಶ್ವಾಸಪ್ರೀತಿಗಳು ದೃಢಗೊಂಡುವು; ಪರಸ್ಪರ ಸಹನವೆಂಬುದು ನಿಧಾನವಾಗಿ ಬೆಳೆಯಿತು. ಇಪ್ಪತ್ತೊಂದು ತಿಂಗಳ ತರುವಾಯ ನಮ್ಮ ಮಗಳು ಇಂದಿರೆ ಹುಟ್ಟಿದಳು.''

''ಮದುವೆಯಾದ ಕಾಲವೇ ರಾಜಕೀಯ ಪ್ರಗತಿಗೂ ಸಮಯವಾಯಿತು. ಹೋಂ ರೂಲ್ ಚಳುವಳಿ, ಪಂಜಾಬಿನ ಕ್ರೂರಕೃತ್ಯಗಳು, ಅಸಹಕಾರ ಚಳುವಳಿಯ ಪ್ರಭಾತಗಳಾಗಿ ನಾನು ಪ್ರತಿಯೊಂದರಲ್ಲಿಯೂ ಮುಳುಗಿ ಈಜುವವನಾದೆ. ಅನ್ಯಕಾರ್ಯಗಳಲ್ಲಿ ಮಗ್ನನಾಗಿ ಕಮಲೆಯ ವಿಚಾರದಲ್ಲಿ ಅಲಕ್ಷ್ಯದಿಂದಿದ್ದುಬಿಟ್ಟೆ. ಪ್ರೀತಿಗೆ ಲೋಪವಿರಲಿಲ್ಲ; ಇನ್ನೂ ಬಲಗೊಳ್ಳುತ್ತಿತ್ತು. ನನಗೆ ಶಾಂತಿ ಸಮಾಧಾನಗಳನ್ನು ಕೊಡಲು ನನ್ನ ಹಿಂದೆ ಅವಳು ಸದಾ ಸಿದ್ಧಳಾಗಿದ್ದಳೆಂದು ನಾನು ಭಾವಿಸಿಯೇ ಇದ್ದೆ. ಅವಳು ನನ್ನ ಮನಸ್ಸಿನಲ್ಲಿ ಧೈರ್ಯವನ್ನು ತುಂಬುತ್ತಲೇ ಇದ್ದಳು. ಆದರೆ ಆಕೆಯ ಕೆಲಸಕಾರ್ಯಗಳಲ್ಲಿ ನಾನು ಸೇರಿಕೊಳ್ಳದೆ ದೂರದಲ್ಲಿರುತ್ತಿದ್ದೆ. ಅದರಿಂದ ಕಮಲೆ ಮನಸ್ಸಿನಲ್ಲಿ ಕೊರಗಿದಳು. ಎಲ್ಲವನ್ನೂ ಮರೆತವನಂತೆ ದೂರದಲ್ಲಿದ್ದುದಕ್ಕಿಂತ ಎದುರಿಗೇ ಇದ್ದು ಏನಾದರೂ ನಾನಂದಿದ್ದರೆ ಅವಳು ಅಷ್ಟು ಕೊರಗುತ್ತಿರಲಿಲ್ಲ.''

''ತರುವಾಯ, ಪದೇ ಪದೇ ಅಸ್ವಸ್ಥತೆ ತೋರಲಾರಂಭಿಸಿತು; ನಾನು ಪುನಃಪುನಃ ಜೈಲಿಗೆ ಹೊರಟು ದೀರ್ಘಕಾಲಾವಧಿಗಳನ್ನು ಜೈಲುಗಳಲ್ಲಿಯೇ ಕಳೆದೆ. ಸಿವಿಲ್ ಡಿಸೊಬೀಡಿಯನ್ಸ್ ಪ್ರಾರಂಭವಾದ ಮೇಲೆ

ಕಮಲೆಗೂ ಅಗ್ರಗಾಮಿಯಾಗುವ ಅವಕಾಶ ಸಿಕ್ಕಿತು. ಜೈಲು ಪ್ರಾಪ್ತಿ ತನಗೂ ಆಯಿತೆಂದು ಸಂತೋಷಗೊಂಡಳು. ನಮ್ಮಿಬ್ಬರ ಆಪ್ತತೆ ಅದರಿಂದ ಹೆಚ್ಚಿತು. ಎಷ್ಟೋ ಕಾಲಕ್ಕೊಮ್ಮೆ ಒಬ್ಬರನ್ನೊಬ್ಬರು ನೋಡಲು ದೊರೆಯುತ್ತಿದ್ದ ಅಲ್ಪಾವಕಾಶಕ್ಕಾಗಿ ನಾವು ಅಂತರಂಗದಲ್ಲಿ ತಪಿಸಿದೆವು. ಎಂದು ಆ ಸಮಯ ಬರುವುದೆಂದು ದಿನಗಳನ್ನೆಣಿಸುತ್ತಿದ್ದೆವು. ಒಬ್ಬರಿಗೊಬ್ಬರು ಹಳಬರಾಗಲೇ ಇಲ್ಲ; ಬೇಸರವನ್ನುಂಟುಮಾಡಲೇ ಇಲ್ಲ. ಸ್ವಲ್ಪಕಾಲ ಮಾತ್ರ ಪರಸ್ಪರವಾಗಿ ಕಂಡರೂ ಅಷ್ಟು ಕಾಲವೂ ಉಲ್ಲಾಸಪೂರಿತವಾಗಿಯೇ ಇರುತ್ತಿತ್ತು. ಒಬ್ಬರಲ್ಲೊಬ್ಬರು ಹೊಸ ಅಂಶಗಳನ್ನು ಕಂಡುಕೊಳ್ಳುತ್ತಿದ್ದೆವು. ಆಗಲೂ ನಾವಿಬ್ಬರೂ ಹುಡುಗ ಹುಡುಗಿಯರ ಆಟದ ಪ್ರಜ್ಞೆಯನ್ನು ಬಿಡಲಾಗಲಿಲ್ಲ.''

''ಹದಿನೆಂಟು ವರ್ಷ ಸಂಸಾರ ಮಾಡಿದ್ದರೂ ಕಮಲೆ ಹುಡುಗಿಯಂತೆಯೇ ಕಾಣುತ್ತಿದ್ದಳು. ನವವಧುವಿನಂತೆ ಕಾಣುತ್ತಿದ್ದಳೇ ವಿನಾ ಅನುಭವಪಡೆದ ತಾಯಿಯಂತೆ ಕಾಣುತ್ತಿರಲಿಲ್ಲ. ಮದುವೆಯಾಗಿ ನಮ್ಮ ಮನೆಗೆ ಬಂದಾಗ ಹೇಗಿದ್ದಳೋ ಹಾಗೆಯೇ ಇದ್ದಳು. ನಾನಾದರೆ ಬದಲಾಯಿಸಿದ್ದೆ. ವೃಥಕಾಯನಾಗಿದ್ದು ಚಾಪಲ್ಯ ಚಾಟುಲ್ಯಗಳಿಂದ ಕೂಡಿದ್ದಾಗ್ಯೂ ನನಗೆ ವಯಸ್ಸಾದುದು ಕಾಣುತ್ತಿತ್ತು. ಇನ್ನೂ ಹುಡುಗುತನವುಂಟೆಂದು ಇತರರು ನನಗೆ ಹೇಳುತ್ತಿದ್ದಾಗಲೂ ನನ್ನ ರೂಪದಲ್ಲಿ ವಯಸ್ಸು ಪ್ರಕಟವಾಗುವ ಲಕ್ಷಣಗಳು ಬೆಳೆದಿದ್ದುವು. ಹಣೆಯ ಮೇಲ್ಭಾಗ ಬೋಳಾಯಿತು. ಕೂದಲು ನರೆಯಿತು. ಕಣ್ಣುಗಳ ಸುತ್ತ ಕಪ್ಪುಗಟ್ಟಿತ್ತು. ಮುಖದಲ್ಲಿ ಗುರುತುಗಳು ಬಿದ್ದಿದ್ದುವು. ಕಳೆದ ನಾಲ್ಕು ವರ್ಷಗಳ ಅನುಭವ ಮನವನ್ನು ಕೊರಗಿಸಿತ್ತು. ಹೀಗಾಗಿ ಕಮಲೆಗೂ ನನಗೂ ಎಷ್ಟೋ ಅಂತರ ಕಾಣುವಂತಾಯಿತು. ಇಂದಿರೆಯೊಡನಿದ್ದಾಗ ಇಂದಿರೆಯ ಅಕ್ಕನಂತೆ ಮಾತ್ರ ಕಾಣುತ್ತಿದ್ದಳು. ಇತ್ತೀಚೆಗೆ ಅಪರಿಚಿತರಲ್ಲಿ ಹೋದಾಗ ಕಮಲೆಯನ್ನು ಕಂಡವರು 'ನಿಮ್ಮ ಮಗಳೇನು ಈಕೆ' ಎಂದು ಕೇಳುತ್ತಿದ್ದರು.''

''ಹದಿನೆಂಟು ವರ್ಷಗಳ ಗೃಹಸ್ಥ ಜೀವನ? ಅವುಗಳಲ್ಲೆಷ್ಟು ಕಾಲ ನಾನು ಜೈಲುಗಳಲ್ಲಿ ಕಳೆದದ್ದು? ಎಷ್ಟು ಕಾಲ ಕಮಲೆ ಆಸ್ಪತ್ರೆಗಳಲ್ಲಿಯೂ

ಚಿಕಿತ್ಸಾಲಯಗಳಲ್ಲಿಯೂ ಕಳೆದದ್ದು? ಈಗಲಾದರೂ ಏನು? ಮರಣವನ್ನು ದೂರದಲ್ಲಿರಿಸಲು ಆಕೆಯ ಪ್ರಯತ್ನ; ನಾನಿನ್ನೂ ಬಂದಿಯಾಗಿಯೇ ಇದ್ದು ಹಲಕೆಲವು ದಿನ ಮಾತ್ರ ಹೊರಗೆ ಬಂದಿದ್ದವನು. ತನ್ನ ಆರೋಗ್ಯವನ್ನು ಎಚ್ಚರದಿಂದ ಕಾಪಾಡಿಕೊಳ್ಳದೆಹೋದಳೆಂದು ನನಗೆ ಅಸಹನವೇ ಮೂಡಿತ್ತು. ಆದರೆ ಹೇಗೆತಾನೇ ನಾನು ಆಕ್ಷೇಪಣೆ ಮಾಡಬೇಕು? ಪರಮೋತ್ಸಾಹ ತುಂಬಿದ್ದವಳಿಗೆ ಸುಮ್ಮನಿರಲು ಸಾಧ್ಯವಿಲ್ಲ; ಇಷ್ಟಪೂರ್ತಿಯಾಗಿ ಕರ್ತವ್ಯ ನಡೆಸಲು ಸಾಕಾದಷ್ಟು ಶರೀರಧಾರಢ್ಯವಿಲ್ಲ. ಹೀಗಾಗಿ ಅತ್ತ ರಾಜಕೀಯ ಕರ್ತವ್ಯವನ್ನೂ ತೃಪ್ತಿಕರವಾಗಿ ಕಟ್ಟಿಕೊಳ್ಳಲಾರದೆ ಇತ್ತ ಚಿಕಿತ್ಸೆಯನ್ನೂ ಸಮರ್ಪಕವಾಗಿ ನಡೆಸಿಕೊಳ್ಳಲಾರದೆ ಇದ್ದುಬಿಟ್ಟಳು. ಅಂತರಂಗದ ಉರಿ ದೇಹವನ್ನು ಸುಡುತ್ತ ಮುಕ್ಕುತ್ತಾ ಇದ್ದಿತು.''

''ಈಗ ನನ್ನನ್ನು ಬಿಟ್ಟು ಹೊರಡುವಳೇ? ನನಗೆ ಅತ್ಯಗತ್ಯವಾಗಿ ಬೇಕಾದಾಗ ಬಿಟ್ಟು ಹೊರಟಾಳೆ? ಈಗತಾನೆ ಒಬ್ಬರ ಮನಸ್ಸು ಇನ್ನೊಬ್ಬರಿಗೆ ತಿಳಿದ ಹಾಗಾಗಿತ್ತು; ಕೂಡಿದ ಜೀವನವಿಬ್ಬರಿಗೂ ಈಗಲೇ ನಿಜವಾಗಿ ಪ್ರಾರಂಭವಾಗಬೇಕಾಗಿತ್ತು. ಈಗ ನನ್ನನ್ನೊಂಟಿಯಾಗಿ ಬಿಟ್ಟು ತೆರಳುವಳೇ? ಒಬ್ಬರಿಗೊಬ್ಬರು ಎಷ್ಟು ಬೇಕು! ಇಬ್ಬರೂ ಒಟ್ಟಾಗಿದ್ದು ಮಾಡಬೇಕಾದ ಕೆಲಸಕಾರ್ಯವೆಷ್ಟಿತ್ತು!''

ಕಮಲಾದೇವಿಯ ಖಾಯಿಲೆ ಹೆಚ್ಚಾಗುತ್ತಾ ಬಂದುದರಿಂದ ಯೂರೋಪಿಗೆ ಚಿಕಿತ್ಸೆಗಾಗಿ ಪ್ರಯಾಣ ಮಾಡಬೇಕಾಯಿತು. ಅವರ ಬಳಿ ಇರಲು ಅನುಕೂಲಿಸುವಂತೆ ನೆಹರೂರವರೂ ಬಿಡುಗಡೆಯಾಗಿ ಹೆಂಡತಿಯನ್ನು ಸೇರಿದರು. ಆದರೆ ಯಾವ ಚಿಕಿತ್ಸೆಯೂ ಪ್ರಯೋಜನಕ್ಕೆ ಬಾರದೆ ತಾ॥ ೨೮–೨–೧೯೩೬ ನೆಯ ದಿನ ಕಮಲಾದೇವಿ ನಿಧನರಾದರು; ಗಂಡನನ್ನು ಸಂಪೂರ್ಣವಾಗಿ ತಾಯ್ನಾಡಿನ ಸೇವೆಗೆಂದೇ ಸಲ್ಲಿಸಿ ಮಹಾತ್ಯಾಗಿಯಾಗಿ ಹೆಸರಾಂತರು. ಜವಾಹಿರರು ಹೆಂಡತಿಯನ್ನು ಕಳೆದುಕೊಂಡು ವಾಪಸುಬಂದಾಗ ಅವರನ್ನು ಕಂಡ ತಂಗಿ ಕೃಷ್ಣೆ ಹೀಗೆ ಬರೆದಿದ್ದಾಳೆ. ''ಕೆಲವು ತಿಂಗಳ ಹಿಂದೆ ತಾರುಣ್ಯದಲ್ಲಿ ಕಂಗೊಳಿಸುತ್ತಿದ್ದ ಆತನ ಮುಖದಲ್ಲಿ ದುಃಖವೆಂಬ ಮುಪ್ಪಿನ ಗೆರೆಗಳು ಬಂದಿದ್ದುವು. ಬಲು ಆಯಾಸಗೊಂಡು

ಸಾಕಾಗಿಹೋಗಿರುವ ಮನುಷ್ಯನಂತೆ ತೋರಿಬಂದನು. ತನ್ನ ದುಃಖವನ್ನು ಮರೆಮಾಚಲು ಯತ್ನಿಸಿದರೂ ಆತನ ಕಣ್ಣುಗಳಲ್ಲಿ ದುಃಖಾವೇಗದ ಒಂದು ಪ್ರಪಂಚವೇ ತುಂಬಿಕೊಂಡು ಕಾಣುತ್ತಿದ್ದಿತು. ಅಂದಿನ ಆತನ ಸ್ಥಿತಿ ನಮ್ಮನ್ನು ನೋಯಿಸಿತು.''

ನೆಹರೂರವರ ತಂದೆ ತಾಯಿ, ಹೆಂಡತಿ ಮಾತ್ರವಲ್ಲ, ಇಬ್ಬರು ಸೋದರಿಯರೂ ಭಾವಮೈದುನಂದಿರೂ, ಕೇವಲ ತರುಣಿಯಾಗಿದ್ದ ಮಗಳು ಇಂದಿರೆಯೂ ಕೂಡ ಭಾರತದ ಸ್ವಾತಂತ್ರ್ಯಸಂಗ್ರಾಮದಲ್ಲಿ ಪಾಲುಗೊಂಡು ಜನತೆಗೆ ಮುಂದಾಳುಗಳಾಗಿ ನಿಂತು, ಸೆರೆಮನೆವಾಸವನ್ನನುಭವಿಸಿದರು. ನೆಹರೂರವರ ಸಂಸಾರಕ್ಕೆ ಸಂಸಾರವೇ ಭಾರತದ ಸ್ವಾತಂತ್ರ್ಯಕ್ಕೆ ಶ್ರಮಿಸಿ ಅಮರರಾದರು. ಭಾರತದ ಚರಿತ್ರೆಯಲ್ಲಿ ಅವರ ಹೆಸರುಗಳನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾಗಿದೆ.

## ೩. ವಿಷ ನಿಮಿಷಗಳು

ಜವಾಹಿರಲಾಲ ನೆಹರೂರವರು ಅನೇಕ ಗಂಡಾಂತರಗಳನ್ನು ಗೆದ್ದಿದ್ದಾರೆ. ಈ ಯಾವ ಒಂದು ಗಂಡಾಂತರದಲ್ಲಿಯಾದರೂ ವಿಧಿ ಪ್ರಬಲವಾಗಿದ್ದಿದ್ದರೆ ಭಾರತಕ್ಕೆ ಜವಾಹಿರಲಾಲರಂತಹ ಮಹಾಪುರುಷರ ಸೇವೆ ಇಲ್ಲವಾಗುತ್ತಿತ್ತು ; ಅಲ್ಲದೆ ಈಗಲಾದರೂ ಸ್ವಾತಂತ್ರ್ಯವನ್ನು ಕಾಣುತ್ತಿತ್ತೋ ಇಲ್ಲವೋ ಅನುಮಾನ. ಇಂತಹ ನಾಲ್ಕೈದನ್ನು ಇಲ್ಲಿ ಸಂಗ್ರಹವಾಗಿ ತಿಳಿಸಿದೆ.

ಮೊದಲನೆಯದು, ಅವರು ಕೇವಲ ಹುಡುಗರಾಗಿದ್ದಾಗ ನಡೆದ ಸಂಗತಿ. ನಿತ್ಯಾ ಆಳುಗಳು ಅವರನ್ನು ಕುದುರೆಯ ಮೇಲೆ ಕೂಡಿಸಿಕೊಂಡು ಸವಾರಿ ಮಾಡಿಸುವುದು ಪದ್ಧತಿ. ಒಂದು ದಿನ ಕುದುರೆ ರೇಗಿತ್ತು. ಅದು ಆಳುಗಳನ್ನೂ ತಪ್ಪಿಸಿಕೊಂಡು ನೆಹರೂರವರನ್ನು ಎತ್ತಿಕೊಂಡುಹೋಯಿತು. ಬಹಳ ದೂರ ಹೋದಮೇಲೆ ನೆಹರೂರವರನ್ನು ಅದು ಕೆಡಹಿತು. ಅದರ ಆರ್ಭಟ, ನಾಗಾಲೋಟ ಇವುಗಳಿಂದ ಬಿದ್ದ ಯಾರಾದರೂ ಬದುಕಿ ಬರುತ್ತಿರಲಿಲ್ಲ. ಆದರೆ ದೇವರ ದಯದಿಂದ ನೆಹರೂರವರಿಗೆ ಯಾವ ಅಪಾಯವೂ ಆಗಲಿಲ್ಲ. ಕುದುರೆ ಸುತ್ತಾಡಿ ಬಳಲಿ ಮನೆಯ ಮುಂದೆ ನಿಂತಿತು. ಬರೀ ಕುದುರೆ ಬಂದುದನ್ನು ಕಂಡು ಮನೆಯವರೆಲ್ಲಾ ಹೆದರಿದರು. ಆಳು ಕಾಳುಗಳನ್ನಟ್ಟಿದರು. ಆದರೆ ಸ್ವಲ್ಪಕಾಲದ ಮೇಲೆ ನೆಹರೂರವರು ನಗುತ್ತಾ ಮನೆಗೆ ಬಂದು ಸೇರಿದರು. ಮನೆಯವರ ಆನಂದಕ್ಕೆ ಪಾರವಿಲ್ಲದಾಯಿತು.

ನೆಹರೂರವರು ಲಂಡನ್ನಿನಲ್ಲಿ ಓದುತ್ತಿದ್ದಾಗ ಬಿಡುವುಕಾಲದಲ್ಲಿ ವಿನೋದಕ್ಕಾಗಿ ಊರೂರುಗಳಿಗೆ ಪ್ರಯಾಣಗಳನ್ನಿಟ್ಟುಕೊಳ್ಳುತ್ತಿದ್ದರು. ಒಂದು ಸಲ ಇಂಗ್ಲಿಷ್ ಮಿತ್ರನೊಬ್ಬನ ಜೊತೆಗೆ ನಾರ್ವೆಗೆ ಹೋಗಿದ್ದರು. ಅದು ಬೆಟ್ಟಗುಡ್ಡಗಳ ದೇಶ. ಬೆಟ್ಟಗುಡ್ಡಗಳ ಮಂಜುಗಡ್ಡೆಗಳಲ್ಲಿ ತಿರುಗಾಡಿ ಆಯಾಸಪಟ್ಟು ಒಂದು ಹೋಟಲಿಗೆ ಹೋದರು. ಅಲ್ಲಿ ಸ್ನಾನಕ್ಕೆ ಅನುಕೂಲವಾಗಬೇಕೆಂದು ಹೋಟಲಿನವರನ್ನು ಕೇಳಿದರು. ಸ್ನಾನವೇನೆಂಬುದನ್ನೇ ಅರಿಯದ ಅವರು ಅಲ್ಲಿ ಸ್ನಾನಮಾಡುವ ಸಂಪ್ರದಾಯ

ವಿಲ್ಲವೆಂದು ಹೇಳಿಬಿಟ್ಟರು. ಆದರೆ ಹೋಟಲ ಪಕ್ಕದಲ್ಲೇ ಹಿಮನದಿ ಯಿಂದ ಹುಟ್ಟಿ ರಭಸವಾಗಿ ಹರಿಯುತ್ತಿದ್ದ ಝರಿಯೊಂದಿತ್ತು. ಹೋಟಲಿ ನವರು, ಅವರು ಬೇಕಾದರೆ ಅಲ್ಲಿ ಸ್ನಾನಮಾಡಬಹುದೆಂದು ಹೇಳಿ ಉದಾರತೆ ಯಿಂದ ಚೌಕಗಳನ್ನು ಕೊಟ್ಟರು. ಆ ಸ್ನಾನದ ಅನುಭವವನ್ನು ಅವರ ಮಾತಲ್ಲೇ ಕೇಳಬೇಕು. "ನಾನೂ ನನ್ನ ಆಂಗ್ಲ ಸ್ನೇಹಿತನೂ ಹೊಳೆಗೆ ಇಳಿದೆವು. ನೀರು ಆಳವಾಗಿರಲಿಲ್ಲ. ಆದರೆ ಕೊರೆಯುತ್ತಿತ್ತು. ತಳವು ಬಹಳ ಜಾರಿಕೆಯಾಗಿತ್ತು. ನಾನು ನೀರಿನಲ್ಲಿ ಬಿದ್ದೆ. ಅದರ ಕೊರೆತ ದಿಂದ ನನ್ನ ಕೈಕಾಲುಗಳು ಸೆಟೆದುಹೋಯಿತು. ಎದ್ದು ನಿಲ್ಲುವುದಕ್ಕೆ ಶಕ್ತನಾಗದೆ ನಾನು ಪ್ರವಾಹದಲ್ಲಿ ತೇಲಿಕೊಂಡು ಹೋದೆ. ನನ್ನ ಸಂಗಡಿಗನು ನನ್ನ ಸ್ಥಿತಿಯನ್ನು ತಿಳಿದುಕೊಂಡು, ಹೇಗೋ ದಡದ ಮೇಲಕ್ಕೆ ಬಂದು, ಪ್ರವಾಹದ ಜೊತೆಯಲ್ಲಿಯೇ ಓಡಿ, ಕೊನೆಗೆ ನನ್ನ ಕಾಲನ್ನು ಹಿಡಿದುಕೊಂಡು ಮೇಲಕ್ಕೆ ಎಳೆದುಹಾಕಿದನು. ಮುಂದೆ, ಮುನ್ನೂರು ಗಜಗಳ ದೂರದಲ್ಲಿ, ಈ ಪ್ರವಾಹವು ಕಮರಿಗೆ ಬಿದ್ದು ಒಂದು ಸುಂದರವಾದ ಜಲಪಾತವಾಗಿದ್ದಿತೆಂದು ತಿಳಿದಮೇಲೆ ನಾವು ಎಂತಹ ಕಷ್ಟದಿಂದ ಪಾರಾದೆವೆಂಬುದನ್ನು ಕಂಡುಕೊಂಡೆವು." ಹೀಗೆ ಇನ್ನೊಂದು ಗಂಡಾಂತರದಿಂದ ಪಾರುಮಾಡಿದ ಆ ಇಂಗ್ಲಿಷ್ ಮಿತ್ರನಿಗೆ ಜವಾಹಿರ ಲಾಲರು, ಅವರ ಕುಟುಂಬದವರು ಮಾತ್ರವಲ್ಲ, ಭಾರತವೂ ಕೂಡ ಹಾಗೇ ಇಡೀ ಪ್ರಪಂಚವೇ ಋಣಿಯಾಗಿರಬೇಕಾಗಿದೆ.

ಮದುವೆಯಾದ ಹೊಚ್ಚ ಹೊಸದರಲ್ಲಿ ನೆಹರೂ ನವ-ದಂಪತಿಗಳು ವಿನೋದವಾಗಿ ಕೆಲಕಾಲವನ್ನು ಕಳೆಯಲು ಕಾಶ್ಮೀರಕ್ಕೆ ಹೋದರು. ಪ್ರಕೃತಿ ಪ್ರಿಯರಾಗಿದ್ದ ನೆಹರೂರವರು ಹಿಮವತ್ಪರ್ವತದ ಸೌಂದರ್ಯಕ್ಕೆ ಮನಸೋತರು. ನವ ಯೌವನ, ಉತ್ಸಾಹಗಳಿಂದ ಬೆಟ್ಟವನ್ನೇರು ವುದಕ್ಕೆ ಶುರುಮಾಡಿದರು. ಅಮರನಾಥ ಗುಹೆಯು ಹತ್ತಿರವಿರುವುದಾಗಿ ಕೇಳಿದ್ದರಿಂದ ಅದನ್ನು ಸೇರಬೇಕೆಂದು ಕೆಲವು ಆಳುಗಳೊಡನೆ ಮುಂದೆ ಮುಂದೆ ಹೊರಟರು. ೧೧,೫೦೦ ಅಡಿಗಳ ಬಳಿ ಬಿಡಾರವನ್ನು ಹೂಡಿ, ಚಿಕ್ಕ ಪರಿವಾರದೊಡನೆ ಹಿಮಾಲಯ ಪರ್ವತಾರೋಹಣಕ್ಕೆ ಆರಂಭ ವಾಯಿತು. ೧೫,೦೦೦–೧೬,೦೦೦ ಅಡಿಗಳ ಎತ್ತರದವರೆಗೂ ಹತ್ತಿದು

ದಾಯಿತು. ಆದರೆ ಅಮರನಾಥನ ಗುಹೆ ಕಾಣಲಿಲ್ಲ. ಅದರ ಬದಲು ಪ್ರಕೃತಿ ವಿಕೋಪಗೊಂಡಿತು. ದಟ್ಟವಾದ ಮಂಜು, ಮೈನವಿರೇಳುವಂತೆ ಬೀಸುವ ಮಂಜಿನ ಗಾಳಿ, ಅಲ್ಲಲ್ಲಿ ಬಿರುಕುಬಿಟ್ಟರುವ ದಾರಿ—ಇವುಗಳಲ್ಲಿ ಒಂದೊಂದು ಹೆಜ್ಜೆ ಇಡುವುದೂ ಪ್ರಯಾಸವಾಯಿತು. ಆಗ ಕಾಲುಜಾರಿ ಒಂದು ಅನಾಹುತ ಜರುಗಿತು. ಅವರೇ ಹೇಳುವಂತೆ "....ನಡೆಯು ವುದು ಕಷ್ಟವಾಯಿತು. ಹಿಮಗಾವಲು ಅಲ್ಲಲ್ಲಿ ಸೀಳಿ, ಅನೇಕ ಬಿರುಕು ಗಳು ಬಿಟ್ಟುಕೊಂಡಿದ್ದುವು. ಈ ಬಿರುಕುಗಳನ್ನು ಮೇಲಿನಿಂದ ಬಿದ್ದ ಮಂಜಿನ ಪದರಗಳು ಮುಚ್ಚಿ, ಅವು ಇನ್ನೂ ಅಪಾಯಕರವಾಗಿದ್ದುವು. ಈ ಹೊಸದಾಗಿ ಬಿದ್ದ ಹಿಮದ ಪದರವೇ ನನ್ನನ್ನು ಸುಲಭವಾಗಿ ನಾಶ ಮಾಡಿಬಿಡುತ್ತಿತ್ತು. ಏಕೆಂದರೆ, ನಾನು ನಡೆಯುತ್ತಾ ಗಟ್ಟಿಯಾದ ಜಾಗವೆಂದು ಒಂದು ಕಡೆ ಹೆಜ್ಜೆ ಇಟ್ಟಾಗ, ಅದು ಕುಸಿದುಹೋಯಿತು. ಕೆಳಗೆ ವಿಶಾಲವಾಗಿ ಬಾಯಿತೆರೆದುಕೊಂಡಿದ್ದ ದೊಡ್ಡ ಕಮರಿಯಲ್ಲಿ ಬಿದ್ದೆ. ಕೋಟ್ಯಾಂತರ ವರ್ಷಗಳ ಕಾಲ ಹಾಯಾಗಿ ಒಬ್ಬರಿಗೂ ತಿಳಿಯದಂತೆ ಅಲ್ಲಿಯೇ ಇದ್ದುಬಿಡಬಹುದಾಗಿದ್ದಿತು. ಆದರೆ ಅದೃಷ್ಟವಶಾತ್ ನಾನು ಕಟ್ಟಿಕೊಂಡಿದ್ದ ಹಗ್ಗವು ನನ್ನನ್ನು ತಡೆಯಿತು. ನಾನು ಕಮರಿಯ ಮತ್ತೊಂದು ಭಾಗವನ್ನು ಪಟ್ಟಾಗಿ ಹಿಡಿದುಕೊಂಡೆ. ಕೊನೆಗೆ ನನ್ನನ್ನು ಮೇಲಕ್ಕೆ ಎಳೆದರು." ಹೀಗಾಗಿ ಉಳಿದುಕೊಂಡರು ಜವಾಹಿರಲಾಲ ನೆಹರೂರವರು.

ಇನ್ನೊಮ್ಮೆ ಸ್ವಿಟ್ಸರ್ಲೆಂಡಿನಲ್ಲಿ ನೆಹರೂರವರು ತಂಗಿ ಕೃಷ್ಣೆಯನ್ನು ಕರೆದುಕೊಂಡು ಮಂಜಿನಗಡ್ಡೆಗಳಿಂದ ಆವೃತವಾದ ಬೆಟ್ಟಗುಡ್ಡಗಳ ನ್ನೇರುತ್ತಾ ಜಾರುತ್ತಾ ಇದ್ದರು. ಹಾಗೆ ಆಯಾಸಪಟ್ಟು ಒಂದು ಮಂಜಿನ ಬೆಟ್ಟದ ಮೇಲೆ ಕುಳಿತಿದ್ದರು. ಹಿಂದುಗಡೆಯಿಂದ ತರುಣರ ಗುಂಪೊಂದು ಬಂತು. ಆ ಪೈಕಿ ಒಬ್ಬ ತರುಣನು ತಾನು ಸರಿಯಾಗಿ ಸ್ಥಳಮಾಡಿ ಕೊಂಡು ಕುಳಿತುಕೊಳ್ಳುವ ಯತ್ನದಲ್ಲಿ ಜವಾಹಿರಲಾಲರಿಗೆ ತಿಳಿಯದಂತೆ ಅವರನ್ನು ಕೆಳಕ್ಕೆ ತಳ್ಳಿಬಿಟ್ಟನು. ಆ ಬೆಟ್ಟದ ತಳದಲ್ಲಿ ಗಜಗುಂಡದಂತಹ ಭಯಂಕರವಾದ ಕೊರಕಲು. ಬೆಟ್ಟದ ಮೇಲುಭಾಗವೆಲ್ಲಾ ಮಂಜಿ ನಿಂದಾವೃತವಾಗಿ ತುಂಬಾ ಜಾರುತ್ತಿತ್ತು. ಊರಿಕೊಳ್ಳಲು ಆಸರೆಯೇ

ಇರಲಿಲ್ಲ. ಮುನ್ನೆಚ್ಚರಿಕೆಯಿಲ್ಲದೆ ಜವಾಹಿರಲಾಲರು ಬಿದ್ದವರಾದ್ದರಿಂದ ಆಯತಪ್ಪಿದವರಾಗಿ ಜಾರುವುದಕ್ಕೆ ಮೊದಲಿಟ್ಟರು. ತಳ ತುಂಬಾ ಇಳಿಜಾರಾಗಿದ್ದುದರಿಂದ ಕ್ಷಣಕ್ಷಣಕ್ಕೂ ವೇಗವೇಗವಾಗಿ ಜಾರಿಕೊಂಡು ಬೀಳುತ್ತಾ ಆ ಹಳ್ಳದ ಅಂಚಿಗೆ ಬಂದರು. ಮುಂದೆ ಮಹಾ ಪ್ರಪಾತ. ಇನ್ನೊಂದು ಕ್ಷಣ ಹಾಗೇ ಜಾರಿದ್ದರೆ ಅವರ ಹೆಸರೇ ಇರುತ್ತಿರಲಿಲ್ಲ. ಅಂಚಿಗೆ ಬಂದ ಕಾಲದಲ್ಲಿ ಹೇಗೋ ದೇಹವನ್ನು ಪಕ್ಕಕ್ಕೆ ತಿರುಗಿಸಿದರು. ಜಾರುತ್ತಿದ್ದ ದಿಕ್ಕು ಬದುಲಾಗಿ ದೈವವಶಾತ್ ಪಕ್ಕದಲ್ಲಿ ಸಿಕ್ಕಿದ ಕಲ್ಲಿಗೆ ಕಚ್ಚಿಕೊಂಡು ಆ ಅಪಾಯದಿಂದ ಪಾರಾದರು. ಇದಕ್ಕಲ್ಲವೇ ದೇವರ ದಯವೆನ್ನಬೇಕು!

ಈಚೆಗೆ ಕೆಲವು ತಿಂಗಳುಗಳ ಹಿಂದಿನ ಮಾತು. ನೆಹರೂರವರು ಜೀಪಿನಲ್ಲಿ ಹೋಗುತ್ತಿದ್ದರು. ಒಬ್ಬ ರಿಕ್ಷಾವಾಲ ಸರಕ್ಕನೆ ತನ್ನ ರಿಕ್ಷಾವನ್ನು ನೆಹರೂರವರ ಜೀಪಿನ ಬಳಿ ತಂದು, ಇಳಿದು, ನೆಹರೂರವರ ಮೇಲೆ ಬಂದ. ಅವನ ಕೈಲಿ ತೆರೆದ ಚಾಕುವೊಂದಿತ್ತು. ನೆಹರೂರವರ ಮನಸ್ಸು ಅಂತಹ ಸಮಯಗಳಲ್ಲಿ ತುಂಬಾ ಹತೋಟಿಯಲ್ಲಿರುತ್ತದೆ. ರೆಪ್ಪೆ ಮುಚ್ಚುವುದರೊಳಗಾಗಿ ಅವರು ಅವನ ಕೈಯನ್ನು ಹಿಡಿದುಕೊಂಡು ನೂಕಿಬಿಟ್ಟರು. ಅಷ್ಟರಲ್ಲಿ ಅವರ ಬೆಂಗಾವಲಿನವರೂ ಅವನನ್ನು ಹಿಡಿದುಕೊಂಡರು. ನೆಹರೂರವರು ಆ ಪ್ರಕರಣ ಅಂತಹ ಅಪಾಯಕರವಾದುದಲ್ಲವೆಂದು ನಮ್ರತೆಯಿಂದ ಹೇಳಿದರೂ ಈ ಅಪಾಯದಿಂದ ಪಾರಾದುದಕ್ಕಾಗಿ ದೇಶ ವಿದೇಶಗಳಿಂದ ಶುಭಾಶಯಗಳು ಬಂದುವು. ಅಧ್ಯಕ್ಷರು ಮೊದಲುಗೊಂಡು ಭಾರತಕ್ಕೆ ಭಾರತವೇ ಅವರನ್ನು ಅಭಿನಂದಿಸಿತು.

# ೪. ರಸ ನಿಮಿಷಗಳು

ನೆಹರೂರವರ ಜೊತೆಗೆ ಮಾತಿಗೆ ಕುಳಿತರೆ ರಾಜಕೀಯವಾದ ವಿಷಯವೇ ಆಗಬೇಕೆಂಬುದಿಲ್ಲ. ಯಾವ ವಿಷಯದ ಮೇಲಾದರೂ ಪೂರ್ವ ಸಿದ್ಧತೆಯಿಲ್ಲದೆ ಅವರು ಮಾತಾಡಬಲ್ಲರು. ಇದರ ಮೇಲೆ, ಒದಗುತ್ತಿದ್ದ ವಿವಿಧ ಜನರ ಭೇಟಿಗಳನ್ನು ಮನಸ್ಸಿನ ಉಲ್ಲಾಸಕ್ಕಾಗಿಯೂ ಅವರು ತಿರುಗಿಸಿಕೊಳ್ಳುವುದುಂಟು. ಒಮ್ಮೆ ಈಚೆಗೆ ದೆಹಲಿಯಲ್ಲಿ ಇಯಾನ್ ಸ್ಟೀಫನ್ಸ್ ಎಂಬ ಪತ್ರಿಕೋದ್ಯೋಗಿ ಜವಾಹಿರಲಾಲರೊಡನೆ ಭೇಟಿಗೆ ಕಾಲವನ್ನು ಗೊತ್ತುಮಾಡಿಕೊಂಡ. ಅವನು ಭೇಟಿಯಲ್ಲಿ ಮಾತನಾಡ ಬೇಕೆಂದಿದ್ದ ವಿಷಯವನ್ನೇ ಭೇಟಿಗೊತ್ತಾದ ಕಾಲಕ್ಕೆ ಕೆಲಘಂಟೆಗಳ ಮುಂಚೆ ನೆಹರೂರವರು ಪ್ರಕಟಮಾಡಿಬಿಟ್ಟಿದ್ದರು. ಆತ ಭೇಟಿಗೆ ಬಂದಾಗ ತಾನು ಚರ್ಚಿಸಬೇಕೆಂದಿದ್ದ ವಿಷಯದ ಬಗ್ಗೆ ಸಂಪೂರ್ಣ ಮಾಹಿತಿ ಅವರ ಹೇಳಿಕೆಯಲ್ಲಿ ದೊರಕಿತ್ತೆಂದೂ ಆದರಿಂದ ಅವನು ಈಗ ಹೊಸದಾಗಿ ಚರ್ಚಿಸಬೇಕಾದುದೇನಿಲ್ಲವೆಂದೂ ತಿಳಿಸಿ, ಆ ಭೇಟಿಯನ್ನಲ್ಲಿಗೆ ಮುಕ್ತಾಯ ಗೊಳಿಸಬಹುದೆಂದೂ, ನೆಹರೂರವರಂತಹವರ ಕಾಲವನ್ನು ದುರ್ವ್ಯಯ ಮಾಡಲಿಷ್ಟವಿಲ್ಲವೆಂದೂ ಹೇಳಿ ಹೊರಡಲನುವಾದ. ಆಗ ನೆಹರೂರವರು, "ಬೇಡ, ಹೋಗಬೇಡಿ. ನೀವೀ ಭೇಟಿಯನ್ನು ತುಂಬ ದಿನಗಳಿಂದ ಗೊತ್ತು ಮಾಡಿಕೊಂಡಿರುವಿರಷ್ಟೆ. ಆ ವಿಷಯವಲ್ಲದಿದ್ದರೆ ಬೇರೆ ವಿಷಯವನ್ನು ಮಾತಾಡೋಣ. ಯಾವ ವಿಷಯ ಮಾತಾಡೋಣ, ನೀವೇ ಹೇಳಿ"— ಎಂದರು. ಸ್ಟೀಫನ್ಸರಿಗೇನು ತೋರಿತೋ ಏನೋ. "ನಿಮ್ಮ ಯೋಗ-ವ್ಯಾಯಾಮದ ವಿಷಯ ಆಗಬಹುದೇ?" ಅಂದರು. ನೆಹರು 'ಹೂ ಅದಕ್ಕೇನು'—ಎಂದು ಷರಟುತೆಗೆದು ಪ್ರಾಣಾಯಾಮ ಮಾಡಿ ತೋರಿಸಿದರು. ಹೊಟ್ಟೆಯ ಮಾಂಸಖಂಡಗಳನ್ನು ಹಿಡಿತದಲ್ಲಿಟ್ಟುಕೊಳ್ಳುವುದು. ಬೆನ್ನಿನ ಮಾಂಸಖಂಡಗಳ ಬಿಗಿ-ಹಿಡಿತ—ಇವುಗಳ ವಿವರಣೆ ಆಯಿತು. ಶೀರ್ಷಾಸನದ ಬಗ್ಗೆ ಮುನ್ನುಡಿ ಹೇಳುತ್ತಿದ್ದಾಗ ಅವರು ಗೊತ್ತುಮಾಡಿ ಕೊಂಡಿದ್ದ ಅವಧಿ ಮುಗಿಯಿತು. ಬೇರೆಯವರ ಸರದಿ ಬರದಿದ್ದರೆ ಶಿರ್ಷಾಸನವನ್ನೂ ಮಾಡಿ ತೋರಿಸುತ್ತಿದ್ದೆ ಎಂದರು ನೆಹರೂರವರು. ಅವರು

ಬೆಳಗಾಗೆದ್ದ ಕೂಡಲೇ ಶೀರ್ಷಾಸನ ಮಾಡುವವರು ತಾನೇ. ಪತ್ರಿಕೋದ್ಯೋಗಿ ಸುಪ್ರೀತನಾಗಿ ಹೋದ.

ಒಂದು ಸಲ ಬೊಂಬಾಯಿಯಲ್ಲಿ ಹೀರಾಲಾಲ ದೇಸಾಯರ ಮನೆಯಲ್ಲಿ ಸ್ನೇಹಿತರ ಉಪಹಾರ ಗೋಷ್ಠಿ ಸೇರಿತ್ತು. ನೆಹರೂರವರೂ ಅಲ್ಲಿದ್ದರು. ಏನೋ ಮಾತಿಗೆಮಾತು ಬಂದು ನೆಹರೂರವರು ಹಿಂದೊಮ್ಮೆ ನಾರಿಮನ್ನರನ್ನು ತೊಂದರೆಯಿಂದ ಪಾರುಮಾಡಿದ ಪ್ರಸಂಗ ನಿವರಿಸಿದರು: "ಸತ್ಯಾಗ್ರಹ ಚಳುವಳಿ ಮುಗಿದಮೇಲೆ ಸ್ವಯಂಸೇವಕ ದಳಗಳನ್ನೆಲ್ಲಾ ವಿಸರ್ಜಿಸಿದರು. ನಾರಿಮನ್ನರು ಆಗ ಬೊಂಬಾಯಿ ಪ್ರಾಂತ ಸಮಿತಿಯ ಅಧ್ಯಕ್ಷರಾಗಿದ್ದರು. ಸ್ವಯಂಸೇವಕರು ಅವರನ್ನು ಮುತ್ತಿಕೊಂಡು ಅವರ ದಳವನ್ನು ವಿಸರ್ಜಿಸಕೂಡದೆಂದು ಗಲಾಟೆಮಾಡುತ್ತಾ ನಾರಿಮನ್ನರ ಕಾರಿನಮೇಲೆ ಕಲ್ಲೆಸೆದು ತುಂಬಾ ದಾಂಧಲೆಮಾಡಿದರು. ಆಗ ಅಲ್ಲಿದ್ದ ನೆಹರೂರವರು ಆ ಸ್ವಯಂಸೇವಕರನ್ನು ಕುರಿತು 'ನಿಮ್ಮಲ್ಲಿ ಆರಿಸಿದ ಐದು ಜನ ಬಂದು ಚರ್ಚೆಮಾಡಬಹುದು. ಹಾಗಿಲ್ಲದೆ ಈ ರೀತಿ ಬಲ ಪ್ರಯೋಗ ಮಾಡುವುದಾದರೆ—ಷರಟಿನ ತೋಳನ್ನು ಮೇಲೆತ್ತಿ ಮುಷ್ಠಿಯನ್ನು ತೋರುತ್ತಾ—ತಿಳಿದುಕೊಳ್ಳಿ, ನಾನೇನು ಹೇಡಿಯಲ್ಲ, ನನ್ನನ್ನು ಗುಜರಾತಿ ಸೆಟ್ಟಿ ಅಂತ ತಿಳಿಯಬೇಡಿ'—ಎಂದು ಘರ್ಜಿಸಿದರು. ಆಗ ಗಲಾಟೆ ಅಡಗಿತು."—ಹೀಗೆ ನಡೆಯಿತು ನೆಹರೂರವರ ಮಾತಿನ ಧೋರಣೆ. ಕತೆ ಹೇಳುವಾಗಲೂ ನೆಹರೂರವರು ಷರಟಿನ ತೋಳನ್ನು ಮೇಲೆತ್ತಿದ್ದರು. ಅವರು ಮಾತನಾಡುತ್ತಿದ್ದುದು ಹೀರಾಲಾಲರೊಂದಿಗೆ-ಹೀರಾಲಾಲರೂ ಗುಜರಾತಿ ಸೆಟ್ಟರೇ. ತಕ್ಷಣ ಅವರ ಮಾತಿನಿಂದ ಹೀರಾಲಾಲರು ನೊಂದುಕೊಳ್ಳುವರೆಂದು 'ಕ್ಷಮಿಸಿ ಹೀರಾಲಾಲಜೀ' ಎಂದರು. ಸ್ನೇಹಿತರೆಲ್ಲಾ ನಕ್ಕರು. ಆಗ ಹೀರಾಲಾಲರು—ಅವರೂ ಸರಸಿಗಳು—'ಅದೇನೂ ಪರವಾಯಿಲ್ಲ ಬಿಡಿ. ನೀವೂ ಗುಜರಾತಿ ಸೆಟ್ಟಿಯ (ಮಹಾತ್ಮಾ ಗಾಂಧಿಯವರೂ ಗುಜರಾತಿನವರು, ವೈಶ್ಯರು) ಅನುಯಾಯಿಗಳೇ ತಾನೇ. ಅವರನ್ನು ನೀವು ಹೇಡಿಯೆಂದು ಹೇಳುವುದಿಲ್ಲವಲ್ಲ' ಎಂದರು. ಎಲ್ಲರ ನಗು ಹೆಚ್ಚಾಯಿತು. ಮಿತ್ರರು ಸೇರಿದ ಕಡೆ ಇಂತಹ ಹಾಸ್ಯಪ್ರಸಂಗಗಳೆಷ್ಟೋ ನಡೆಯುತ್ತಿದ್ದುವು. ಅಂತಹ ಕಡೆ ನೆಹರೂರವರು ಬಹು ಸ್ವಾರಸ್ಯವಾಗಿ ಸರಸವಾಗಿ ಮಾತನಾಡುತ್ತಿದ್ದರು.

ಜವಾಹಿರಲಾಲರ ಜ್ಞಾಪಕಶಕ್ತಿ ಅತಿಶಯವಾದುದು. ಅವರ ಬಾಲ್ಯದಲ್ಲಿ ಮನೆಗೆ ಬರುತ್ತಿದ್ದ ರಾಯ್ ಕೃಷ್ಣದಾಸರು ನಲವತ್ತು ವರ್ಷಗಳಾದ ಮೇಲೆ, ನೆಹರೂ ಪ್ರಧಾನಮಂತ್ರಿಯಾದ ಮೇಲೆ, ನೋಡಲು ಬಂದರು. ನೆಹರೂರವರಿಗೆ ಸ್ನೇಹಿತರೊಬ್ಬರು ಪರಿಚಯಮಾಡಿಸಲು ಕೃಷ್ಣದಾಸರನ್ನು ಕರೆತಂದರು. ಕೃಷ್ಣದಾಸರನ್ನು ನೋಡಿದಕೂಡಲೇ ನೆಹರೂರವರು ಪರಿಚಯಕ್ಕೆ ಅವಕಾಶಕೊಡದೆ ಅವರನ್ನು ಗುರುತಿಸಿ ವಿಶ್ವಾಸದಿಂದ ಮಾತನಾಡಿಸಿದರು. ನೆಹರೂರವರ ಬಾಲ್ಯದಲ್ಲಿ ಮೋತೀಲಾಲರು ಮಗನೊಡನೆ ಟೆನಿಸ್ ಆಡುತ್ತಿದ್ದುದು, ಮೋತೀಲಾಲರು ಇಂಗ್ಲೆಂಡಿನಿಂದ ತಂದಿದ್ದ ಗಾಳಿಪಟವೊಂದು ಗಾಳಿಯ ಒತ್ತಡ ಸಾಲದೆ ಮೇಲೇರದೆ ಇದ್ದುದು— ಇಂತಹ ಬಾಲ್ಯದ ಸಂಗತಿಗಳ ನೆನಪುಮಾಡಿಕೊಂಡು, ಬಾಯಿತುಂಬಾ ಮಾತನಾಡಿ ಕೃಷ್ಣದಾಸರನ್ನು ಗೌರವಿಸಿದರು.

ನೆಹರೂರವರ ಕೈ ಎಂದೂ ಬರಿಗೈ ಇರುವುದಿಲ್ಲ. ಅದು ಯಾವಾಗಲೂ ಒಂದು ಪುಟ್ಟ ದೊಣ್ಣೆಯನ್ನು ಹಿಡಿದಿರುತ್ತದೆ. ಅದು ಅವರಿಗೆ ಮೈಸೂರಿನವರು ಕೊಟ್ಟದ್ದು. ಅದರ ಮೇಲೆ ಅವರಿಗೆ ಅಭಿಮಾನ ಬಹಳ. ಒಮ್ಮೆ ಲಕ್ನೋದಲ್ಲಿ ಒಂದು ಸಸ್ಯಶಾಸ್ತ್ರ ವೈಜ್ಞಾನಿಕ ಶಾಲೆಯೊಂದು ಪ್ರಾರಂಭವಾಯಿತು. ನೆಹರೂರವರು ಆ ದೊಣ್ಣೆಯನ್ನು ಕೈಲಿ ಹಿಡಿದುಕೊಂಡೇ ಅಧ್ಯಕ್ಷಸ್ಥಾನದಲ್ಲಿ ಕುಳಿತಿದ್ದರು. ಉಪನ್ಯಾಸದ ಸಮಯ ಬಂದಾಗ ಅವರು ಆ ದೊಣ್ಣೆಯನ್ನು ಡಾಕ್ಟರ್ ಬೀರಬಲ್ ಸಹನಿಯವರ ಕೈಗೆ ಕೊಟ್ಟು 'ಇದನ್ನು ಜೋಪಾನವಾಗಿಡಿ' ಎಂದರು. ಪಕ್ಕದಲ್ಲಿ ನಿಂತಿದ್ದ ರಾಯ್ ಕೃಷ್ಣದಾಸರು 'ನೀವು ಭಾಷಣಮಾಡುವ ಸಮಯ ನೋಡಿಕೊಂಡು ನಾನದನ್ನು ಹೊಡೆದುಬಿಡಬೇಕೆಂದುಕೊಂಡಿದ್ದೆ; ನೀವು ಕಾಣದ ಹಾಗೆ ಹೇಗೆ ಹೊಡೆಯುವುದು ಅಂತ ಯೋಚಿಸುತ್ತಿದ್ದೆ'—ಎಂದರು. ನೆಹರೂರವರು 'ಅದನ್ನು ಹೊಡೆಯುವುದೆ? ಅದೆಷ್ಟು ಧೈರ್ಯ ನಿಮಗೆ! ಅದನ್ನು ನನಗೆ ಮೈಸೂರಲ್ಲಿ ಯಾರೋ ಕೊಟ್ಟರು. ಅದನ್ನು ಅಂದಿನಿಂದ ಕೈಲೇ ಹಿಡಿದಿದ್ದೇನೆ ಜೋಕೆ'—ಎಂದರು. ಅಷ್ಟು ಅಭಿಮಾನದಿಂದ ಇಟ್ಟುಕೊಂಡಿದ್ದ ಆ ಕೋಲನ್ನು ಇತ್ತೀಚಿನ ರಷ್ಯಾ ಪ್ರವಾಸಕಾಲದಲ್ಲಿ ಅಷ್ಟೇ ಅಭಿಮಾನದಿಂದ ಕೊಟ್ಟುಬಂದರು. ೧೨–೭–೧೯೫೫ ನೆಯ ದಿನ ರಷ್ಯಾದ

ದೀರ್ಘಪ್ರವಾಸವನ್ನು ಮುಗಿಸಿಕೊಂಡು ಬೊಂಬಾಯಿನ ವಿಮಾನ ನಿಲ್ದಾಣದಲ್ಲಿ ಇಳಿದಾಗ ಅವರ ಕೈ ಬರಿದಾಗಿತ್ತು. ತುಂಬಾ ಪ್ರೀತಿಯನ್ನು ತೋರಿದವರಿಗೆ ಎಂತಹ ಪ್ರಿಯವಾದ ವಸ್ತುವನ್ನಾದರೂ ಅವರು ಕೊಡಲು ಸಿದ್ಧ.

ಸ್ನೇಹಿತರು ಯಾರಾದರೂ ಆಲಸಿಕೆಯಿಂದ ನರಳುತ್ತಿದ್ದರೆ ನೆಹರೂರವರು ಕೂಡಲೇ ಅವರ ಸಹಾಯಕ್ಕೆ ಹೋಗುತ್ತಾರೆ. ಒಮ್ಮೆ ಈಗ ಮದರಾಸಿನ ಗವರ್ನರಾಗಿರುವ ಶ್ರೀಪ್ರಕಾಶರವರು ತಲೆನೋವಿನಿಂದ ನರಳುತ್ತಿದ್ದರು. ಪಕ್ಕದಲ್ಲಿದ್ದ ನೆಹರೂರವರು ವಿಚಾರಿಸಿದಾಗ ಶ್ರೀಪ್ರಕಾಶರಿಗೆ ತಲೆನೋವು ಆಗಾಗ ಬರುತ್ತಲೇ ಇರುವುದೆಂದು ಗೊತ್ತಾಯಿತು. ಕೂಡಲೇ ನೆಹರೂರವರು ಒಂದು ಸೀಸೆ 'ವೆರಮಾನ್' ತಂದು ಶ್ರೀಪ್ರಕಾಶರ ತಲೆಗೂ ಹಣೆಗೂ ಹಾಕಿ ತಿಕ್ಕಿದರು. ಶ್ರೀಪ್ರಕಾಶರಿಗೆ ಎಷ್ಟೋ ಮೇಲಾಯಿತು. ಇಂದಿಗೂ ಶ್ರೀಪ್ರಕಾಶರವರು ನೆಹರೂ ಉಪಯೋಗಿಸಿದ 'ವೆರಮಾನ್' ಔಷಧಿಗೆ ಋಣಿಯಾಗಿದ್ದಾರೆ. ಅನೇಕಸಲ ನೆಹರೂರವರು ತಮ್ಮ ಸ್ಥಾನಮಾನಗಳನ್ನು ಮರೆತು ಹೀಗೆ ಇತರರಿಗೆ ಸ್ನೇಹವನ್ನು ತೋರಿದ್ದಾರೆ. ಸೆರೆಮನೆವಾಸದಲ್ಲಿದ್ದಾಗ ಎಷ್ಟೋ ಸ್ವಯಂಸೇವಕ ತಂಡದವರಿಗೂ ಕೈದಿಗಳಿಗೂ ಸಹ ಔಷಧೋಪಚಾರ ನಡಸುತ್ತಿದ್ದರು.

ನೆಹರೂರವರು ತಂದೆಯನ್ನು ಕಳೆದುಕೊಂಡ ಮೇಲೆ ಸಿಂಹಳಕ್ಕೆ ಹೋಗಿದ್ದರು. ಅಲ್ಲಿ ನುವಾರಎಲಿಯ ಎಂಬ ಊರಲ್ಲಿ ಎಲ್ಲಾ ವಸತಿ ಸೌಕರ್ಯ ಹವಾಮಾನಗಳೂ ಬಹಳ ತೃಪ್ತಿಕರವಾಗಿತ್ತು. ಆ ಸಂತೋಷದಲ್ಲಿ ಅವರು ತಂದೆಯವರು ಕಾಲವಾದದ್ದನ್ನು ಕೂಡ ಮರೆತುಬಿಟ್ಟು, 'ತಂದೆಯವರಿಗೆ ಈ ಊರು ಎಷ್ಟು ಹಿತಕರವಾಗಿದ್ದೀತು. ತಂತಿ ಕೊಟ್ಟು ಅವರನ್ನು ಕರೆಸಿಕೊಳ್ಳಬೇಕು' ಎಂದುಕೊಂಡರು. ತಂತಿ ಕೊಡಬೇಕು ಎನ್ನುವಷ್ಟರಲ್ಲಿ ಜ್ಞಾನೋದಯವಾಯಿತು. ಹಾಗೇ ಸಿಂಹಳದಿಂದ ಹೊರಟು ಅಲಹಾಬಾದಿಗೆ ಬಂದರು. ಅಲ್ಲಿ ವಿಚಿತ್ರವಾದ ಕಾಗದ ಅವರಿಗೆ ಕಾದಿತ್ತು. ಅದನ್ನು ಮೋತೀಲಾಲರೇ ಬರೆದಿದ್ದಾರೆ, ಅವರದೇ ಸ್ವಹಸ್ತ. ತನಿಖೆ ಮಾಡಿನೋಡಿದ್ದರಲ್ಲಿ ಆ ಕಾಗದ ಅಂಚೆ ಕಚೇರಿಯಲ್ಲಿ ಐದು ವರ್ಷ ಕಳೆದಿತ್ತೆಂದು ಗೊತ್ತಾಯಿತು. ಆದರೂ ಅದು ಬಂದು ಸೇರಿದ್ದು ನೆಹರೂರವರಿಗೆ ಪುನಃ ತಂದೆಯನ್ನು ಕಂಡಂತೆಯೇ ಆಯಿತು.

ದಿನದಿನಕ್ಕೆ ಜನರಿಗೆ ನೆಹರೂರವರಲ್ಲಿ ಪ್ರೀತ್ಯಾದರಗಳು ಹೆಚ್ಚಾಗುತ್ತಾ ಬಂದುವು. ೧೯೩೬–೩೭ ರ ಹೊತ್ತಿಗೆ ಈ ಮೆಚ್ಚಿಕೆ ಶಿಖರಕ್ಕೇರಿತು. ಇದನ್ನು ಕಂಡು ನೆಹರೂರವರಿಗೂ ಒಂದು ಕುಚೋದ್ಯ ಮಾಡಬೇಕೆನಿಸಿತು. ೧೯೩೭ ನೆಯ ನವೆಂಬರ್ ತಿಂಗಳಿನ 'ಮಾಡರ್ನ್ ರಿವ್ಯೂ' ಮಾಸಪತ್ರಿಕೆಗೆ ವಿಚಿತ್ರವಾದ ಲೇಖನವನ್ನು 'ಚಾಣಕ್ಯ'ನೆಂಬ ಕಾವ್ಯನಾಮದಿಂದ ತಾವೇ ಬರೆದುಕಳುಹಿಸಿದರು. ಅದರಲ್ಲಿ ನೆಹರೂರವರ ರಾಷ್ಟ್ರಪತಿಯ ದರ್ಪ ವೈಭವಗಳನ್ನೂ ಜನರ ಕುರುಡು ಉತ್ಸಾಹವನ್ನೂ ವಿವರಿಸಿ, 'ಈತನು ಕಾಲಚಕ್ರದಲ್ಲಿ ಹೇಗೆ ತಿರುಗುವನೋ ಎಚ್ಚರವಹಿಸಿರಬೇಕು' ಎಂದು ಜನತೆಗೆ ತಿಳುವಳಿಕೆ ಕೊಡುತ್ತಾ 'ನೆಹರು ಸರ್ವಾಧಿಕಾರಿಯಾಗದಹಾಗೆ ನೋಡಿಕೊಳ್ಳಬೇಕು' ಎಂದು ಎಚ್ಚರಿಕೆ ಮಾತನ್ನು ಬರೆದಿದ್ದರು. ಆ ಪತ್ರಿಕೆಯ ಸಂಪಾದಕರಿಗೆ ಕೂಡ ಆ ಲೇಖನವನ್ನು ಬರೆದವರಾರೆಂಬುದು ತಿಳಿದಿರಲಿಲ್ಲ. ಇಂತಹ ವಿನೋದ ಚರ್ಯೆ ಜವಾಹಿರಲಾಲರೊಬ್ಬರಿಗೆ ಮಾತ್ರ ಸಹಜವಾಗಿದ್ದದ್ದು.

ಬ್ರಿಟಿಷರು ನೆಹರೂರವರ ಶಕ್ತಿಯನ್ನು ಅವರು ದೇಶಸೇವೆಗೆಂದು ತೊಡಗಿದ ತರುಣದಲ್ಲಿಯೇ ಅರಿತರು. ಆಗ ೧೯೨೩ ನೆಯ ಇಸವಿ. ನೆಹರೂರವರು ವಕೀಲಿಯನ್ನು ಬಿಟ್ಟುಕೊಟ್ಟಿದ್ದರು. ಸ್ವಂತ ಸಂಪಾದನೆ ಇರಲಿಲ್ಲ. ತಂದೆಗೆ ಭಾರವಾಗಬಾರದೆಂಬ ಕೊರಗು. ಈ ಸಮಯದಲ್ಲಿ ಸರ್ ಗ್ರಿಮ್‌ವುಡ್ ಮಿಯರ್ಸ್ ಎಂಬಾತನು ಹೈಕೋರ್ಟಿನಲ್ಲಿದ್ದು, ಮೋತೀಲಾಲರ ಸ್ನೇಹಿತನಾದ್ದರಿಂದ ಆಗಾಗ ನೆಹರೂರವರ ಮನೆಗೆ ಬಂದು ಅವರೊಡನೆ ಮಾತುಕತೆಯಾಡುತ್ತಿದ್ದನು. ಅವನೊಂದು ದಿನ ಆಮಾತು ಈಮಾತು ಆಡುತ್ತಾ, ದೇಶದಲ್ಲಿ ಶಿಕ್ಷಣ ಕೆಲಸಕಾರ್ಯಗಳು ಎಷ್ಟು ಆವಶ್ಯಕವೆಂಬುದನ್ನು ವಿವರಿಸಿ 'ಯೋಗ್ಯನಾದವನು ಶಿಕ್ಷಣದ ಮಂತ್ರಿಯಾದರೆ ಎಷ್ಟು ಚೆನ್ನ' ಎಂದು ಹೇಳಿ, "ಒಂದು ವೇಳೆ ನೀವೇ ಆ ಮಂತ್ರಿಯಾಗಲೊಪ್ಪಿದರೆ ಗವರ್ನರು ನಿಮಗಡ್ಡಿ ಬರುವುದಿಲ್ಲವಂತೆ; ಅವರೇ ಹಾಗಂತ ಸಂದರ್ಭವಶಾತ್ ನನ್ನ ಮುಂದೆ ಹೇಳಿದರು" ಎಂದು ಹೇಳಿದನು. ನೆಹರೂರವರು ಒಪ್ಪಿದ್ದರೆ ಕೂಡಲೇ ಮಂತ್ರಿಯಾಗಬಹುದಾಗಿತ್ತು. ಆದರೆ ಇಟ್ಟ ಹೆಜ್ಜೆ ಹಿಂದಿಡದ ದೇಶಭಕ್ತನ ದೃಷ್ಟಿಯೇ ಬೇರೆ ಆಗಿತ್ತು.

ಬ್ರಿಟಿಷರು ಆಸೆ ತೋರಿಸಿದ ಮಂತ್ರಿಪದವಿಗೆ ನೆಹರೂರವರು ಆಸೆಪಡಲಿಲ್ಲ. ನೆಮ್ಮದಿಯ ಜೀವನವನ್ನು ತ್ಯಜಿಸಿ ಲಾಠಿ ಏಟುಗಳು ಜೈಲುವಾಸಗಳ ಜೀವನವನ್ನಾರಿಸಿಕೊಂಡು ಕೀರ್ತಿವಂತರಾದರು.

ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ನೆಹರೂರವರಿಗೆ ಜೈಲುವಾಸ ಎಂಬುದು ಅಪರೂಪವೇನಲ್ಲವಲ್ಲ. ಹಾಗೊಂದು ಸಲ ಇದ್ದಕ್ಕಿದ್ದ ಹಾಗೇ ಜೈಲಿಗೆ ಹೋಗಬೇಕಾಗಿ ಬಂತು. ಅದನ್ನು ಗಾಂಧಿಯವರಿಗೂ ಮಗಳಿಗೂ ತಿಳಿಸಬೇಕಾಯಿತು. ಗಾಂಧಿಯವರಿಗೆ ಹೀಗೆ ತಂತಿ ಕೊಟ್ಟರು: "ವಿಶ್ರಾಂತಿ ಚಿಕಿತ್ಸೆಗಾಗಿ ಪುನಃ ಹೊರಡುತ್ತಿದ್ದೇನೆ; ಈ ಬಾರಿ ಕಲ್ಕತ್ತ, ಪ್ರೀತಿಯ ವಂದನೆಗಳು." ಹಾಗೇ ಮಗಳಿಗೂ ಒಂದು ತಂತಿ ಕೊಟ್ಟರು: "ಇನ್ನು ಸ್ವಲ್ಪಕಾಲ ನನ್ನ ಎರಡನೆಯ ಮನೆಗೆ ಹಿಂತಿರುಗುತ್ತಿದ್ದೇನೆ. ಪ್ರೀತಿಯ ಆಶೀರ್ವಾದಗಳು. ನಿಶ್ಚಿಂತೆಯಾಗಿ ಸುಖದಿಂದಿರುವವಳಾಗು"—ಎಂದು. 'ವಿಶ್ರಾಂತಿ ಚಿಕಿತ್ಸೆ', 'ಎರಡನೆಯ ಮನೆ', ಈ ಪದಗಳ ಸ್ವಾರಸ್ಯ, ಹಾಸ್ಯ, ಧ್ವನಿಗಳನ್ನು ಬುದ್ಧಿವಂತರೇ ಗ್ರಹಿಸಬೇಕು. ಅಪರೂಪವಾಗಿ ಇಂತಹ ಹಾಸ್ಯ ನೆಹರೂರವರಿಂದ ಪ್ರಕಟವಾಗುತ್ತಿತ್ತು.

ಪ್ರಶ್ನೆಗೆ ತಕ್ಕ ಪ್ರತ್ಯುತ್ತರ ಕೊಡುವುದರಲ್ಲಿ ನೆಹರೂರವರು ನಿಸ್ಸೀಮರು. ಆ ಉತ್ತರಗಳಲ್ಲಿ ಅವರ ಸಮಯಸ್ಫೂರ್ತಿ ಪ್ರಕಟವಾಗುತ್ತಿತ್ತು. ಇಂಗ್ಲಿಷಿನವರಿಗೆ ಭಾರತೀಯರೆಂದರೆ ಏನೋ ಮಂತ್ರಗಾರರು, ಅನಾಗರಿಕರು ಎಂಬ ಭಾವನೆ ಇತ್ತು. ಇಂಗ್ಲೆಂಡಿಗೆ ಹೋದಾಗ ಒಬ್ಬ ಹೆಂಗಸು ಕೇಳಿದಳಂತೆ, 'ನಿಮ್ಮ ದೇಶದ ತುಂಬಾ ವಜ್ರಗಳೂ ವಿಷಸರ್ಪಗಳೂ ಇರುವುದು ನಿಜವೇ?' ಎಂದು. ಅದಕ್ಕೆ ತಕ್ಷಣ ನೆಹರೂ ಉತ್ತರ ಕೊಟ್ಟರು, 'ಹೌದು ನಾವೇನುಮಾಡುವುದು? ಒಂದೊಂದು ವಜ್ರದ ಸುತ್ತಲೂ ಒಂದೊಂದು ವಿಷಸರ್ಪ ಸುರುಳಿಸುತ್ತಿಕೊಂಡಿರುತ್ತದೆ' ಎಂದು. ಅವರ ಅಂತರಾರ್ಥವನ್ನು ಆಕೆ ಗ್ರಹಿಸಿದಳೋ ಇಲ್ಲವೋ ತಿಳಿಯದು. ಪ್ರಧಾನ ಮಂತ್ರಿಯಾದ ಮೇಲೆ ಬೆಂಗಳೂರಿಗೆ ಬಂದಿದ್ದಾಗ ಒಂದು ಬಿನ್ನವತ್ತಳೆಯಲ್ಲಿ 'ಜವಾಹಿರ್—ಭಾರತಕ್ಕೆ ಜವಾಹಿರ್—ಅನ್ವರ್ಥನಾಮಧೇಯ'—ಎಂದಿದ್ದುದನ್ನು ಕಂಡ ಕೂಡಲೇ ಜವಾಹಿರರು 'ನನ್ನ ಹೆಸರು ಜವಾಹಿರಲಾಲನೇನೋ ನಿಜ. ಆದರೆ ಆ ಹೆಸರನ್ನಿಟ್ಟ ತಪ್ಪು ತಂದೆತಾಯಿಗಳದು'—ಎಂದು ತಮ್ಮ

ನಮ್ರತೆಯನ್ನು ಸೂಚಿಸಿದರು. ನೆಹರೂರವರು ಅಲಹಾಬಾದಿನಲ್ಲಿದ್ದಾಗ ಅಮೆರಿಕಾದ ಕೆಲವು ಮಹಿಳೆಯರು ಅವರನ್ನು ಭೇಟಿಮಾಡಲು ಹೋಗಿದ್ದರು. ಕುಶಲಪ್ರಶ್ನೆಗಳಾದಮೇಲೆ ಆ ಮಹಿಳೆಯರು ನೆಹರೂರವರನ್ನು ವಿಶೇಷವಾಗಿ ಹೊಗಳಿದರು. ಆಗ ನೆಹರು ಅವರನ್ನು ಪ್ರಶ್ನಿಸುತ್ತಾ, "ಘನತೆಗೆ ನಿಮ್ಮ ಅಳತೆಗೋಲಾವುದು?" ಎಂದರು. ಅದಕ್ಕೆ ಒಬ್ಬಾಕೆ 'ಘನವಂತ ಮನುಷ್ಯನು ಜನಗಳಿಗೆ ನಾಯಕನಾಗುತ್ತಾನೆ; ಮತ್ತು ಆ ನಾಯಕತ್ವವನ್ನು ಅವರು ಪ್ರೀತಿಸುವಂತೆಯೂ ನಡೆದುಕೊಳ್ಳುತ್ತಾನೆ' —ಎಂದಳು. ನೆಹರೂರವರು ಕೂಡಲೆ, 'ಜನಕ್ಕೆ ತಾವು ನಾಯಕನಿಂದ ಪ್ರೇರಿತರಾಗುತ್ತಿದ್ದೇವೆಂಬ ಅರಿವಾಗದಂತೆ ವರ್ತಿಸುವುದು ಇನ್ನೂ ಮೇಲಲ್ಲವೆ?'—ಎಂದು ಕೇಳಿದರು. ಅರಿವಾಗದಂತೆ ಪ್ರೇರೇಪಿಸುವುದು ಎಷ್ಟು ಕಷ್ಟವಾದುದು? ಆದರೆ ಆ ಅಭಿಪ್ರಾಯ ಎಷ್ಟು ಉದಾತ್ತವಾದುದು. ಆ ಮಹಿಳೆಯರು ಆ ಪ್ರಶ್ನೆಗೆ ನಿರುತ್ತರರಾದರು. ಹಾಗೂ ನೆಹರೂರವರ ಅಭಿಪ್ರಾಯವನ್ನು ತುಂಬಾ ಮೆಚ್ಚಿಕೊಂಡರು. ಹೀಗೇ ಸಂಭಾಷಣೆ ಮುಂದುವರೆದಾಗ ನೆಹರೂರವರು ಆಗತಾನೇ ಉದಿಸುತ್ತಿದ್ದ ಬಾಲಚಂದ್ರನನ್ನು ತೋರಿಸುತ್ತಾ 'ಅಗೋ ನೋಡಿ, ಅಲ್ಲಿ ಬಾಲಚಂದ್ರನು ಉದಯಿಸುತ್ತಿದ್ದಾನೆ'—ಎಂದರು. ಅದಕ್ಕೆ ಆ ಮಹಿಳೆಯರಲ್ಲೊಬ್ಬಳು, 'ಬಾಲಚಂದ್ರನಿಗಿಂತ ಪೂರ್ಣಚಂದ್ರನೇ ಚೆನ್ನಲ್ಲವೆ?' ಎಂದು ಪ್ರಶ್ನಿಸಿದಳು. ನೆಹರೂರವರು 'ಇಲ್ಲ ಪೂರ್ಣಚಂದ್ರನು ಗತವೈಭವವನ್ನು ಬೀರುತ್ತಾನೆ. ಬರಬರುತ್ತಾ ಕ್ಷೀಣವಾಗುತ್ತಾನೆ. ಬಾಲಚಂದ್ರನೇ ಚೆನ್ನು. ಅವನು ಭವಿಷ್ಯತ್ತಿನಲ್ಲಿ ಆಶಾಂಕುರವನ್ನುಂಟುಮಾಡುತ್ತಾನೆ. ಒಂದೊಂದು ರಾತ್ರಿ ಕಳೆದಂತೆ ಮುಂದಿನ ರಾತ್ರಿಗೆ ಹೆಚ್ಚು ಕಾಂತಿಯನ್ನು ಬೀರುತ್ತಾನೆ' —ಎಂದರು. ಎಷ್ಟು ಸರಿಯಾದ ಮಾತು. ಇತ್ತೀಚೆಗೆ ಕೆಲವು ದಿನಗಳ ಹಿಂದೆ ರಷ್ಯಾದಲ್ಲಿ ಪ್ರವಾಸಮಾಡುತ್ತಿದ್ದಾಗ ರಷ್ಯಾದ ಪ್ರಮುಖ ಮಂತ್ರಿಗಳೊಬ್ಬರು ಭಾಷಣಮಾಡುತ್ತಾ, 'ರಷ್ಯನರು ಸ್ನೇಹಪರರಾದರೆ ಪ್ರಾಣವನ್ನು ತೆತ್ತಾದರೂ ಸ್ನೇಹಿತರನ್ನು ಕಾಪಾಡುತ್ತಾರೆ. ಆದರೆ ಅವರು ಶತ್ರುಗಳಾದರೆ ಅವರ ಶತ್ರುಗಳನ್ನು ಧ್ವಂಸಮಾಡಿ ನಿರ್ಮೂಲಮಾಡದೆ ಬಿಡರು'—ಎಂಬರ್ಥದಲ್ಲಿ ಮಾತನಾಡಿದರು. ನೆಹರೂರವರು ಉತ್ತರ

ಕೊಡುತ್ತಾ, 'ಭಾರತೀಯರಿಗೆ ಶತ್ರುಗಳೇ ಇಲ್ಲ. ಹಾಗೆ ಯಾರಾದರೂ ಶತ್ರುಗಳಿದ್ದರೆ ಅವರನ್ನು ಕೂಡ ಸ್ನೇಹಿತರನ್ನಾಗಿ ಅವರು ಮಾರ್ಪಡಿಸಿ ಕೊಳ್ಳುತ್ತಾರೆ'— ಎಂದು ಹೇಳಿದರು. ಎಷ್ಟು ಸಮಯೋಚಿತವಾದ ಮಾತದು? ರಷ್ಯನರಿಗೂ ಭಾರತೀಯರಿಗೂ ಇರುವ ಸ್ವಭಾವ ವ್ಯತ್ಯಾಸ ವನ್ನು ಹೇಗೆ ವ್ಯಕ್ತಪಡಿಸಿದರು!

ಕಷ್ಟದಲ್ಲಿರುವವರ ಸಹಾಯಕ್ಕೆ ಹೋಗುವಾಗ ನೆಹರೂರವರು ಇವರು ತಮ್ಮವರು ಬೇರೆಯವರು ಎಂದು ಯೋಚಿಸುವುದಿಲ್ಲ. ಎಲ್ಲರಿಗೂ ಒಂದೇ ಸಮನಾಗಿ ಸಹಾಯ ನೀಡುತ್ತಾರೆ. ಅವರು ಸೇರಿದ ಕಡೆ ಯಾವಾ ಗಲೂ ಜನಸಂದಣಿ ಜಾಸ್ತಿ. ಯಾವ ಸ್ವಯಂಸೇವಕ ಅಥವಾ ಪೋಲೀಸು ಏರ್ಪಾಟೂ ಆ ಜನದ ನೂಕುನುಗ್ಗಲಿಗೆ ಸಾಕಾಗುವುದಿಲ್ಲ. ಇಂತಹ ಗಲಾಟೆಗಳಲ್ಲಿ ಅನೇಕರು ನಜ್ಜುಗುಜ್ಜಾಗಿ ಕೆಲವರು ಪ್ರಾಣಕಳೆದುಕೊಂಡಿ ರುವ ಸಂದರ್ಭಗಳೂ ಉಂಟು. ೧೯೪೮ನೆಯ ವರ್ಷ. ಒಂದು ರೈಲ್ವೆ ಸ್ಟೇಷನ್ನು. ಅಸಾಧ್ಯ ಜನರು ಸೇರಿದ್ದಾರೆ. ಆ ನೂಕುನುಗ್ಗಲಿನ ಮಧ್ಯೆ ನೆಹರೂರವರನ್ನು ನೋಡಬೇಕೆಂಬ ಹಂಬಲದಿಂದ ಬಹುದೂರ ನಡೆದು ಬಂದಿದ್ದವನೊಬ್ಬ ಸಿಕ್ಕಿಕೊಂಡು ಜ್ಞಾನತಪ್ಪಿ ಬಿದ್ದುಬಿಟ್ಟ. ಗಲಾಟೆ ಯಾಯಿತು. ಕೂಡಲೇ ನೆಹರೂರವರು ಗಾಡಿಯಿಂದ ಇಳಿದು ಗುಂಪಿನಲ್ಲಿ ನುಗ್ಗಿ ಜ್ಞಾನತಪ್ಪಿ ಬಿದ್ದಿದ್ದಾತನನ್ನು ತಾವೇ ಎತ್ತಿಕೊಂಡುಬಂದು ಗಾಳಿ ಹಾಕಿ ಶೈತ್ಯೋಪಚಾರ ನಡೆಸಿದರು. ಜ್ಞಾನ ಬಂದಬಳಿಕ ಆತ ಕಣ್ಣು ಬಿಟ್ಟು ನೋಡಿದ. ಯಾರ ಸಂದರ್ಶನಕ್ಕಾಗಿ ಅವನು ಅಷ್ಟುದೂರ ಬಂದಿದ್ದನೋ ಅವರೇ ಸ್ವಯಂ ತನ್ನನ್ನೆತ್ತಿಕೊಂಡಿದ್ದರು. ಸಂತೋಷವೂ, ದುಃಖವೂ, ಸಂಕೋಚವೂ ಎಲ್ಲಾ ಒಟ್ಟಿಗೆ ತುಂಬಿಬಂದು ಆತನ ಗಂಟಲ ನರ ಉಬ್ಬಿತು. ಮಾತನಾಡಿ ತನ್ನ ಕೃತಜ್ಞತೆಯನ್ನು ಸೂಚಿಸುವುದಕ್ಕೂ ಆತನಿಗೆ ಆಗದೆಹೋಯಿತು. ನೆಹರೂರವರು ಅರ್ಥಮಾಡಿಕೊಂಡರು. ಅವನ ಬೆನ್ನು ತಟ್ಟುತ್ತಾ, ಸ್ಟೇಷನ್‌ಮಾಸ್ಟರಿಗೆ, ಆತನಿಗೆ ಉಪಚಾರಮಾಡು ವಂತೆ ಸೂಚನೆ ಕೊಟ್ಟು ರೈಲನ್ನು ಹತ್ತಿದರು. ರೈಲು ಮುಂದುವರೆಯಿತು. ಮುಂದಿನ ವರ್ಷವೂ ಇಂತಹುದೊಂದು ಸಂಗತಿ ನಡೆಯಿತು. ಇನ್ನೊಂದು ರೈಲ್ವೆ ಸ್ಟೇಷನ್ನಿನಲ್ಲಿ ಹೊರಗೆ ಹೋಗಬೇಕಾಗಿದ್ದ ಒಬ್ಬ ಅಮೆರಿಕನ್

ಮಹಿಳೆ ಮತ್ತು ಅವಳ ಪುಟ್ಟ ಮಗಳು ಅಂತಹ ಜನಸಂದಣಿಯಲ್ಲಿ ಸಿಕ್ಕಿಕೊಂಡು ದಾರಿಗಾಣದೆ ಇದ್ದರು. ಅದು ನೆಹರೂರವರ ಕಣ್ಣಿಗೆ ಬಿತ್ತು. ತಕ್ಷಣವೇ ಅವರು ಗಾಡಿಯಿಂದಿಳಿದು ಆಕೆಯನ್ನು ಹೊರಕ್ಕೆ ಮುಟ್ಟಿಸಿ ವಾಪಸು ಬಂದು ಗಾಡಿಯಲ್ಲಿ ಕುಳಿತರು. ಇಂತಹ ಹಲವಾರು ಪ್ರಸಂಗ ಗಳು ನೆಹರೂರವರ ಜೀವನದಲ್ಲಿ ಅದೂ ಪ್ರಧಾನ ಮಂತ್ರಿಯಾದ ಮೇಲೆ— ಜರುಗಿವೆ. ಈಚೆಗೆ ನಡೆದ ಬಾಂಡುಂಗ್ ಸಮ್ಮೇಳನದಲ್ಲಿ ಚೀನೀ ಪ್ರಧಾನಿ ಯಾದ ಚೂ-ಎನ್-ಲೈರವರು ಸಮ್ಮೇಳನ ಮಂದಿರದಲ್ಲಿ ತಮ್ಮ ಪೀಠಗಳು ಎಲ್ಲಿರುವುದೆಂದು ಗೊತ್ತಾಗದೆ ತಾರಾಡುತ್ತಿದ್ದಾಗ, ನೆಹರೂರವರು ಅವರನ್ನು ಕೈಹಿಡಿದು ಕರೆದುಕೊಂಡುಹೋಗಿ ಅವರಿಗೆ ಗೊತ್ತಾಗಿದ್ದ ಸ್ಥಾನದಲ್ಲಿ ಕೂಡಿಸಬೇಕಾಯಿತು.

ಸರ್ವಾಧಿಕಾರಿಗಳೆಂದರೆ ನೆಹರೂರವರಿಗೆ ಸಹಿಸದು. ಅವರನ್ನು ಎಂದೂ ಅವರು ನೋಡಬಯಸಿದುದಿಲ್ಲ. ಅಷ್ಟು ಮಾತ್ರವಲ್ಲ, ಅಂತಹ ವರು ಅವರನ್ನು ನೋಡಬೇಕೆಂದು ಆಸೆಪಟ್ಟಿದ್ದರೂ ಅವರು ಅದಕ್ಕೆ ಒಪ್ಪು ವವರಲ್ಲ. ಹಿಂದೆ ಅಂತಹುದೊಂದು ಪ್ರಸಂಗ ನಡೆಯಿತು. ಜವಾಹಿರರು ಕಮಲಾದೇವಿಯನ್ನು ಕಳೆದುಕೊಂಡು ಯೂರೋಪಿನಿಂದ ಭಾರತಕ್ಕೆ ಹಿಂದಿರುಗಿಬರುತ್ತಿದ್ದಾಗ ವಿಮಾನ ಇಟಲಿಯ ಮೇಲೆ ಹಾದು ಬರಬೇ ಕಾಗಿತ್ತು. ಆಗ ಇಟಲಿಯಲ್ಲಿ ಮುಸ್ಸೋಲಿನಿ ಸರ್ವಾಧಿಕಾರಿಯಾಗಿದ್ದನು. ಅಬಿಸೀನಿಯಾ ರಾಜ್ಯವನ್ನು ಕಬಳಿಸಿ ಇಟಲಿಯ ಸಾಮ್ರಾಜ್ಯವನ್ನು ಕಟ್ಟು ತ್ತಿದ್ದನು. ಆತನಿಗೆ ಜವಾಹಿರರನ್ನು ಕಂಡು ಮಾತನಾಡಿಸುವ ಇಷ್ಟವಿತ್ತು. ಹಾಗೆಯೇ ಆತ ನೆಹರೂರವರಿಗೆ ಹೇಳಿಕಳುಹಿಸಿದ. ಆದರೆ ಸಾಮ್ರಾಜ್ಯ ವಾದಿಗಳಿಗೂ ಸರ್ವಾಧಿಕಾರಿಗಳಿಗೂ ವಿರೋಧಿಗಳಾದ್ದರಿಂದ ಜವಾಹಿರರು ಆ ಭೇಟಿಗೆ ಒಪ್ಪಲಿಲ್ಲ. ಬಿಡುವಿಲ್ಲವೆಂದು ಹೇಳಿಕಳಿಸಿದ್ದರು. ಅವರು ವಾಪಸು ಬರುವಾಗ ಅವರ ವಿಮಾನ ಅಕಸ್ಮಾತ್ತಾಗಿ ಒಂದು ರಾತ್ರಿ ರೋಮಿನ ವಿಮಾನ ನಿಲ್ದಾಣದಲ್ಲಿ ನಿಲ್ಲಬೇಕಾಗಿ ಬಂತು. ಆಗ ಪುನಃ ದೊಡ್ಡ ಅಧಿಕಾರಿಯೊಬ್ಬನು 'ಎಲ್ಲವೂ ಸಿದ್ಧವಾಗಿದೆ, ತಾವು ಬಂದು ಮುಸ್ಸೋಲಿನಿಯವರನ್ನು ಕಾಣಬೇಕು' ಎಂದು ಪ್ರಾರ್ಥಿಸಿದನು. ಆದರೆ ನೆಹರೂರವರು, 'ನಾನು ಮೊದಲೇ ಬರಲಾಗುವುದಿಲ್ಲವೆಂದು ಹೇಳಿದೆ

ಸಲ್ಲಾ, ಮತ್ತೆ ಏತಕ್ಕೆ ಕರೆಯುತ್ತೀರಿ'—ಎಂದು ಹೇಳಿದರು. ಆ ಅಧಿಕಾರಿ ಒಂದು ಘಂಟೆಯ ಕಾಲ ಬರಬೇಕೆಂದು ವಾದಿಸಿ ಒತ್ತಾಯಪಡಿಸಿದರೂ ನೆಹರೂರವರು ಒಪ್ಪಲಿಲ್ಲ. ಅವರು ಮನಸ್ಸುಮಾಡಿದರೆ ತೀರಿತು. ಏಕಾಏಕಿ ಮನಸ್ಸನ್ನು ಬದಲಾಯಿಸುವವರಲ್ಲ.

ಒಮ್ಮೆ ಕಲ್ಕತ್ತೆಯಲ್ಲಿ ಕಾಂಗ್ರೆಸ್ ಕಮಿಟಿ ಸೇರಿತ್ತು. ಜವಾಹಿರ ಲಾಲರೇ ಅಧ್ಯಕ್ಷರಾಗಿದ್ದರು. ವಿಶ್ವಪ್ರಯತ್ನಮಾಡಿದರೂ ವರದಿಗಳು, ತೀರ್ಮಾನಗಳು ಇತ್ಯಾದಿ ಚರ್ಚಿತವಾಗಬೇಕಾದ ವಿಷಯಗಳು ಕಾಲಕ್ಕೆ ಸರಿಯಾಗಿ ಅಚ್ಚಾಗಿ ಬರಲಿಲ್ಲ. ನೆಹರೂರವರಿಗೆ ಕೋಪವೇನೋ ಬಂತು. ಆದರೆ ಅವರು ಅದನ್ನು ಹಾಸ್ಯದಲ್ಲಿ ತೇಲಿಸಿಬಿಟ್ಟರು. ಸಭೆಯ ವೇಳೆ ಬರುತ್ತಲೇ, ವೇದಿಕೆಯ ಮೇಲೆ ನಿಂತು "ಸದಸ್ಯರಲ್ಲಿ ವಿಜ್ಞಾಪನೆ. ಈ ಅಧಿವೇಶನದಲ್ಲಿ ಕೆಲವು ವರದಿಗಳನ್ನೊಪ್ಪಿಸಿ ನಿಮ್ಮ ಅನುಮೋದನೆ ಯನ್ನು ಪಡೆಯಬೇಕಾಗಿತ್ತು. ಮುದ್ರಣಕ್ಕೆಂದು ಹೊರಟ ವರದಿಗಳು ಮುದ್ರಿತವಾಗದೆ ಇವೆ. ಇದಕ್ಕಾಗಿ ತಾವೆಲ್ಲರೂ ಕ್ಷಮಿಸಬೇಕು. ಬೇರೆ ಕೆಲವು ವಿಷಯಗಳನ್ನು ಚರ್ಚಿಸುವ ಕೆಲಸವೂ ಇತ್ತು. ಅವುಗಳನ್ನೂ ಮುದ್ರಣಕ್ಕೆ ಕೊಟ್ಟಿತ್ತು. ಅವಾದರೂ ಕೈಗೆ ಬಂದಿದ್ದರೆ ಅಷ್ಟನ್ನಾದರೂ ಎತ್ತಿಕೊಳ್ಳಬಹುದಾಗಿತ್ತು. ಈಗ ನಾನು ಬರಿಗೈಯಲ್ಲಿ ಎದುರಿಗೆ ನಿಂತಿ ದ್ದೇನೆ. ಆದ್ದರಿಂದ ನೀವೇನು ಬೇಕಾದರೂ ನಡೆಸಬಹುದು—ಹಾಡ ಬಹುದು, ನರ್ತಿಸಬಹುದು ಅಥವಾ ಪದ್ಯವನ್ನೊಪ್ಪಿಸಬಹುದು" ಎಂದರು. ಸಭಿಕರಿಗೆ ಅಂತಹ ವಿನೋದದ ಕಲ್ಪನೆಯೇ ಆಗಿರಲಿಲ್ಲ. ಅವರ ನಗು ನಿಲ್ಲಬೇಕಾದರೆ ಎಷ್ಟೋ ಹೊತ್ತು ಕಳೆಯಿತು.

ಜವಾಹಿರಲಾಲರು ಅಹಿಂಸಾಕ್ರಮವನ್ನು ಗ್ರಾಮಾಂತರ ಪ್ರದೇಶ ಗಳ ಜನರಿಗೆ ತಿಳಿಯಹೇಳಿದ ವೃತ್ತಾಂತ ಬಹು ಸ್ವಾರಸ್ಯವಾದುದು. ದೀನ ಬಂಧು ಆಂಡ್ರೂಸರವರು ಜವಾಹಿರಲಾಲರ ಸ್ವಭಾವವನ್ನು ವಿವರಿಸು ವಾಗಲೆಲ್ಲಾ ಈ ಸಂಗತಿಯನ್ನು ಜ್ಞಾಪಿಸಿಕೊಳ್ಳುತ್ತಿದ್ದರು. "ಒಂದು ಸಲ ಗ್ರಾಮಾಂತರ ಪ್ರದೇಶದ ಹಳ್ಳಿಯ ಜನರಿಗೆ ಜವಾಹಿರಲಾಲರು ಅಹಿಂಸಾ ಕ್ರಮವನ್ನು ವಿವರಿಸುತ್ತಿದ್ದರು. ಆ ಮುಗ್ಧ ಜನರಿಗೆ ಅದು ತಿಳಿಯಿತೋ ಇಲ್ಲವೋ ಎನ್ನುವ ಸಂದೇಹವಿತ್ತು. ಆಗ ಅವರಲ್ಲಿ ಮುಖಂಡರಾದವರನ್ನು

ಮಾತನಾಡಿಸುತ್ತಾ ಜವಾಹಿರಲಾಲರು 'ನಿಮ್ಮೆದುರಿನಲ್ಲಿರುವಾಗಲೇ ನನ್ನನ್ನು ಪೋಲೀಸು ಅಧಿಕಾರಿಗಳು ಹಿಡಿದು ಕೈತೋಳಗಳನ್ನು ತೊಡಿಸಿದರೆ ನೀವೇನು ಮಾಡುವಿರಿ?' ಎಂದರು. ಅವರೆಲ್ಲರೂ ಒಟ್ಟಾಗಿ 'ತಕ್ಷಣವೇ ಮುಂದೆ ನುಗ್ಗಿ ನಿಮ್ಮನ್ನು ಬಿಡಿಸಿಕೊಳ್ಳುತ್ತೇವೆ' ಎಂದುತ್ತರಕೊಟ್ಟರು. 'ಛೆ, ಛೆ! ಏನು ಸಂಭವಿಸಿದರೂ ನೀವು ಅದನ್ನು ಮಾಡಬಾರದು. ನೀವೆಲ್ಲರೂ ಸಮಾಧಾನದಿಂದ ನೋಡುತ್ತಿರಬೇಕು. ಒಂದು ಹೆಜ್ಜೆಯನ್ನಾದರೂ ಮುಂದಕ್ಕಿಡಬಾರದು'—ಎಂದಾಗ ಆ ಗ್ರಾಮಸ್ಥರು ದಿಗ್ಭ್ರಾಂತರಾದರು. ಜವಾಹಿರಲಾಲರು ಅತಿ ಸಹನವನ್ನು ತಾಳಿಕೊಂಡು ಅಹಿಂಸಾಧರ್ಮವನ್ನು ಉಪದೇಶಿಸುತ್ತ, ತಮ್ಮನ್ನು ಲಾಠಿಗಳಿಂದ ಹೊಡೆದ ಸಂದರ್ಭವಾದರೂ ಕೂಡ ಪ್ರತಿಯಾಗಿ ಯಾವ ತೆರನಾದ ಹಿಂಸೆಯನ್ನೂ ಎಸೆಗಬಾರದೆಂದರು. ಆಗ ಅವರು 'ನಿಮ್ಮನ್ನು ಲಾಠಿಯಿಂದ ಹೊಡೆದಾಗಲೇ? ನಾವು ಹೇಗೆ ಸಹಿಸಿಕೊಂಡಿರುವುದು. ಆಗುವುದಿಲ್ಲ'—ಎಂದರು. ಆಗ ಖಂಡಿತವಾದ ಸ್ವರದಿಂದ ಜವಾಹಿರಲಾಲರು 'ಆಗುವುದಿಲ್ಲವೇ? ಆಗಲೇಬೇಕು. ನಿಮ್ಮ ಕೋಪವನ್ನೂ ಹಿಂಸೆಯನ್ನೂ ಸೈರಿಸಿಕೊಳ್ಳಲೇಬೇಕು'—ಎನ್ನುತ್ತಾ ಪುನಃ ಅಹಿಂಸಾ ಕರ್ತವ್ಯದ ಪಾಠವನ್ನು ಮತ್ತೊಮ್ಮೆ ಮೊದಲಿಟ್ಟು ಹೇಳಿಕೊಟ್ಟರು.'' ಅವರಿಗೆ ಮೂಗಿನ ಮೇಲೆಯೇ ಕೋಪ. ಒಂದು ಸಲ ಹೇಳುವುದೇ ಕಷ್ಟ, ಹೇಳಿದ ಮೇಲೆ ಕೇಳಿದವರು ಅದನ್ನು ಗ್ರಹಿಸದೆಹೋದರೆ ರೇಗಿಬೀಳುತ್ತಿದ್ದರು. ತಂಗಿ ಕೃಷ್ಣೆಗೆ ಪಾಠ ಹೇಳಿಕೊಡುವಾಗಲೂ, ಮಂಜಿನ ಬೆಟ್ಟಗಳ ಮೇಲೆ ಹೇಗೆ ನಡೆಯುವುದೆಂದು ಹೇಳಿಕೊಡುವಾಗಲೂ ಒಂದು ಸಲ ಹೇಳಿದ್ದನ್ನು ಆಕೆ ಗ್ರಹಿಸದಿದ್ದುದರಿಂದ 'ಇನ್ನು ನೀನು ಸಾಯುವವರೆಗೂ ಕಲಿಯುವುದಿಲ್ಲ'—ಎಂದು ರೇಗಿ ಹೇಳಿಕೊಡುವುದನ್ನೇ ಬಿಟ್ಟುಬಿಟ್ಟಿದ್ದರು. ಒಂದು ಸಲ ಪತ್ರಿಕೋದ್ಯೋಗಿಯೊಬ್ಬನು ಹೇಳಿದ ಮಾತನ್ನು ಕೇಳದಿದ್ದುದರಿಂದ ಅವನನ್ನು ಎತ್ತಿಕೊಂಡುಹೋಗಿ ಹೊರಗೆ ಹಾಕಿದ್ದರು. ಇಂತಹ ಸ್ವಭಾವದ ಜವಾಹಿರಲಾಲರು ಅರಿಯದ ಹಾಗೂ ಸುಲಭವಾಗಿ ಹೇಳಿದುದನ್ನು ಗ್ರಹಿಸಲಾರದ ಹಳ್ಳಿಗರಿಗೆ ಅಹಿಂಸೆಯ ಪಾಠ ಹೇಳಿಕೊಡುತ್ತಿದ್ದಾಗ ತಾಳ್ಮೆಯ ಪಾಠವನ್ನೇ ಕಲಿತಿರಬೇಕು.

ಒಂದು ದಿನ ಕಾಂಗ್ರೆಸ್ಸಿನ ಕಾರ್ಯಕಾರೀ ಸಮಿತಿ ಸೇರಿತ್ತು. ಅಲ್ಲಿದ್ದವರೆಲ್ಲಾ ಗಾಂಧಿಯವರು ಹೇಳಿದ್ದೇ ವೇದವಾಕ್ಯವೆಂದು ನಂಬಿರುವವರು. ರಾಜೇಂದ್ರಪ್ರಸಾದರೂ ಪುರುಷೋತ್ತಮದಾಸ್ ತಾಂಡನ್, ವಲ್ಲಭಾಯಿ ಪಟೇಲ್— ಇಂತಹ ಘಟಾನುಘಟಿಗಳಿದ್ದರು ಆ ಸಭೆಯಲ್ಲಿ. ಗಾಂಧಿಯವರು ಹೇಳಿದ್ದ ವಿಷಯವಾದ್ದರಿಂದ ಅಂದು ಚರ್ಚೆಗಿಟ್ಟ ವಿಷಯದಲ್ಲಿ ಅವರಾರೊಬ್ಬರೂ ಎದುರುಮಾತಾಡಲಿಲ್ಲ. ನೆಹರೂರವರು ಅವರ ಕೆಲವು ಭಾಗಗಳನ್ನು ಒಪ್ಪಿರಲಿಲ್ಲ. ಆದರೆ ಎಲ್ಲರೂ ಮೌನವಾಗಿ ಒಪ್ಪಿಗೆ ಕೊಟ್ಟಮೇಲೆ ಇವರು ಆಕ್ಷೇಪಣೆಮಾಡಿ ಏನು ಪ್ರಯೋಜನ? ಅವರಿಗೆ ರೇಗಿಹೋಯಿತು. ‘ನೀವೆಲ್ಲರೂ ಗಾಂಧೀಜಿಯ ರಬ್ಬರ್ ಸ್ಟಾಂಪುಗಳು’— ಎಂದು ಎಲ್ಲರನ್ನೂ ತಾಡಿಸಿಬಿಟ್ಟರು. ಗಾಂಧೀಜಿಯವರ ಮಾತನ್ನು ನೆಹರೂರವರಿಗಿಂತ ಚಾಚೂ ತಪ್ಪದೆ ಪಾಲಿಸಿದವರು ಬೇರೆ ಇರಲಾರರು. ಆದರೂ ಅವರು ‘ಇದು ಗಾಂಧೀ ಹೇಳಿದ ಮಾತು’ ಎಂದ ಮಾತ್ರಕ್ಕೇ ಅದನ್ನು ಒಪ್ಪುತ್ತಿರಲಿಲ್ಲ. ಅದನ್ನು ವಿಮರ್ಶೆಮಾಡಿ, ಅನುಮಾನ ಬಂದುದನ್ನು ಗಾಂಧಿಯವರಿಗೆ ತಿಳಿಸಿ, ಅದಕ್ಕೆ ಅವರಿಂದ ವಿವರಣೆ ಪಡೆದುಕೊಂಡು ಅದನ್ನು ಪಾಲಿಸುತ್ತಿದ್ದರು. ಇನ್ನೊಂದು ಸಲ ಕಾರ್ಯಕಾರೀ ಸಭೆ ಅನಾವಶ್ಯಕವಾಗಿ ದೀರ್ಘಕಾಲ ನಡೆದಿತ್ತು. ನೆಹರೂರವರಿಗೆ ಬೇಜಾರು ಬಂದಿತ್ತು. ಸಭೆ ಮುಗಿದ ವೇಳೆಯಲ್ಲಿ “ನೀವೆಲ್ಲರೂ ಇಲ್ಲಿಗೆ ಬಂದು ಬಹಳ ಹೊತ್ತಾಯಿತು. ಇನ್ನು ಆಚೆಗೆ ಹೊರಡಿ”—ಎಂದರು. ಈ ಎರಡು ಸಂದರ್ಭಗಳಲ್ಲಿಯೂ ನೆಹರೂರವರು ಒರಟಾಗಿ ವರ್ತಿಸಿದರೆಂದು ಯಾರಿಗಾದರೂ ತೋರಬಹುದು. ಆದರೆ ನೆಹರೂರವರು ಕಾಂಗ್ರೆಸ್ ಮುಖಂಡರನ್ನು ಚೆನ್ನಾಗಿ ಬಲ್ಲರು. ಅವರಲ್ಲಿ ಅವರಿಗೆ ಗೌರವವಿತ್ತು. ಇದು ಆ ಮುಖಂಡರಿಗೂ ಗೊತ್ತಿತ್ತು. ಅಲ್ಲದೆ ಆ ಮುಖಂಡರಿಗೆ ನೆಹರೂರವರ ಹಿರಿಮೆ ಮಾತ್ರ ಅರಿವಾಗಿದ್ದಿಲ್ಲ, ಅವರ ಸ್ವಭಾವದ ನ್ಯೂನತೆಗಳೂ ತಿಳಿದಿದ್ದುವು. ಒಬ್ಬರಿಗೊಬ್ಬರು ಸರಿಸಿಕೊಳ್ಳುತ್ತಿದ್ದರು.

ಈ ಒಂದೊಂದು ಪ್ರಕರಣಗಳೂ ನೆಹರೂರವರ ಸ್ವಭಾವ, ನ್ಯೂನತೆಗಳನ್ನು ತೋರಿಕೊಡುತ್ತವೆ. ನೆಹರೂರವರ ನಿಜವಾದ ಮಾನವತೆಯನ್ನು ನಾವಿಲ್ಲಿ ಕಾಣುತ್ತೇವೆ.

# ೫. ಗಾಂಧೀಜಿ ಮತ್ತು ನೆಹರು

ಚಕ್ರವರ್ತಿ ರಾಜಗೋಪಾಲಾಚಾರ್ಯರವರು ಗಾಂಧೀಜಿ ಮತ್ತು ನೆಹರೂರವರನ್ನು ರಾಮಾಯಣದ ರಾಮ ಲಕ್ಷ್ಮಣರಿಗೆ ಹೋಲಿಸಿದ್ದಾರೆ. ನೆಹರೂರವರ ಸಂಸಾರಚಿತ್ರವನ್ನು ವಿವೇಚಿಸುವಾಗ ರಾಮಾಯಣದ ರಾಮಚಂದ್ರನ ಸಾಮ್ಯ ಹೇಗೆ ನೆಹರೂರವರಿಗೆ ಹೊಂದುವುದೆಂದೂ, ಕಮಲಾ ನೆಹರೂರವರು ಹೇಗೆ ಸೀತೆಯನ್ನು ಹೋಲುವರೆಂದೂ ನೋಡಿದ್ದಾಗಿದೆ. ಆದರೆ ರಾಮಾಯಣಕ್ಕಿಂತ ಭಾರತದ ಕತೆ ದೊಡ್ಡದು. ಹಾಗೇ ಗಾಂಧೀಜಿ ಮತ್ತು ನೆಹರೂರವರುಗಳು ದುಡಿದ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕತೆಯೂ ದೊಡ್ಡದು; ಅದರ ರಾಜಕೀಯ ವಿಶಾಲವಾದುದು, ಪಾತ್ರಗಳು ಸಾವಿರಾರು ಮಂದಿ. ಕೃಷ್ಣ ಹೇಗೆ ಭಾರತದ ಸೂತ್ರಧಾರನೋ ಗಾಂಧೀಜಿಯವರೂ ಹಾಗೇ ಭಾರತದ ಸ್ವಾತಂತ್ರ್ಯಸಂಗ್ರಾಮದ ಸೂತ್ರಧಾರರು. ಕೃಷ್ಣ ಸೂತ್ರಧಾರನಾದರೂ ಯುದ್ಧ ಮಾಡಲಿಲ್ಲ. ಈ ಈ ರೀತಿ ಮಾಡಬೇಕೆಂದು ಸಲಹೆ ಸೂಚನೆಗಳನ್ನು ಕೊಟ್ಟನು; ಇತರರನ್ನು ಕಾರ್ಯಕ್ಕೆ ಪ್ರೇರೇಪಿಸಿದನು. ಹಾಗೆ ನಿಷ್ಠೆಯಿಂದಲೂ ಗುರುಭಕ್ತಿಯಿಂದಲೂ ಕಾರ್ಯಮಾಡಿದವನು, ಯುದ್ಧಕ್ಕೆ ಗಾಂಡೀವ ಬತ್ತಳಿಕೆಗಳನ್ನು ಹಿಡಿದು ನಿಂತಿದ್ದ ಅರ್ಜುನ. ಹಾಗೆಂದು ಅರ್ಜುನ, ಕೃಷ್ಣ ಹೇಳಿದುದನ್ನು ಎದುರುಮಾತನಾಡದೆ ಅನುಮಾನಗಳನ್ನು ಪರಿಹಾರಮಾಡಿಕೊಳ್ಳದೆ ಕಣ್ಣು ಕಿವಿ ಮುಚ್ಚಿಕೊಂಡು ಕೆಲಸ ಮಾಡಲಿಲ್ಲ. ಕೃಷ್ಣಾರ್ಜುನರಿಗೆ ಅಭಿಪ್ರಾಯ ಭೇದವಿತ್ತು. ಅದನ್ನು ಕೃಷ್ಣನಿಗೆ ಹೇಳಲು ಅರ್ಜುನ ಸಂಕೋಚಪಡಲಿಲ್ಲ; ಕೃಷ್ಣ ಅದಕ್ಕೆ ಸಮಾಧಾನ ಹೇಳದೆ ಇರಲಿಲ್ಲ. ಹೀಗೆ ಭಾರತದ ಜೀವನಾಡಿಯಾದ ಕೃಷ್ಣನೂ, ಕಾರ್ಯಕರ್ತನಾದ ಅರ್ಜುನನೂ ಕೂಡಿ ಭಾರತದ ಸಂಗ್ರಾಮದಲ್ಲಿ ಗೆಲುವನ್ನು ಸಂಪಾದಿಸಿದರು. ಯಾವ ಕೆಲಸವನ್ನು ಮಾಡುವಂತೆ ಪ್ರೇರೇಪಿಸಿದಾಗಲೂ ಕೃಷ್ಣನ ದೃಷ್ಟಿ ಧರ್ಮಸಂಸ್ಥಾಪನೆಯೇ. ಈ ಧರ್ಮ ಎಂಬ ಪದದ ಅರ್ಥ ಬಹು ಸೂಕ್ಷ್ಮ. ಒಂದು ಕೆಲಸ ಒಂದು ಸನ್ನಿವೇಶದಲ್ಲಿ ಒಬ್ಬ ವ್ಯಕ್ತಿಗೆ ಧರ್ಮವೆನಿಸಿದುದು ಅದೇ ಕೆಲಸ ಇನ್ನೊಂದು ಸನ್ನಿವೇಶದಲ್ಲಿ ಅಥವಾ ಇನ್ನೊಬ್ಬ ವ್ಯಕ್ತಿಗೆ



ಗಾಂಧಿ ಮತ್ತು ನೆಹರು

ಅಧರ್ಮವಾಗಬಹುದು. ಈ ಧರ್ಮಸೂಕ್ಷ್ಮವನ್ನರಿಯುವುದು ಕಷ್ಟ. ಅದಕ್ಕೇ ಆ ಬಗ್ಗೆ ಭಿನ್ನಾಭಿಪ್ರಾಯಗಳು ಹುಟ್ಟಿಕೊಳ್ಳುತ್ತಿರುವುದು. ಕೃಷ್ಣನ ಮಾತಿನಲ್ಲೂ ವಿರೋಧಾಭಾಸಗಳು ತೋರುತ್ತಿದ್ದುವು. ಆದರೆ ಅವು ತೋರಿಕೆಯಲ್ಲಿ ವಿರೋಧಾಭಾಸಗಳೇ ವಿನಾ ಮೂಲತತ್ವಗಳಲ್ಲಲ್ಲ. ಇಂದಿನ ಪ್ರಪಂಚದಲ್ಲಿ ನಾವು ನೋಡುವಂತೆ ರಷ್ಯನರಿಗೆ ಕಮ್ಯೂನಿಸಂ ಧರ್ಮವಾದರೆ ಅಮೆರಿಕನ್ನರಿಗೆ ಕ್ಯಾಪಿಟಲಿಸಂ ಧರ್ಮ. ಭಾರತಕ್ಕೆ ಪಂಚ ಶೀಲವೇ ಧರ್ಮ. ಹೀಗಿರುವಲ್ಲಿ ಸರ್ವಸಮ್ಮತವಾದ ವಿಶ್ವಧರ್ಮ ವೊಂದುಂಟೆ? ಈ ಪ್ರಶ್ನೆ ಪ್ರಶ್ನಾರ್ಥಕವಾಗಿಯೇ ಉಳಿದರೂ ಪಂಚಶೀಲದ ಧರ್ಮ ವಿಶ್ವಧರ್ಮವಾಗಬಲ್ಲುದೆಂದು ಪುರಾತನ ಋಷಿಗಳು ಹೇಳಿದ ಮಾತನ್ನು ಕೃಷ್ಣ ಸಮರ್ಥಿಸಿಕೊಂಡನು. ಆ ಮುಂದೆ ಭಗವಾನ್ ಬುದ್ಧನೂ, ಅಶೋಕ ಚಕ್ರವರ್ತಿಯೂ ಪಂಚಶೀಲವನ್ನೇ ಧಾರ್ಮಿಕ ಹಾಗೂ ರಾಜಕೀಯ ವ್ಯವಹಾರಕ್ಕೆ ಆಧಾರವೆಂದು ಸಾರಿದರು. ಇಂದು ಅದು ಮಹತ್ವದ ಸ್ಥಾನ ಪಡೆಯುತ್ತಿದೆ. ಈ ಎಲ್ಲ ದೃಷ್ಟಿಯಿಂದ ನೋಡಿದರೆ ಗಾಂಧೀಜಿ ನೆಹರೂರವರನ್ನು ಕೃಷ್ಣ ಅರ್ಜುನರಿಗೆ ಹೋಲಿಸುವುದೂ ಭಾರತದ ಸ್ವಾತಂತ್ರ್ಯ ಸಂಗ್ರಾಮವನ್ನು ಮಹಾಭಾರತ ಯುದ್ಧಕ್ಕೆ ಹೋಲಿಸುವುದೂ ಹೆಚ್ಚು ಸೂಕ್ತವೆನಿಸಬಹುದು.

ಜವಾಹಿರಲಾಲ ನೆಹರೂರವರು ಇಂಗ್ಲೆಂಡಿನಿಂದ ಎಂ.ಎ., ಬಾರ್-ಅಟ್-ಲಾ ಪದವೀಧರರಾಗಿ ಭಾರತಕ್ಕೆ ಬಂದಿಳಿದಾಗ ಅವರೇ ಹೇಳುವಂತೆ 'ಅಹಂಭಾವಿಯಾಗಿಯೂ, ವಿದ್ಯಾಗರ್ವಿಯಾಗಿಯೂ, ಅಷ್ಟೇನೂ ಹೊಗಳಿಸಿಕೊಳ್ಳುವ ಯೋಗ್ಯತೆಯಿಲ್ಲದಿರುವವನಾಗಿಯೂ'— ಇದ್ದರು. ವಕೀಲಿ ವೃತ್ತಿಯನ್ನು ಕೈಗೊಂಡಿದ್ದರೂ ಅವರಿಗೆ ಅದರಲ್ಲಿ ಅಭಿರುಚಿ ಇರಲಿಲ್ಲ. ರಾಜಕೀಯದಲ್ಲಿ ತುಂಬಾ ಉತ್ಸಾಹವಿತ್ತು. ಆದರೆ ಅವರ ರಾಜಕೀಯ 'ತಿರುಗಿಬೀಳುವ ತೀವ್ರ ರಾಷ್ಟ್ರೀಯ ಚಳುವಳಿ'. ಅಂತಹ ಚಟುವಟಿಕೆಗಳಿಗೆ ಆಗ ಆಸ್ಪದವಿರಲಿಲ್ಲ. ಆದರೂ ಹೆದರಿಕೆ ಯಿಂದ ತಲೆ ತಗ್ಗಿ ನಡೆಯಬಾರದು ಮತ್ತು ರಾಷ್ಟ್ರೀಯ ಪ್ರತಿಷ್ಠೆಯ ಸಲುವಾಗಿ ವಿದೇಶೀ ಪ್ರಭುತ್ವವನ್ನು ಮೇಲೆ ಬಿದ್ದು ಎದುರಿಸುವ ಪ್ರವೃತ್ತಿ ಯನ್ನು ಹೆಚ್ಚಿಸಿಕೊಳ್ಳಬೇಕೆಂಬುದು ನೆಹರೂರವರ ಭಾವನೆ. ಇದಕ್ಕಾಗಿ

ಯಾವ ಕಾರ್ಯಕ್ರಮವನ್ನನುಸರಿಸಬೇಕೆಂಬುದು ಯಾರಿಗೂ ತಿಳಿದಿರಲಿಲ್ಲ. ಇಂತಹ ಸ್ಥಿತಿಯಲ್ಲಿದ್ದಾಗ ನೆಹರೂರವರು ಗಾಂಧೀಜಿಯವರನ್ನು ಮೊದಲ ಬಾರಿಗೆ ಕಂಡರು. ಅವರನ್ನು ಕಾಣುವ ಮೊದಲೇ ನೆಹರೂರವರು ಗಾಂಧಿಯವರ ವಿಚಾರವಾಗಿ ಕೇಳಿದ್ದರು. ಗಾಂಧಿಯವರು ದಕ್ಷಿಣ ಆಫ್ರಿಕದಲ್ಲಿ ನಡೆಸಿದ್ದ ಹೋರಾಟ, ಬೀಹಾರಿನ ಚಂಪಾರಣ್ಯದ ಮತ್ತು ಗುಜರಾತಿನ ಖೇಡಾ ಪ್ರದೇಶದ ರೈತರ ಪರವಾಗಿ ಹೂಡಿದ್ದ ಹೋರಾಟಗಳ ಬಗ್ಗೆ ನೆಹರೂರವರಿಗೆ ಮೆಚ್ಚಿಕೆಯಾಗಿತ್ತು. ರೌಲತ್ ಕಾನೂನನ್ನು ಪ್ರತಿಭಟಿಸುವ ಸಲುವಾಗಿ ಗಾಂಧಿಯವರು 'ಸತ್ಯಾಗ್ರಹ ಸಭಾ'ವನ್ನು ಪ್ರಾರಂಭಮಾಡಿ ಸತ್ಯಾಗ್ರಹಕ್ಕಾಗಿ ಸ್ವಯಂಸೇವಕರನ್ನು ಕೂಡಿಸಲು ಪ್ರಯತ್ನಪಟ್ಟಾಗ ನೆಹರೂರವರು ಹೊಸ ಉತ್ಸಾಹದಿಂದ ತಾವೂ ಸ್ವಯಂ ಸೇವಕರಾಗಿ ಸೇರಿಕೊಂಡರು. ಆದರೆ ಆ ಸತ್ಯಾಗ್ರಹ ನಡೆಯಲಿಲ್ಲ. ಸ್ವಲ್ಪ ದಿನಗಳಲ್ಲೇ ಅಲಹಾಬಾದಿನಲ್ಲಿ ಒಂದು ಮುಸ್ಲಿಂ ಅಧಿವೇಶನ ನಡೆಯಿತು. ಅಲ್ಲಿ ಗಾಂಧಿಯವರು ಮಾತನಾಡಿದರು. ಅದನ್ನು ನೆಹರೂರವರೇ ಹೀಗೆ ವರ್ಣಿಸಿದ್ದಾರೆ. "ಗಾಂಧೀಜಿಯವರು ಸರ್ವಾಧಿಕಾರಿಯ ಅಧಿಕಾರ ವಾಣಿಯಲ್ಲಿ ಬಹಳ ಸೊಗಸಾದ ಭಾಷಣ ಮಾಡಿದರು. ಅವರ ಮಾತಿನಲ್ಲಿ ವಿನಯವಿತ್ತು, ಸ್ಪಷ್ಟವಾದ ರೀತಿಯಿತ್ತು. ಆದರೂ ಮಾತು ವಜ್ರದಂತೆ ಮೊನಚಾಗಿಯೂ ಕಠಿಣವಾಗಿಯೂ ಇತ್ತು. ಮಾತು ಹೊರಕ್ಕೆ ಮೃದುವಾಗಿಯೂ ಹಿತಕರವಾಗಿಯೂ ತೋರುತ್ತಿತ್ತು. ಒಳಗೆ ನಿರ್ಧಾರವೂ ತೀಕ್ಷ್ಣವಾದ ಶ್ರದ್ಧೆಯೂ ಇದ್ದುವು. ಮಹಾತ್ಮರ ಕಣ್ಣುಗಳು ಶಾಂತವಾಗಿಯೂ ಆಳವಾಗಿಯೂ ಇದ್ದುವು. ಆದರೂ ಅವುಗಳಿಂದ ಭೀಕರ ಚೈತನ್ಯದ ಮತ್ತು ದೃಢಸಂಕಲ್ಪದ ಉರಿನಾಲಿಗೆಗಳು ಹೊರಹೊಮ್ಮುತ್ತಿದ್ದುವು. ಮಹಾ ಶಕ್ತಿವಂತನಾದ ಎದುರಾಳಿಯೊಡನೆ ಶೀಘ್ರದಲ್ಲಿಯೇ ಮಹಾ ಸಂಗ್ರಾಮವು ನಡೆಯಲಿದೆ, ಎಂದು ಗಾಂಧೀಜಿಯವರು ಹೇಳಿದರು. ಸರ್ವಸ್ವವನ್ನೂ ತ್ಯಜಿಸಲು ಸಿದ್ಧರಾಗಿದ್ದರೆ, ಅಹಿಂಸಾ ಧರ್ಮವನ್ನು ಪಟ್ಟಾಗಿ ಹಿಡಿದು ಶಿಸ್ತಿನಿಂದ ನಡೆಸಲು ಸಿದ್ಧರಾಗಿದ್ದರೆ, ಕಾಳಗವನ್ನು ಹೂಡಿ. ಯುದ್ಧವನ್ನು ಸಾರಿದಾಗ ಸಮರ ಶಾಸನವಾಗುವುದು. ನಮ್ಮ ಅಹಿಂಸಾತ್ಮಕ ಸಂಗ್ರಾಮದಲ್ಲಿ ನಾವು ಗೆಲ್ಲಬೇಕಾದರೆ ಸರ್ವಾಧಿಕಾರವೂ

ಸಮರ ಶಾಸನವೂ ನಮ್ಮ ಕಡೆಯಿಂದಲೂ ಇರಬೇಕಾಗಿದೆ....''

ನೆಹರೂರವರು ಗಾಂಧಿಯವರ ಈ ಉತ್ಸಾಹಕ್ಕೆ, ಭಾವಾವೇಶಪೂರ್ಣವಾದ ಸಂಕಲ್ಪಕ್ಕೆ, ಕಣ್ಣಿನ ಕೆಂಗಿಡಿಗಳಿಗೆ ಮಾರುಹೋದರು. ಗಾಂಧೀಜಿಯವರದು ಮಾತಿನ ಸಮರವಲ್ಲ, ಕಾರ್ಯದ ಸಮರವೆಂದರಿತರು. ಅಂದಿನಿಂದ ಗಾಂಧೀಜಿಯವರೇ ರಾಜಕೀಯದಲ್ಲಿ ನೆಹರೂರವರ ಮಾರ್ಗದರ್ಶಕರಾದರು.

ಗಾಂಧೀಜಿಯವರು ಅಸಹಕಾರ ಚಳುವಳಿಯ ಸ್ವರೂಪವನ್ನು ವಿವರಿಸಿ ಚಳುವಳಿಯನ್ನು ಪ್ರಾರಂಭಿಸಿದಾಗ ನೆಹರೂರವರಿಗೆ ಅದರ ಪರಿಣಾಮದಲ್ಲಿ ಅನುಮಾನ ಬಂತು. ಸುಮ್ಮನೆ ನೂರಾರು ಜನ ಜೈಲಿಗೆ ಹೋಗುವುದರಿಂದ ಮದ್ದು ಗುಂಡುಗಳ ಕೋಟೆಕಟ್ಟಿಕೊಂಡಿರುವ ಬ್ರಿಟಿಷ್ ಸರ್ಕಾರದ ಮೇಲೆ ಯಾವ ಮಹತ್ವದ ಪರಿಣಾಮವೂ ಆಗಲಾರದೆಂಬುದು ನೆಹರೂರವರ ವಾದ. ಆದರೆ ಗಾಂಧೀಜಿಯವರು ಯಾವ ಕಾಲಕ್ಕೆ ಯಾವ ಅಸ್ತ್ರವನ್ನುಪಯೋಗಿಸಬೇಕೆಂಬುದನ್ನು ಬಲ್ಲರು. ನಿಶ್ಶಸ್ತ್ರರಾಗಿದ್ದ ಭಾರತೀಯರಿಗೆ ಅಸಹಕಾರ ಸತ್ಯಾಗ್ರಹಗಳಲ್ಲದೆ ಬೇರೆ ಗತಿಯುಂಟೆ? ಗಾಂಧಿಯವರು ಪ್ರಾರಂಭಮಾಡಿದ ಚಳುವಳಿ ದೆಹಲಿ, ಅಮೃತಸರ ಮೊದಲುಗೊಂಡು ಊರೂರುಗಳಿಗೆ ಹಬ್ಬಿದಾಗ, ಜಲಿಯನ್‌ವಾಲಾಬಾಗಿನ ಕಗ್ಗೊಲೆಯಲ್ಲಿ ಅದು ಪರ್ಯವಸಾನವಾದಾಗ ನೆಹರು ಅದರ ಮಹತ್ವವನ್ನು ಕಂಡರು. ಆಗ ನೆಹರೂರವರ ನಂಬಿಕೆ ಅದರಲ್ಲಿ ಬೆಳೆಯಿತು. ಆಗ ಅವರು ಹೀಗೆ ಹೇಳಿದರು: ''ನಮ್ಮ ಅಸಹಕಾರ ಚಳುವಳಿ ಮತ್ತು ಸತ್ಯಾಗ್ರಹಗಳ ನೈತಿಕ ಮತ್ತು ಧಾರ್ಮಿಕ ಮುಖವನ್ನು ನಾನು ಮೆಚ್ಚಿದೆ. ಅಹಿಂಸಾ ತತ್ತ್ವಕ್ಕೆ ನಾನು ಪರಮನಿಷ್ಠೆಯನ್ನು ನೀಡಲಿಲ್ಲ; ಅದನ್ನೇ ಎಂದೆಂದಿಗೂ ಒಪ್ಪಲಿಲ್ಲ. ಆದರೆ ಅದು ನನ್ನನ್ನು ಹೆಚ್ಚು ಹೆಚ್ಚಾಗಿ ಆಕರ್ಷಿಸಿತು. ಭಾರತದಲ್ಲಿ ನಮ್ಮ ಪರಿಸ್ಥಿತಿ, ನಮ್ಮ ಹಿನ್ನೆಲೆ ಮತ್ತು ಸಂಪ್ರದಾಯಗಳು ಇವುಗಳ ಸಮಾಲೋಚನೆಯಿಂದ ಅಹಿಂಸೆಯೇ ಸರಿಯಾದ ನೀತಿಯೆಂಬ ನಂಬಿಕೆಯು ನನ್ನಲ್ಲಿ ಬಲಿಯಿತು. ಮತೀಯಸಂಕುಚಿತಾರ್ಥವಿಲ್ಲದಂತೆ ರಾಜನೀತಿಯನ್ನು ಆಧ್ಯಾತ್ಮಿಕವಾಗಿ ತಿದ್ದುವುದು ಒಳ್ಳೆಯ ಎಣಿಕೆಯೆಂದು ಬಗೆದೆ. ಯೋಗ್ಯವಾದ ಗುರಿಯನ್ನು ಮುಟ್ಟಲು ಯೋಗ್ಯವಾದ ಸಾಧನವೇ ಇರಬೇಕು.

ಇದು ಒಳ್ಳೆಯ ನೀತಿಸೂತ್ರವೆಂದು ತೋರಿತಲ್ಲದೆ ದೃಢವಾದ ಮತ್ತು ಕ್ರಿಯಾತ್ಮಕವಾದ ರಾಜನೀತಿಯೂ ಹೌದೆಂದು ತೋರಿತು. ಏಕೆಂದರೆ ಸಾಧನ ಸರಿಯಿಲ್ಲದಿದ್ದರೆ ಗುರಿ ಸಿಕ್ಕದೆ ಸೋಲಾಗುವುದು; ಸಾಲದ್ದಕ್ಕೆ ಹೊಸ ಸಮಸ್ಯೆಗಳನ್ನೂ ಕಷ್ಟಗಳನ್ನೂ ಹುಟ್ಟಿಸುವುದು. ಹೀಗಿರುವಾಗ ಇಂಥ ಸಾಧನವನ್ನು ಅನುಸರಿಸುವುದು, ಕೆಸರಿನಲ್ಲಿ ಕಾಲಿಡುವುದು, ವ್ಯಕ್ತಿ ಅಥವಾ ರಾಷ್ಟ್ರದ ಆತ್ಮಗೌರವಕ್ಕೆ ಹೊಂದದೆಂದೂ ಕುಂದೆಂದೂ ಭಾಸವಾಯಿತು. ಇಂಥ ಸಾಧನವನ್ನಾಶ್ರಯಿಸಿದವನಿಗೆ ಕೆಸರಂಟದಿರುವುದೆ? ನಾವು ಬಗ್ಗಿ ತೆವಳಿದರೆ ನಿಮಿರಿನಿಂತು ವೇಗವಾಗಿ ಗಂಭೀರವಾಗಿ ಮುನ್ನಡೆದೇವೇ?'' 'ತಿರುಗಿಬೀಳುವ ತೀವ್ರ ರಾಷ್ಟ್ರೀಯ ಚಳುವಳಿಯ' ರಾಜಕೀಯ ಧೋರಣೆಯನ್ನು ಪ್ರತಿಪಾದಿಸುತ್ತಿದ್ದ ನೆಹರೂರವರ ಮನಸ್ಸನ್ನು ಈ ರೀತಿ ಸತ್ಯ ಅಹಿಂಸೆಗಳ ಮಾರ್ಗಕ್ಕೆ ತಿರುಗಿಸಿದ ಕೀರ್ತಿ ಗಾಂಧಿಯವರದು. ಗಾಂಧೀಜಿಯವರು ನೆಹರೂರವರ ಮನಸ್ಸಿನಲ್ಲಿ ಈ ಭಾವನೆಗಳನ್ನು ಮೂಡಿಸಿದುದು ಒಂದು ಮಹತ್ವದ ಸಾಧನೆ. ಏಕೆಂದರೆ ಈ ಸತ್ಯ ಅಹಿಂಸಾತತ್ತ್ವಗಳನ್ನೊಳಗೊಂಡ ಅಸಹಕಾರ ಸತ್ಯಾಗ್ರಹ ಚಳುವಳಿಗಳೇ ಮೊದಲಿನಿಂದ ಕೊನೆಯವರೆಗೂ ನೆಹರೂರವರು ಭಾರತದ ಸ್ವಾತಂತ್ರ್ಯ ಸಮರದಲ್ಲಿ ಬಳಸಿದ ನೀತಿ. ಈ ನೀತಿಯೇ ದೇಶಕ್ಕೆ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟುದು. ಅದಕ್ಕಾಗಿಯೇ ಇದರ ಮಹತ್ವ.

ಬರಬರುತ್ತ ಗಾಂಧೀಜಿಯವರು ನೆಹರೂರವರ ಮನಸ್ಸನ್ನು ಸೆರೆಹಿಡಿದರು. ನೆಹರೂರವರನ್ನು ಮಾತ್ರವಲ್ಲ, ಪ್ರಪಂಚದ ಮನಸ್ಸನ್ನೇ ಬೇಕಾದರೂ ಸೆರೆಹಿಡಿಯಬಲ್ಲ ವ್ಯಕ್ತಿ ಗಾಂಧೀಜಿ. ಕೃಷ್ಣನಿಗೆ ಅವನ ಧರ್ಮಸಂಸ್ಥಾಪನೆಯ ಕಾರ್ಯದಲ್ಲಿ ನೆರವಾಗಲು ಅರ್ಜುನನಂತಹ ಶೂರನೂ, ಮೇಧಾವಿಯೂ, ಇಂಗಿತಜ್ಞನೂ, ಪ್ರತಿಭಾನ್ವಿತನೂ, ಜನಾನುರಾಗಿಯೂ ಆದ ಮಹಾವ್ಯಕ್ತಿಯೊಬ್ಬನು ಹೇಗೆ ಬೇಕಾಗಿತ್ತೋ ಹಾಗೇ ಗಾಂಧಿಯವರಿಗೂ ಭಾರತದ ಸ್ವಾತಂತ್ರ್ಯಸಂಗ್ರಾಮದಲ್ಲಿ ಮುಂದಾಳಾಗಿ ಹೋರಾಡಲು ಅಂತಹ ಒಬ್ಬ ವ್ಯಕ್ತಿ ಬೇಕಾಗಿತ್ತು. ಗಾಂಧಿಯವರು ಹಿಂದೆ ನಿಂತು ಕಾಂಗ್ರೆಸ್ಸಿನ ಸೂತ್ರಗಳನ್ನು ಹಿಡಿದು ನಡೆಸುತ್ತಿದ್ದರೇ ವಿನಾ ತಾವು ಕಾಂಗ್ರೆಸ್ಸಿನ ಸದಸ್ಯರಾಗಿ ಕೂಡ ಇರಲು ಇಷ್ಟಪಡಲಿಲ್ಲ. ಗಾಂಧಿಯವರ

ಕೆಲಸಮಾಡಲು ನೆಹರು ಮುಂದಾಳಾಗಿ ನಿಂತರು. ಗಾಂಧಿಯವರು ಕರನಿರಾಕರಣೆಯನ್ನು ಸೂಚಿಸಿದರು. ನೆಹರೂರವರು ಊರು ಊರು ಹಳ್ಳಿ ಹಳ್ಳಿಗಳಿಗೆ ಹೋಗಿ ಆ ಚಳುವಳಿಯನ್ನು ಬೋಧಿಸಿ ಪ್ರಚಾರಕ್ಕೆ ತಂದು, ತಾವೂ ಬಂಧಿತರಾದರು. ಗಾಂಧಿಯವರು ಉಪ್ಪಿನ ಸತ್ಯಾಗ್ರಹವನ್ನು ಹೂಡಿದರು. ನೆಹರೂರವರು ಮಾತ್ರವಲ್ಲ, ಅವರ ಸಂಸಾರಕ್ಕೆ ಸಂಸಾರವೇ ಆ ಸತ್ಯಾಗ್ರಹದಲ್ಲಿ ಭಾಗವಹಿಸಿ ಬಂಧಿತರಾದರು. ಸೈಮನ್ ಕಮಿಷನ್ ಪ್ರತಿಭಟನೆ, ಪ್ರಿನ್ಸ್-ಆಫ್-ವೇಲ್ಸರ ಆಗಮನದ ಪ್ರತಿಭಟನೆ, ಪರದೇಶೀ ವಸ್ತ್ರ ಬಹಿಷ್ಕಾರ, ನಾಭಾ ಸಂಸ್ಥಾನದ ಪ್ರವೇಶ, ಉಪ್ಪಿನ ಸತ್ಯಾಗ್ರಹ, ರೈತಾಪಿ ಜನರನ್ನು ಜಮೀನುದಾರರಿಗೆ ಎದುರಾಗಿ ನಿಲ್ಲಿಸಿದ್ದು, ಕರನಿರಾಕರಣೆಯ ಚಳುವಳಿ, ದೇಶದಾದ್ಯಂತ ಸಂಚಾರಮಾಡಿ ರಾಜಕೀಯಜಾಗೃತಿಯನ್ನುಂಟುಮಾಡಿದುದು, ವೈಯಕ್ತಿಕ ಸತ್ಯಾಗ್ರಹ, ಕ್ವಿಟ್ ಇಂಡಿಯಾ ಚಳುವಳಿ—ಇಂತಹ ಭಾರತ ಸಂಗ್ರಾಮದ ಪ್ರತಿ ಹಂತಗಳಲ್ಲಿಯೂ ಘಟನೆಗಳಲ್ಲೂ ನೆಹರೂರವರೇ ಮುಂದಾಳು. ಈ ಒಂದೊಂದು ಚಳುವಳಿಗಳಲ್ಲೂ ಅವರು ಜೈಲುವಾಸವನ್ನನುಭವಿಸಬೇಕಾಯಿತು. ೧೯೨೧ರಿಂದ ೧೯೪೫ರ ಅವಧಿಯಲ್ಲಿ ಸುಮಾರು ೧೦ ವರ್ಷ ೭ ತಿಂಗಳು ಅವರು ಜೈಲಿನಲ್ಲೇ ಇದ್ದರು. ಈ ಎಲ್ಲ ನಡವಳಿಕೆಗಳ ಹಿಂದೆ ಸೂತ್ರಧಾರರಾಗಿದ್ದವರು ಗಾಂಧೀಜಿ. ಗಾಂಧೀಜಿ ಹೇಗೆ ತಮ್ಮ ಮಂತ್ರಶಕ್ತಿಯಿಂದ ಜನರನ್ನು ಆಕರ್ಷಿಸುತ್ತಿದ್ದರು ಎಂಬುದನ್ನು ನೆಹರೂರವರೇ ಹೀಗೆ ಹೇಳಿದ್ದಾರೆ. "ದೃಢಕಾಯರಲ್ಲದಿದ್ದರೂ ಉಕ್ಕಿನ ಶಕ್ತಿ ಗಾಂಧಿಯವರಲ್ಲಿತ್ತು. ಎಷ್ಟೇ ಬಲವಾದರೂ ಆ ದೈಹಿಕಶಕ್ತಿಯನ್ನು ಮೀರಿದ ಒಂದು ಪುರುಷತೆ ಅದು. ನೋಡಿದ ಮಾತ್ರಕ್ಕೇ ಪ್ರಭಾವಮುದ್ರೆಯೊತ್ತಿದ ಮುಖಭಂಗಿ, ಮೊಣಕಾಲಿನವರೆಗಿನ ಬಟ್ಟೆ, ಬೆತ್ತಲೆ ಮೈ — ಇವು ಹೊರನೋಟಕ್ಕೆ ಕಂಡರೂ ಅವರಲ್ಲಿರುವ ರಾಜತ್ವವೂ ಹಿರಿಮೆಯೂ ಇತರರಿಂದ ಸಾಷ್ಟಾಂಗ ಪ್ರಣಾಮ ಮಾಡಿಸುತ್ತಿದ್ದುವು. ಆತ್ಮಸಾಕ್ಷಿಯಾಗಿಯೂ ಬೇಕುಬೇಕೆಂದೂ ಅವರು ದೀನರಾಗಿಯೂ ನಿಗರ್ವಿಗಳಾಗಿಯೂ ಇದ್ದರು. ಶಕ್ತಿ ಮತ್ತು ಅಧಿಕಾರಸಂಪನ್ನರಾಗಿದ್ದರು. ಇದನ್ನು ತಾವೂ ಬಲ್ಲರು. ಕೆಲವು ಸಮಯಗಳಲ್ಲಿ ಸಾಮ್ರಾಟ ಠೀವಿಯಿಂದ ವರ್ತಿಸಿ ಆಜ್ಞೆಗಳನ್ನು ಮಾಡುವರು. ಅವನ್ನು ಶಿರಸಾ

ವಹಿಸಿಯೇ ತೀರಬೇಕು. ಅವರ ಪ್ರಶಾಂತವಾದ ಮತ್ತು ಆಳವಾದ ಕಣ್ಣುಗಳು ಒಬ್ಬನನ್ನು ಸೆರೆಹಿಡಿದು ಅವನ ಹೃದಯಾಂತರಾಳವನ್ನು ಮೆಲ್ಲನೆ ಹೊಗುವುದು. ಅವರ ಶಾರೀರವು ಸ್ಪಷ್ಟವಾಗಿಯೂ ತಿಳಿಯಾಗಿಯೂ ಇದ್ದು ನೇರವಾಗಿ ಹೃದಯಗಳನ್ನು ಮರಮರಿಸುತ್ತ ಮುಟ್ಟುವುದು. ನೆರವೆಯಲ್ಲಿ ಒಬ್ಬನಿರಲಿ, ಸಾವಿರಮಂದಿಯಿರಲಿ ಆ ವ್ಯಕ್ತಿಯ ಗಾರುಡಿಗತನವೂ ಆಕರ್ಷಣಶಕ್ತಿಯೂ ನೆರವಿಗೆ ಸೇರುವುವು. ಶ್ರಾವಕರಿಗೂ ವಾಗ್ಮಿಗೂ ಒಕ್ಕಟ್ಟಿನ ಭಾವ ವ್ಯೈದೋರುತ್ತಿತ್ತು. ಈ ಸಂವೇದನೆಗೂ ವಿಚಾರಕ್ಕೂ ಸಂಬಂಧವಿಲ್ಲ. ಆದರೂ ವಿಚಾರಮತಿಯನ್ನು ಕೆರಳಿಸುವ ವಿಷಯವನ್ನವರು ಉಪೇಕ್ಷಿಸಿರಲಿಲ್ಲ. ಆದರೆ ಮನಸ್ಸೂ ವಿವೇಚನೆಯೂ ಖಂಡಿತವಾಗಿಯೂ ದ್ವಿತೀಯಸ್ಥಾನವನ್ನು ಹೊಂದಿದ್ದುವು. ಈ 'ಸೆರೆಹಿಡಿಯುವ' ವಿಧಾನವು ವಾಗ್ಮಿತೆಯಿಂದಾಗಲೀ ಅಪರಂಜಿ ಮಾತಿನ ಗಾರುಡಿಯಿಂದ ವ್ಯೈಮರೆಯಿಸುವುದರಿಂದಾಗಲೀ ಉಂಟಾಗಿರಲಿಲ್ಲ. ಭಾಷೆಯು ಯಾವಾಗಲೂ ಸರಳವಾಗಿಯೂ ಗುರಿಯುಳ್ಳದ್ದಾಗಿಯೂ ಇತ್ತು. ಒಂದಾದರೂ ಅನಾವಶ್ಯಕವಾದ ಪದವನ್ನು ಉಪಯೋಗಿಸುತ್ತಿರಲಿಲ್ಲ. ಅವರ ಶ್ರದ್ಧಾಂತಃಕರಣವೂ ವ್ಯಕ್ತಿಮಹತ್ವವೂ ಜನರನ್ನು ಪಟ್ಟಾಗಿ ಹಿಡಿದುಬಿಡುತ್ತಿದ್ದುವು. ಒಳಗೆ ಅಡಗಿರುವ ಅಮೋಘವಾದ ಶಕ್ತಿಯ ಬಗ್ಗೆ ಅನುಭವಮುದ್ರೆಯನ್ನವರು ಒತ್ತುತ್ತಿದ್ದರು. ಉಚಿತವಾದ ಆವರಣ ವಿಶೇಷವೊಂದನ್ನು ಸೃಷ್ಟಿಸುವ ಸಂಪ್ರದಾಯವೊಂದನ್ನವರು ಪ್ರಾಯಶಃ ಬೆಳೆಸಿರಬಹುದು. ಈ ಸಂಪ್ರದಾಯವನ್ನು ಅರಿಯದ ಮತ್ತು ಆವರಣಕ್ಕೆ ಹೊಂದಿಕೊಳ್ಳದ ಒಬ್ಬ ಅಪರಿಚಿತನೂ ಅವರ ಯಕ್ಷಿಣಿಯ ಹಿಡಿತಕ್ಕೆ ಸಿಕ್ಕಲಾರನು. ಸಿಕ್ಕಿದರೂ ಅವನಮೇಲೆ ಅಷ್ಟು ಹೆಚ್ಚಾದ ಪರಿಣಾಮ ಉಂಟಾಗಲಾರದು. ಆದರೂ ಗಾಂಧೀಜಿಯವರ ಅಪೂರ್ವವಾದ ಶಕ್ತಿಯೆಂದರೆ ಒಲಿಸಿಕೊಳ್ಳುವುದು, ಪ್ರತಿಪಕ್ಷದವರನ್ನು ನಿರಾಯುಧರನ್ನಾಗಿಯಾದರೂ ಮಾಡುವುದು." ಇಂತಹ ಮಹಾವ್ಯಕ್ತಿತ್ವದ ಸಂಮೋಹನಕ್ಕೆ ಸಿಕ್ಕಿ ನೆಹರೂರವರು ಸೆರೆಯಾದುದೇನೂ ಹೆಚ್ಚಲ್ಲ.

ಹಾಗೆಂದು ನೆಹರೂರವರು ಗಾಂಧಿಯವರು ಹೇಳಿದುದನ್ನಾಗಲೀ ಮಾಡಿದುದನ್ನಾಗಲೀ ವಿಮರ್ಶೆಮಾಡದೆ ಒಪ್ಪಿಕೊಳ್ಳುತ್ತಿದ್ದಿಲ್ಲ. ಅವರವರಿಗೆ

ಅನೇಕ ವಿಷಯಗಳಲ್ಲಿ ಅಭಿಪ್ರಾಯಭೇದಗಳಿರುತ್ತಿದ್ದುವು. ಕರನಿರಾಕರಣ ಚಳುವಳಿ ನಡೆಯುತ್ತಿದ್ದು ಸಾವಿರಾರು ಮಂದಿ ಸೆರೆಯಲ್ಲಿದ್ದಾಗ ಚೌರಿಚೌರ ಗ್ರಾಮದಲ್ಲಿ ನಡೆದ ಒಂದು ಪುಟ್ಟ ಹಿಂಸಾಕೃತ್ಯಕ್ಕಾಗಿ ಗಾಂಧಿಯವರು ಚಳುವಳಿಯನ್ನು ನಿಲ್ಲಿಸಿಬಿಟ್ಟಾಗ ನೆಹರೂರವರಿಗೆ ಗಾಂಧೀಜಿಯವರ ಮೇಲೆ ಕೋಪ ಬಂತು. ದೇಶಕ್ಕೆ ದೇಶವೇ ಸ್ವಾತಂತ್ರ್ಯಸಿಗುವುದೆಂಬ ಭರವಸೆಯಿಂದಿದ್ದ ಕಾಲದಲ್ಲಿ, ಚಳುವಳಿ ಆವೇಶಪೂರಿತವಾಗಿದ್ದ ಕಾಲದಲ್ಲಿ, ಗಾಂಧಿಯವರು ಕಾಳನ್ನು ತೂರಿ ಜೊಳ್ಳನ್ನು ತಂದಂತೆ ಇರ್ವಿನ್‌ರೊಡನೆ ಒಪ್ಪಂದ ಮಾಡಿಕೊಂಡುಬಂದಾಗಲೂ ನೆಹರೂರವರು ಅಸಮಾಧಾನಪಟ್ಟರು. ಗಾಂಧಿಯವರು ಯಾವ ಬಗೆಯ ಸಮುಜಾಯಿಷಿ ಕೊಟ್ಟಾಗಲೂ ಅವರು ಒಪ್ಪಿಕೊಳ್ಳಲಿಲ್ಲ. ಹಾಗೇ ೧೯೪೬ ರಲ್ಲಿ ತಾತ್ಕಾಲಿಕ ಮಂತ್ರಿಮಂಡಲಿಯಲ್ಲಿದ್ದ ಕೋಮುವಾರು ಪ್ರಾತಿನಿಧ್ಯವನ್ನೂ ನೆಹರೂರವರು ಒಪ್ಪಿಕೊಳ್ಳಲಿಲ್ಲ. ಆದರೆ ನೆಹರೂರವರಲ್ಲಿ ಶಿಸ್ತುಪಾಲನೆ ಹುಟ್ಟುಗುಣ. ಗಾಂಧೀಜಿಯವರು ಒಪ್ಪಿದಮೇಲೆ, ಇತರ ರಾಷ್ಟ್ರನಾಯಕರು ಒಪ್ಪಿದಮೇಲೆ, ಅವರು ಅದನ್ನು— ತಮಗೆ ಒಪ್ಪಿಗೆ ಇರಲಿ ಬಿಡಲಿ— ಕಾರ್ಯಗತಮಾಡುವುದಕ್ಕೆ ಸರ್ವಶಕ್ತಿಯನ್ನೂ ವಿನಿಯೋಗಿಸುತ್ತಿದ್ದರು. ಗಾಂಧಿಯವರು ತಾವು ಮಾಡುವ ಯಾವ ಕಾರ್ಯಕ್ಕೂ ವಿವರಣೆ ಕೊಡುತ್ತಿದ್ದರು. ಆದರೆ ಅದರಲ್ಲಿ ರಾಜಕೀಯಮಾತ್ರವೇ ಇರುತ್ತಿರಲಿಲ್ಲ, ಆಧ್ಯಾತ್ಮಿಕತೆಯೂ ಇರುತ್ತಿತ್ತು. ನೆಹರೂರವರು ಗಾಂಧಿಯವರೊಡನೆ ಹತ್ತಿಪ್ಪತ್ತು ವರ್ಷಗಳ ಅತಿ ನಿಕಟ ಸಹವಾಸದಲ್ಲಿದ್ದರೂ ಅರ್ಥವಾಗದಂತಹ ಏನೋ ಒಂದು ಅಜ್ಞಾತ ಸ್ವಭಾವವು ಗಾಂಧಿಯವರಲ್ಲಿರುವುದನ್ನು ಅರಿತಿದ್ದರು. ಗಾಂಧಿಯವರ 'ಒಳದನಿ' ಯಾರಿಗೂ ಅರ್ಥವಾಗದ ಧ್ವನಿ. ಅವರ ಅಹಿಂಸೆ ಸಂಪೂರ್ಣವಾಗಿ 'ನೇತಿ' ಸ್ವರೂಪದ್ದಲ್ಲ, ಅದು ಅಸಮರವಲ್ಲ; ಅದು ಅಹಿಂಸಾ ಸಮರ. ನೆಹರೂರವರು ಗಾಂಧಿಯವರನ್ನು 'ಸತ್ಯಾಗ್ರಹವೂ ಒಂದು ಬಲಾತ್ಕಾರವೇ ಅಲ್ಲವೇ, ನೀವು ಬಲಾತ್ಕಾರ ಕೂಡದೆನ್ನುತ್ತೀರಿ'—ಎಂದು ಪ್ರಶ್ನಿಸಿದಾಗ ಅವರು 'ಅದು ಬಲಾತ್ಕಾರವಲ್ಲ, ಆತ್ಮಯಜ್ಞ. ಅದರಲ್ಲಿ ಒಂದು ಆಧ್ಯಾತ್ಮಿಕ ಅಂಶವಿರುವುದರಿಂದ ಪ್ರತಿಪಕ್ಷದವರ ಮೇಲೆ ಪ್ರಬಲವಾದ ಪ್ರಭಾವವು ಬೀಳುತ್ತದೆ. ಅವನು ತನ್ನ ನೀತಿಪ್ರಪಂಚದಲ್ಲಿ ಏನೇನು

ದುರ್ಗಗಳನ್ನು ಕಟ್ಟಿಕೊಂಡಿರುವನು ಎಂಬುದನ್ನು ಹೊರಗೆಡಹಿ ಅವನನ್ನು ಅಂಜಿಸುತ್ತದೆ. ಅವನಲ್ಲಿರುವ ಉತ್ತಮೋತ್ತಮ ಭಾವನೆಗಳನ್ನು ಅದು ಒಲಿಸಿಕೊಳ್ಳುತ್ತದೆ. ಪರಸ್ಪರ ಸಮ್ಮೇಳನಕ್ಕೆ ಅವಕಾಶಮಾಡಿಕೊಡುತ್ತದೆ. ಪ್ರೇಮದಿಂದ, ಆತ್ಮಯಜ್ಞದಿಂದ, ಒಬ್ಬನ ಬಳಿ ಸಾರುವುದರಿಂದ ಪ್ರತಿ ಪಕ್ಷದವರ ಮತ್ತು ನೋಡುತ್ತಿರುವವರ ಮನಸ್ಸಿನಮೇಲೆ ಪ್ರಬಲಪರಿಣಾಮ ವಾಗುವುದು'— ಎಂದು ವಿವರಿಸಿದರು. ಅನೇಕವೇಳೆ ನೆಹರೂರವರು ಗಾಂಧಿಯವರ ನಡವಳಿಕೆಯನ್ನು ಒಪ್ಪದಿದ್ದರೂ ತಮಗಿಂತಲೂ ದೂರದ ದೃಷ್ಟಿ ಅವರಲ್ಲಿತ್ತೆಂಬುದನ್ನು ಮನಗಂಡಿದ್ದರು. ಆದುದರಿಂದಲೇ ಅವರಿಗೆ ಗಾಂಧಿಯವರಲ್ಲಿ ಅಪಾರವಾದ ಗೌರವ. ಒಂದು ಸಣ್ಣ ವಿಷಯದಲ್ಲೂ ಗಾಂಧಿಯವರ ದೂರದರ್ಶಿತ್ವ ವ್ಯಕ್ತವಾಗುತ್ತಿತ್ತು. ಗಾಂಧಿಯವರು ಕಾಂಗ್ರೆಸ್ಸಿಗರೆಲ್ಲರೂ ನೂಲಬೇಕು, ಖಾದಿ ಹಾಕಬೇಕು ಎಂದಾಗ ಎಲ್ಲರೂ ಮೂಗುಮುರಿದರು. ಆದರೆ ಎಲ್ಲರೂ ಹಾಗೆ ಖಾದಿ ಹಾಕಿಕೊಂಡು ಒಟ್ಟಿಗೆ ಸೇರಿದಾಗ ಬಟ್ಟೆಬರೆಗಳಿಂದ ಕಾಣುತ್ತಿದ್ದ ದೊಡ್ಡಸ್ತಿಕೆ ಶ್ರೀಮಂತಿಕೆಗಳು ಮಾಯವಾಗಿ ಸಮಾನಭಾವ ಬೆಳೆಯಿತು. ಮೊದಲು ಮೂಗುಮುರಿದವರೇ ಈ ಸಾಮಾಜಿಕ ಹಿರಿತನ ಕಿರಿತನಗಳ ನಿರ್ಮೂಲನಕ್ಕೆ ಆಶ್ಚರ್ಯಪಟ್ಟರು. ಅಂತೂ ಎಷ್ಟೇ ಆತ್ಮೀಯವಾಗಿ ಗಾಂಧಿಯವರೊಡನೆ ವ್ಯವಹರಿಸಿರಲಿ ಸಾಯುವವರೆಗೂ ಗಾಂಧಿಯವರ ಆಳವನ್ನು ಯಾರಿಗೂ ಕಂಡುಕೊಳ್ಳ ಲಾಗಲಿಲ್ಲ. ಅವರೊಂದು ಸಮಸ್ಯೆಯಾಗಿಯೇ ಉಳಿದರು. ಇಂತಹ ಸಮಸ್ಯಾಮೂರ್ತಿಯನ್ನು ಬಹುಮಟ್ಟಿಗೆ ಅರ್ಥಮಾಡಿಕೊಂಡಿದ್ದವರೆಂದರೆ ನೆಹರೂರವರು. ನೆಹರೂರವರು ಗಾಂಧೀಜಿಯವರನ್ನು ಅರ್ಥಮಾಡಿ ಕೊಂಡಷ್ಟೂ ಲೋಕಪೂಜ್ಯರಾಗುತ್ತಾಹೋದರು. ಗಾಂಧೀಜಿಯವರಿಗೂ ಗೊತ್ತು; ತಮ್ಮ ಶಿಷ್ಯಕೋಟಿಯಲ್ಲೆಲ್ಲಾ ನೆಹರೂರವರೇ ತಮ್ಮ ಮನಸ್ಸನ್ನು ಹೆಚ್ಚಾಗಿ ತಿಳಿದವರೆಂದು. ಅದಕ್ಕೇ ಅವರು 'ನೆಹರೂರವರು ರಾಜಕೀಯದ ನನ್ನ ಉತ್ತರಾಧಿಕಾರಿ. ನಾನು ಬದುಕಿರುವಾಗ ಅವರು ನನ್ನ ಬಗ್ಗೆ ಅಭಿಪ್ರಾಯಭೇದಗಳನ್ನಿಟ್ಟುಕೊಂಡಿರಬಹುದು. ಆದರೆ ನಾನು ಸತ್ತಮೇಲೆ ಅವರು ನನ್ನ ಮಾತನ್ನೇ ಆಡುತ್ತಾರೆ'— ಅಂದರೆ ಅವರೇ ನಾನಾಗುತ್ತಾರೆ — ಎಂದಿದ್ದರು. ಆ ಮಾತು ಇಂದು ನಿಜವಾಗಿದೆ. ನೆಹರೂರವರು ಇಂದು

ವಿಶ್ವಕುಟುಂಬಿಯಾಗುತ್ತಿದ್ದಾರೆ. ಗಾಂಧೀಜಿಯವರು ಬದುಕಿದ್ದಾಗ ನೆಹರೂರವರಿಗೆ ಬಂದ ಅನುಮಾನಗಳನ್ನು ಪರಿಹರಿಸಲು ಒಬ್ಬರಿದ್ದರು. ಈಗ ಅಂತಹವರು ಇಲ್ಲವಾಗಿರುವುದರಿಂದಲೂ ಭಾರತದಂತಹ ವಿಶಾಲವಾದ ದೇಶದ ಹೊಣೆಗಾರಿಕೆ ಹೊತ್ತಿರುವುದರಿಂದಲೂ ಎಲ್ಲ ಸಮಸ್ಯೆಗಳನ್ನೂ ಅವರೇ ಪರಿಹಾರಮಾಡುತ್ತಿದ್ದಾರೆ. ಅವರ ಈ ಪರಿಹಾರದ ಮಾರ್ಗ ಗಾಂಧಿಯವರ ಮಾರ್ಗವಾಗಿದೆ.

ಅಹಂಭಾವಿಯಾಗಿಯೂ ವಿದ್ಯಾಗರ್ವಿಯಾಗಿಯೂ ಇದ್ದ ಜವಾಹಿರ ಲಾಲ ನೆಹರೂರವರನ್ನು ಯಾರು ಮೇಲಕ್ಕೆತ್ತಿ 'ಭಾರತರತ್ನ'ವನ್ನಾಗಿ ಮಾರ್ಪಡಿಸಿದರೋ, ಯಾರ ಪ್ರಭಾವದಿಂದ ನೆಹರೂರವರು ಈ ದಿನ ಪ್ರಪಂಚಕ್ಕೇ ಶಾಂತಿಸಂದೇಶವನ್ನು ಸಾರುವ ಪ್ರವಾಸಗಳನ್ನು ಕೈಕೊಂಡಿ ದ್ದಾರೆಯೋ, ಯಾರು ನೆಹರೂರವರ ಜೀವನಾಡಿಯಾಗಿದ್ದರೋ, ಮೋತೀ ಲಾಲರವರು ಕಾಲವಾದಮೇಲೆ ನೆಹರೂರವರಿಗೆ ಯಾರು ಎರಡನೆಯ ತಂದೆಯಂತಿದ್ದರೋ, ಯಾರ ನೇತೃತ್ವದಲ್ಲಿ ನಡೆದು ಭಾರತ ಸ್ವಾತಂತ್ರ್ಯ ವನ್ನು ಪಡೆಯಿತೋ, ರಾಜಕೀಯಕ್ಕೂ ಶಾಂತಿ ಅಹಿಂಸೆಗಳೆಂಬ ಧರ್ಮ ತತ್ತ್ವಗಳನ್ನು ಅನ್ವಯಿಸಿ ವಿಶ್ವಧರ್ಮವನ್ನು ಯಾರು ಬೋಧಿಸಿ ಹಾಗೇ ಅನುಷ್ಠಾನದಲ್ಲಿಯೂ ತಂದರೋ ಅಂತಪ ಭಾರತ ಭಾಗ್ಯವಿಧಾತರಾದ ಮಹಾತ್ಮಾ ಗಾಂಧಿಯವರು ೧೯೪೮ನೆಯ ಜನವರಿ ೩೦ನೆಯ ತಾರೀಖು ಶುಕ್ರವಾರ ಸಂಜೆ ಐದೂಕಾಲು ಘಂಟೆಯ ವೇಳೆಯಲ್ಲಿ ಒಬ್ಬ ಹುಚ್ಚನ ಗುಂಡಿನೇಟಿನಿಂದ ದೇಹವನ್ನು ತ್ಯಾಗಮಾಡಿದರು. ಓಡಿಬಂದ ಜವಾಹಿರರು ಮೈಮರೆತು ನೆಲಕ್ಕೊರಗಿ ಗಾಂಧೀಜಿಯವರ ವಸ್ತ್ರಗಳಲ್ಲಿ ಮುಖವನ್ನಿಟ್ಟು ಬಿಕ್ಕಿಬಿಕ್ಕಿ ಅತ್ತರು. ಭಾರತಕ್ಕೆ ಭಾರತವೇ ಗೋಳಿಟ್ಟಿತು. ದೇಶವಿದೇಶ ಗಳವರೂ ಗೋಳಿಟ್ಟರು. ಪ್ರಪಂಚದಲ್ಲಿ ಇದುವರೆಗೆ ಯಾರಿಗೂ ಬರದಿದ್ದಷ್ಟು ಸಂತಾಪಸಂದೇಶಗಳು ಬಂದುವು. ತಂದೆಯನ್ನು ಕಳೆದುಕೊಂಡಂತೆ ಶೋಕಿಸುತ್ತಿದ್ದ ಭಾರತ ಪುತ್ರ ಪುತ್ರಿಯರನ್ನು ಸಮಾಧಾನಮಾಡುವಂತೆ ನೆಹರೂರವರನ್ನೇ ಕೇಳಿದರು. ನೆಹರೂರವರು ಶೋಕಸಾಗರದಲ್ಲೇ ಮುಳುಗಿದ್ದರು. ನಿಜ. ಆದರೆ ಅವರನ್ನು ಬಿಟ್ಟು ಬೇರೆ ಸಮಾಧಾನ ಹೇಳುವವರುತಾನೇ ಯಾರಿದ್ದರು? ಕಡೆಗೆ ನೆಹರೂರವರೇ ಒಪ್ಪಿಕೊಂಡು

ರೇಡಿಯೋ ಮೂಲಕ ಮಾತನಾಡಿದರು. ಅವರ ಆಗಿನ ತುಂಬುಹೃದಯ ದಿಂದ, ಶೋಕಾಗ್ನಿತಪ್ತವಾದ ಹೃದಯದಿಂದ ಬಂದ ಮಾತು ಅವರ ಹೃದಯದ ನೋವನ್ನೂ ಸಂಕಟವನ್ನೂ ಸೂಚಿಸುವುದಲ್ಲದೆ, ನೆಹರೂರವರಿಗೆ ಬಾಪೂಜಿಯವರಲ್ಲಿದ್ದ ಗೌರವ ಪ್ರೀತಿಗಳನ್ನೂ ಸೂಚಿಸುವುವಾಗಿವೆ. ಅವರು ಅಂದು ಹೇಳಿದ ಮಾತುಗಳಿವು :

"ಬೆಳಕು ನಂದಿಹೋಯಿತು. ಎತ್ತ ನೋಡಿದರೂ ಕತ್ತಲೆಯೇ ಕವಿದಿದೆ..........ನಿಮಗೆ ನಾನೇನೆಂದು ಹೇಳಲಿ! ಹೇಗೆ ಹೇಳಲಿ! ನಮ್ಮ ಪ್ರೀತಿಯ ಗುರು, ದೇಶಕ್ಕೆ ತಂದೆ, ನಮ್ಮ ಬಾಪೂಜಿ ಇನ್ನಿಲ್ಲ. ಇನ್ನಿಲ್ಲವೆನ್ನುವುದು ಪ್ರಾಯಶಃ ತಪ್ಪು. ಆದರೆ ಇನ್ನುಮುಂದೆ ನಾವು ಆತನನ್ನು ಇಷ್ಟು ವರ್ಷಗಳೂ ಕಾಣುತ್ತಿದ್ದಂತೆ ಕಾಣಲಾರೆವು. ಹಿತೋಕ್ತಿ ಗೆಂದು ಆತನ ಬಳಿಗೋಡಲಾರೆವು. ಮನಸ್ಸಿನ ತಲ್ಲಣವನ್ನು ಸಮಾಧಾನ ಪಡಿಸುತ್ತಿದ್ದ ಆತನ ವಾಣಿಯನ್ನು ಕೇಳಲಾರೆವು. ಇದು ನನಗೆ ಮಾತ್ರ ವಲ್ಲದೆ ಕೋಟಿಗಟ್ಟಲೆ ದೇಶಬಾಂಧವರಿಗೆ ವಜ್ರಪ್ರಹಾರವಾಗಿದೆ. ಇಂತಹ ಸಮಯದಲ್ಲಿ ಉಪದೇಶಮಾಡಿ ದುಃಖ ಶಮನಗೊಳಿಸಲೆತ್ನಿಸುವುದು ನನ್ನಿಂದಾಗಲೀ ಬೇರೊಬ್ಬರಿಂದಾಗಲೀ ಆಗಲಾರದು ; ಸಾಧ್ಯವಲ್ಲ."

"ದೀಪವಾರಿಹೋಯಿತೆಂದು ನಾನು ನುಡಿದೆ. ಆದರೆ ನಾನು ನುಡಿದುದು ತಪ್ಪು. ಏಕೆಂದರೆ ಈ ದೇಶದಲ್ಲಿ ಬೆಳಗುತ್ತಿದ್ದ ಜ್ಯೋತಿಯು ಸಾಮಾನ್ಯವಾದುದಲ್ಲ. ಇಷ್ಟು ವರ್ಷಕಾಲ ಈ ದೇಶವನ್ನು ಬೆಳಗಿದ ಜ್ಯೋತಿ ಇನ್ನೂ ಅನೇಕ ವರ್ಷಕಾಲ ಈ ದೇಶದಲ್ಲಿ ಬೆಳಗುವುದು. ಹೊರಗಿನ ಜಗತ್ತು ಅದನ್ನು ಕಂಡು ಗುರುತಿಸುವುದು. ಆದರಿಂದ ಕೋಟ್ಯಾಂತರ ಎದೆಗಳಲ್ಲಿ ಶಂಕಾಭಯಗಳು ತೊಲಗಿ ಮಾಯಗೊಳ್ಳುವುವು. ಆ ಜ್ಯೋತಿ ನಿತ್ಯವಾದ ಸತ್ಯದ ಸ್ವರೂಪವಾಗಿತ್ತು. ಜ್ಯೋತಿಸ್ವರೂಪನಾಗಿ ಚಿರಂಜೀವಿ ಯಾದ ಆತನು ಶಾಶ್ವತ ಸತ್ಯವನ್ನೆತ್ತಿಹಿಡಿದು ನಮ್ಮೆಲ್ಲರನ್ನೂ ಧರ್ಮ ಪಥದಲ್ಲಿ ನಡೆಸುತ್ತಾ ತಪ್ಪೆಸೆಗದಂತೆ ತಡೆಯುತ್ತಾ ಈ ಸನಾತನ ಭೂಮಿ ಯನ್ನು ಸ್ವಾತಂತ್ರ್ಯಮಂದಿರದ ಹೊಸ್ತಿಲಿಗೆ ಕರೆತಂದನು."

"ಇದಿಷ್ಟು ಪ್ರಾಪ್ತಿಯಾಯಿತು. ಇನ್ನು ನಡೆಸತಕ್ಕದ್ದೆಷ್ಟೋ ಇದೆ. ಆತನೇ ನಡೆಸತಕ್ಕದ್ದೆಷ್ಟೋ ಇತ್ತು. ಆತನಿಲ್ಲದೆ ನಾವಿರಬಹುದಾದವ

ರೆಂದಾಗಲೀ, ಆತನು ಮುಗಿಸಿ ಪೂರಯಿಸಿದನೆಂದಾಗಲೀ ನಾವೆಂದಿಗೂ ಭಾವಿಸಿರಲಿಲ್ಲ. ಈಗಲಾದರೋ ನಮ್ಮೆದುರಿನಲ್ಲಿ ಇಷ್ಟು ಕಷ್ಟಗಳು ಗುಂಪು ಗುಂಪಾಗಿ ತಲೆಯೆತ್ತಿಕೊಂಡಿರುವ ಸಂದರ್ಭದಲ್ಲಿ ನಮ್ಮೊಡನೆ ಆತನಿಲ್ಲ ವೆಂಬುದನ್ನು ಸಹಿಸಿಕೊಳ್ಳಬೇಕಾಗಿರುವ ಅಂಶವು ಮನಸ್ಸಿಗೆ ಅತಿಯಾದ ಭಯವನ್ನೊಡ್ಡುವುದು."

"ಆತನ ಜೀವನಯಾತ್ರೆಯನ್ನು ಯಾರೋ ಹುಚ್ಚನು ಕೊನೆಗಾಣಿಸಿ ದನು. ಅಂತಹ ಕೆಲಸ ಮಾಡಿದವನನ್ನು ಹುಚ್ಚನೆಂದೇ ಕರೆಯಬೇಕು. ಕಳೆದ ಕೆಲವು ವರ್ಷಗಳಿಂದ ದೇಶದಲ್ಲಿ ಸಾಕಾದಷ್ಟು ವಿಷ ಹರಡಿ ಕೊಳ್ಳುತ್ತಾ ಜನರ ಮನಸ್ಸುಗಳನ್ನು ಕೆಡಿಸಿದೆ. ಈ ವಿಷವನ್ನು ನಾವು ಎದುರಿಸಬೇಕು, ನಿರ್ಮೂಲಗೊಳಿಸಬೇಕು. ಸುತ್ತಲೂ ಮುತ್ತಿಕೊಂಡಿರುವ ಕಷ್ಟಗಳನ್ನೂ ಆಪತ್ತುಗಳನ್ನೂ ಎದುರಿಸಬೇಕು. ಹುಚ್ಚರಂತೆಯೋ ಕೇಡಿಗರಂತೆಯೋ ಅಲ್ಲ; ಕೋಪವೋ ಉದ್ರೇಕವೋ ಹುಟ್ಟಿದಾಗ ನಮ್ಮ ಲ್ಲೊಬ್ಬರಾದರೂ ಎಚ್ಚರ ತಪ್ಪಿ ವರ್ತಿಸದೆ ಇರತಕ್ಕದ್ದು ಮೊದಲನೆಯ ಅಂಶ. ನಡತೆ ಬಿಟ್ಟು ವರ್ತಿಸೋಣವೆನ್ನಿಸುವ ಕೆಟ್ಟ ಧೈರ್ಯಕ್ಕೆಡೆಗೊಡ ಬಾರದು. ಧೀರರಂತೆಯೂ ದಕ್ಷರಂತೆಯೂ ವರ್ತಿಸಬೇಕಾದವರು ನಾವು. ಸುತ್ತು ಮುತ್ತು ಇರುವ ಆಪತ್ತುಗಳನ್ನು ಗೆಲ್ಲುವ ಸಂಕಲ್ಪ ಮಾಡಿಕೊಂಡು ಘನತಮ ಗುರುವೂ ನಾಯಕನೂ ನಮಗಿತ್ತಿರುವ ಆಜ್ಞೆಯನ್ನು ನಿರ್ವಹಿಸು ತ್ತೇವೆಂದು ಪ್ರತಿಜ್ಞೆಮಾಡಿಕೊಳ್ಳಬೇಕು. ಅದೃಶ್ಯನಾಗಿರಬಹುದಾದರೂ ಆತನು ನಮ್ಮೆದುರಿನಲ್ಲಿಯೇ ಇದ್ದುಕೊಂಡು ನಮ್ಮನ್ನೇ ದಿಟ್ಟಿಸುತ್ತಲಿರುವ ನೆಂದು ನನ್ನ ನಂಬಿಕೆ. ನೀವೂ ಹಾಗೆಯೇ ನಂಬಬೇಕು. ಅಯೋಗ್ಯ ನಡತೆಗೋ ದೌರ್ಬಲ್ಯಕ್ಕೋ ನಾವು ಅವಕಾಶಕೊಟ್ಟಾಗ ಆತನ ಮನಸ್ಸಿಗೆ ಅಸಮಾಧಾನವೆಂಬುದನ್ನು ಮರೆಯದಿರಬೇಕು."

"ನಾವು ಹಾಗೆ ಮಾಡಲಾಗದು. ಅದಕ್ಕೆ ನಾವು ದುರ್ಬಲರಾಗಿರ ಬೇಕೆಂಬ ಅರ್ಥವಲ್ಲ. ನಾವು ಸಬಲರಾಗಿದ್ದು ಅಂದರೆ ಐಕಮತ್ಯದಿಂದಿದ್ದು ಎದುರು ಬಂದ ಕಷ್ಟಗಳನ್ನು ಗೆಲ್ಲಬೇಕು. ಐಕಮತ್ಯವೇ ಬಲವೆಂದು ಪುನಃ ಪುನಃ ಹೇಳಿಕೊಳ್ಳಬೇಕು. ನಮ್ಮ ಸಣ್ಣ ಪುಟ್ಟ ಕಷ್ಟಗಳನ್ನೂ ಕಲಹ ಗಳನ್ನೂ ಈ ಘೋರಕೃತ್ಯದೆದುರಿನಲ್ಲಿ ಕೊನೆಗಾಣಿಸಿಕೊಳ್ಳಬೇಕು."

"ದೊಡ್ಡ ಅನಾಹುತ ಸಂಭವಿಸಿದಾಗ ಅಲ್ಪವಾದುವುಗಳನ್ನು ಮರೆತು ಘನವಾದವುಗಳನ್ನು ಕಾಣುವ ಸೂಚನೆಯಾಗುತ್ತದೆ. ನಾವು ಹೆಚ್ಚಾಗಿ ಯೋಚನೆ ನಡೆಸಿರುವುದು ಅಲ್ಪ ವಿಷಯಗಳನ್ನು ಕುರಿತೇ. ದೊಡ್ಡ ವಿಷಯಗಳ ಪ್ರಜ್ಞೆಯನ್ನು ಈ ಸಾವಿನಿಂದ ಆತನೇ ತಂದುಕೊಟ್ಟು ಅಲ್ಪ ವಿಷಯಗಳನ್ನು ಮರೆಯುವಂತೆ ಮಾಡಿದ್ದಾನೆ. ಅಷ್ಟನ್ನು ನೆನಪಿನಲ್ಲಿಟ್ಟುಕೊಂಡು ವರ್ತಿಸಿದ್ದೇ ಆದರೆ ನಮಗೂ ಶ್ರೇಯಸ್ಸು; ದೇಶಕ್ಕೂ ಶ್ರೇಯಸ್ಸು."

ಈ ಮಾತುಗಳು ದುಃಖ ತುಂಬಿದ ಹೃದಯದಿಂದ ಬಂದುವು. ಈ ಮಾತನ್ನು ನೆಹರೂರವರು ಮಹಾತ್ಮರು ಸತ್ತ ಮೂರು ಘಂಟೆಗಳ ಕಾಲದೊಳಗಾಗಿ ಹೇಳಬೇಕಾಯಿತು. ಇದೇ ಸಂದರ್ಭದಲ್ಲೇ ಹರಿಜನ ಪತ್ರಿಕೆಗೆ ಅಗ್ರಲೇಖನ ಬರೆಯಬೇಕಾದಾಗ ಪ್ಯಾರೀಲಾಲರು ನೆಹರೂರವರೇ ಆ ಅಗ್ರಲೇಖನವನ್ನು ಬರೆಯಬೇಕೆಂದು ಕೇಳಿಕೊಂಡರು. ನೆಹರೂರವರೇ ಅದನ್ನು ಬರೆದರು. ನೆಹರೂರವರ ಪತ್ರಿಕೋದ್ಯೋಗಿಯ ನಿಪುಣತೆಯನ್ನು ಆ ಲೇಖನದಲ್ಲಿ ಕಾಣಬಹುದು. ಅಷ್ಟುಮಾತ್ರವಲ್ಲ. ನಿಜವಾಗಿ ಗಾಂಧಿಯವರ ಸಾಧನೆಯೇನೆಂಬುದನ್ನು ಆ ಮಾತುಗಳು ವಿವರಿಸುತ್ತವೆ. ಗಾಂಧಿಯವರ ಅಸಾಮಾನ್ಯ ವ್ಯಕ್ತಿತ್ವ ಭಾರತದ ಮತ್ತು ಪ್ರಪಂಚದ ಚರಿತ್ರೆಯಲ್ಲಿ ಅವರ ಸ್ಥಾನಮಾನಗಳನ್ನೂ ಸಹ ಅದು ಸೂಚಿಸುತ್ತದೆ. ಗಾಂಧೀಜಿಯವರಿಗೆ ಈ ಜನ ಈ ದೇಶ ಎಷ್ಟು ಋಣಿ ಎಂಬುದನ್ನು ಅದು ತೋರಿಕೊಡುವುದಾಗಿದೆ. ಗಾಂಧಿ–ನೆಹರೂರವರ ಸಂಬಂಧವನ್ನು ಅದು ತಿಳಿಸುವುದಾಗಿದೆ. ಆದುದರಿಂದ ಆ ಭಾಗವನ್ನು ಇಲ್ಲಿ ಕೊಟ್ಟಿದೆ.

"೧೯೧೬, ಮೂವತ್ತೆರಡು ವರ್ಷಗಳ ಹಿಂದೆ. ಆಗಲೇ ಮೊದಲ ಸಾರಿ ನಾನು ಬಾಪುವನ್ನು ಕಂಡುದು. ಈಗ್ಗೆ ಒಂದು ಯುಗವೇ ಕಳೆದು ಹೋಯಿತು. ದೃಷ್ಟಿಯಾದರೋ ಗತಿಸಿದ ಕಾಲಕ್ಕೇ ತಿರುಗುವುದು. ಸಾವಿರಾರು ಸ್ಮರಣೆಗಳು ಗುಂಪುಕೂಡಿ ಬರುವುವು. ಎಷ್ಟು ವಿಸ್ಮಯಕಾರಕವಾದುದು ಈ ಕಾಲವಿಭಾಗ ಭಾರತವರ್ಷದ ಇತಿಹಾಸದಲ್ಲಿ! ಒಮ್ಮೆ ಉನ್ನತಿ, ಮತ್ತೊಮ್ಮೆ ಅವನತಿ; ಇಕೋ ಗೆಲವು, ಅಕೋ ಸೋಲು; ನಿನ್ನೆ ಖಿನ್ನತೆ, ಇಂದು ಉತ್ಸಾಹವೆಂಬಂತಾಗಿ ಈ ವೃತ್ತಾಂತವೇ ಉತ್ಕೃಷ್ಟ

ಕಥಾ ಕಾವ್ಯವಾಗಿದೆ. ನಮ್ಮಂಥ ಅಲ್ಪಜೀವಿಗಳ ಜೀವನವೂ ಕಾವ್ಯ ಯೋಗ್ಯವೆನಿಸಿತು. ಭಾರತವರ್ಷದ ಮಹಾ ನಾಟಕದಲ್ಲಿ ನಾವು ಯಥಾಶಕ್ತಿ ಪಾತ್ರಧಾರಿಗಳಾಗುವಂತೆ ನೆರವೇರಿತು."

"ಪೃಥ್ವಿಯ ಇತಿಹಾಸದಲ್ಲಿ ಈ ಕಾಲವಿಭಾಗ ಅಶಾಂತಿಯಿಂದ ತುಂಬಿದ್ದು. ಯುದ್ಧಗಳು, ಉಲ್ಬಣಗಳು, ಪೋಟಾಪೋಟಿಗಳು, ವಿಷಾದಕ ಘಟನೆಗಳು, ವಿನಾಶಕಾರಕ ಕೃತ್ಯಗಳು ಜರುಗಿದುವು. ಆದಾಗ್ಯೂ ಅವುಗಳ ಮಧ್ಯೆ ಭಾರತದೇಶದಲ್ಲಿಯ ಘಟನೆಗಳು ಸ್ಫುಟವಾಗಿಯೂ ಪ್ರತ್ಯೇಕವಾಗಿಯೂ ಎದ್ದು ಕಾಣುತ್ತವೆ. ಈ ಘಟನೆಗಳ ರೀತಿ ರಂಗಗಳೇ ವಿಶಿಷ್ಟ ರೀತಿಯದು. ಈ ಕಾಲವಿಭಾಗದ ಇತಿಹಾಸವನ್ನು ವ್ಯಾಸಂಗಕ್ಕಿಟ್ಟುಕೊಂಡು ಯಾರಾದರೂ ಸರಿಯೆ ಬಾಪೂ ವಿಷಯವನ್ನು ತಿಳಿಯದಿದ್ದರೆ ಅಥವಾ ಘಟನೆಗಳನ್ನು ಮಾತ್ರ ಸ್ಮರಿಸಿದರೆ ಆಶ್ಚರ್ಯಮೂಢನಾಗುತ್ತಾನೆ. ಕಾರಣ ಸಹಿತವಾಗಿ ಘಟನೆಗಳನ್ನು ವಿವರಿಸಿಕೊಳ್ಳಲಾಗುವುದಿಲ್ಲ. ನಮ್ಮಲ್ಲಿಯೇ ಯಾರಾದರೂ ಸರಿಯೆ, ನಿಧಾನವಾಗಿ ಕುಳಿತುಕೊಂಡು ಸಂಭವಗಳನ್ನು ಸ್ಮರಿಸಿ ಏತಕ್ಕಾಗಿ ನಾವು ವರ್ತಿಸದ ರೀತಿಯಲ್ಲಿ ವರ್ತಿಸಿದೆವೆಂದು ತಿಳಿಯ ಹೇಳಿಕೊಳ್ಳುವುದಕ್ಕೂ ಪ್ರಯಾಸವಾಗ್ಗುವುದು. ವ್ಯಕ್ತಿಯಾದರೂ ಸಮೂಹವಾದರೂ ಭಾವೋದ್ರೇಕಕ್ಕೆ ಸಿಕ್ಕಿದ ಸಮಯದಲ್ಲಿ ಉತ್ತಮವಾಗಿಯೋ ನೀಚವಾಗಿಯೋ ವರ್ತಿಸುವುದುಂಟು. ಉದ್ರೇಕ ಕಳೆದಬಳಿಕ ಯಥಾಪೂರ್ವರೀತಿಯಲ್ಲಿ ವ್ಯಕ್ತಿಯು ಕರ್ತವ್ಯನಿರತನೋ ವಿರತನೋ ಆಗುತ್ತಾನೆ. ಇಷ್ಟು ಸಹಜ."

"ಪರಂತು, ಸಮಸ್ತ ದೇಶವೇ ಒಟ್ಟುಗೂಡಿ ಘನತಮ ರೀತಿಯ ಸೌಶೀಲ್ಯವರ್ತನೆಯಲ್ಲಿ ಏಕದೇಹದಂತೆ ತೊಡಗಿದ ಅದ್ಭುತ ಮಾತ್ರವಲ್ಲ–ಅನೇಕ ವರ್ಷಗಳ ಕಾಲ ಆ ವರ್ತನೆಯ ಉದಾತ್ತತೆಯನ್ನು ಕಟ್ಟುಕೊಂಡು ಕಾಪಾಡಿದ ಸಂಗತಿ ಅತಿಶಯವಾದ ಆಶ್ಚರ್ಯಕ್ಕೆ ಕಾರಣ. ವಾಸ್ತವವಾಗಿ ಆ ಅಂಶವೇ ಮಹತ್ತೆನಿಸತಕ್ಕ ಸಾಧನೆ. ಆ ಸಾಧನೆ ಹೇಗೆ ನಡೆಯಿತೆಂದು ವಿವರಿಸಬೇಕಾದಾಗ ಈ ಕಾಲದ ಕರ್ತೃವೆನಿಸುವ ವ್ಯಕ್ತಿಯನ್ನು ತಿಳಿಯದಿದ್ದರೆ ಆಗುವುದಿಲ್ಲ. ಭೂಮ್ಯಂತರಿಕ್ಷಗಳನ್ನು ಎರಡು ಪಾದಗಳ ನಡುವೆ ತ್ರಿವಿಕ್ರಮಮೂರ್ತಿ ಇಟ್ಟುಕೊಂಡಂತೆ ಭಾರತವರ್ಷದ ಇತಿಹಾಸದಲ್ಲಿ

ಅರ್ಧ ಶತಮಾನದಷ್ಟು ವಿಭಾಗವನ್ನು ಈತನು ತನ್ನ ಹೆಜ್ಜೆಯೊಳಗಿಟ್ಟು ಕೊಂಡವನು. ದೇಹದ ಬೃಹದಾಕೃತಿಯಿಂದಲ್ಲ, ಆತ್ಮಬಲದ ತೇಜಸ್ಸಿನ ರೂಪದಿಂದ.''

''ಬಾಪುವಿಗಾಗಿ ನಾವು ರೋಧಿಸುತ್ತೇವೆ. ಅನಾಥರಾದೆವೆಂದು ಅಡಿಕೊಳ್ಳುತ್ತೇವೆ. ಪರಮೋತ್ಕೃಷ್ಟವಾದ ಆತನ ಜೀವನವನ್ನು ಕಂಡ ತರುವಾಯ ಏತಕ್ಕೆ ರೋಧಿಸಬೇಕು? ಸ್ವಂತ ಜೀವನದಲ್ಲಿ ಅಷ್ಟು ಘನತೆ ಗೂಡಿಸಿ ಅಷ್ಟು ಸಾರ್ಥಕ್ಯ ಪಡೆದವರು ಚರಿತ್ರೆಯನ್ನಾಮೂಲಾಗ್ರವಾಗಿ ನೋಡಿದರೂ ಅತಿ ವಿರಳ. ನಮ್ಮ ಉದ್ಯಮಗಳು ಸಫಲಗೊಳ್ಳಲಿಲ್ಲವೆಂದು ಆತನು ಖಿನ್ನನಾಗುತ್ತಿದ್ದುದು ನಿಜ, ಅಭೀಷ್ಟಕ್ಕನುಗುಣವಾಗಿ ದೇಶದ ಸೌಭಾಗ್ಯವನ್ನು ಸಾಧಿಸಲಿಕ್ಕಾಗಲಿಲ್ಲವೆಂದು ತಪಿಸುತ್ತಿದ್ದುದು ನಿಜ. ಆ ಖಿನ್ನತೆಯೂ ತಪನವೂ ಸಹಜವಾಗಿತ್ತು. ಆದರೆ ಆತನ ಜೀವನವು ವ್ಯರ್ಥವಾಯಿತೆಂದು ಹೇಳುವಷ್ಟು ಸಾಹಸ ಯಾರಿಗುಂಟು? ಆತನ ಸಂಪರ್ಕ ಪಡೆದುದೆಲ್ಲವೂ ಅರ್ಹತೆಗೇರಿತು, ವಿಶೇಷ ಬೆಲೆಯುಳ್ಳದ್ದಾಯಿತು. ಯಾವ ಪ್ರಯತ್ನವನ್ನು ಆತನು ಪಟ್ಟರೂ ಸಫಲವಾಯಿತು—ಅಭಿಲಾಷೆ ಪಟ್ಟಷ್ಟಿಲ್ಲದಿದ್ದರೂ ಘನವಾದ ಫಲವೇ ಪ್ರಾಪ್ತಿಸಿತು. ಎಂತಹ ಉದ್ಯಮವನ್ನೀತನಿಟ್ಟುಕೊಂಡಾಗ್ಯೂ ಸರಿಯೆ ಸೋಲೆಂಬುದೇ ಈತನಿಗಿಲ್ಲವೆಂಬ ನಂಬಿಕೆ ನಮ್ಮ ಮನಸ್ಸುಗಳಲ್ಲಿ ಬೇರೂರಿತ್ತು. ಗೀತಾವಾಕ್ಯಕ್ಕನುಸಾರವಾಗಿ ಫಲಾಫಲಗಳಲ್ಲಿ ಆಸಕ್ತಿಯಿಲ್ಲದೆ ಶ್ರಮಿಸಿದವನಾದುದರಿಂದ ಆತನಿಗೆ ಫಲಪ್ರಾಪ್ತಿಯಾಯಿತು.''

''ಆ ದೀರ್ಘಕಾಲದ ಜೀವನದಲ್ಲಿ, ಅಸಾಧಾರಣವಾದ ಉದ್ಯಮಗಳಲ್ಲಿ, ಅವಿರತವಾದ ಕರ್ತವ್ಯಪಾಲನೆಯಲ್ಲಿ, ಎಲ್ಲಿ ಹುಡುಕಿ ನೋಡುವುದಾದರೂ ಅಪಶೃತಿಯೆಂಬುದಿಲ್ಲ, ಅಪಸ್ವರವೆಂಬುದಿಲ್ಲ, ಕರ್ಕಶವೆಂಬುದಿಲ್ಲ, ವಿಕಾರವೆಂಬುದಿಲ್ಲ. ನಾನಾ ಬಗೆಯ ಕಾರ್ಯಕಲಾಪಗಳನ್ನಾತನು ಕಟ್ಟಿಕೊಂಡು ನಡೆಸುತ್ತಿದ್ದಾಗ್ಯೂ ಅವೆಲ್ಲವೂ ಒಂದೇ ಗೀತೆಯ ಚರಣಗಳಂತೆ ಉಚಿತ ಸ್ಥಾನಗಳಲ್ಲಿ ಹೊಂದಿಕೊಳ್ಳುವುವು. ಆಡಿದ ಪ್ರತಿಯೊಂದು ನುಡಿಯೂ ತೋರಿದ ಪ್ರತಿಯೊಂದು ಸಂಜ್ಞೆಯೂ ಆ ಗೀತೆಯ ಶೃತಿಯನ್ನೇ ಅನುಸರಿಸಿದುವು. ಹೀಗಾಗಿ ಆತನು ಜೀವನವನ್ನೇ ಸರ್ವಾಂಗಸುಂದರ

ವಾಗಿ ರಚಿಸಿಕೊಂಡ ಪರಮೋತ್ತಮ ಕಲಾಭಿಜ್ಞ. ಜೀವನವೇ ಆತನಿಗೆ ಆದ್ಯಂತಸುಂದರವಾದ ಕಲೆಯಂತಾಗಿತ್ತು. ಆತನ ಜೀವನದ ರೀತಿ ಯೆಂಬುದು ಸಾಮಾನ್ಯ ರೀತಿಗೆ ಭಿನ್ನವಾದರೂ ಸೌಂದರ್ಯಸಂಪೂರ್ಣ ವಾಯಿತು. ಆ ಸೌಂದರ್ಯದೆಡೆಗೆ ನಿತ್ಯವಾದ ಸತ್ಯ ಮತ್ತು ಶುಚಿತ್ವ ಗಳೆರಡೂ ದಾರಿಯನ್ನು ಕಲ್ಪಿಸಿಕೊಡುತ್ತವೆಂಬುದು ಆತನಿಂದ ಸ್ಪಷ್ಟ ಗೊಂಡಿತು.''

"ವಯಸ್ಸು ಕಳೆದಂತೆಲ್ಲಾ ಆತನ ಶರೀರ ಆ ದಿವ್ಯ ಚೈತನ್ಯಕ್ಕೆ ವಾಹನಮಾತ್ರವಾಯಿತು. ಆತನನ್ನು ನೋಡಿದಾಗಲೂ ಆತನ ಮಾತನ್ನು ಕೇಳಿದಾಗಲೂ ಆತನ ದೇಹದೆಡೆಗೆ ನಮ್ಮ ಗಮನವೇ ಇಲ್ಲ. ಆ ರೀತಿ ಯಲ್ಲಿ ಆತ ಕುಳಿತೆಡೆ ದೇವಾಲಯವಾಯಿತು. ಹೆಜ್ಜೆ ಇಟ್ಟೆಡೆ ಪವಿತ್ರ ವಾಯಿತು.''

"ಆತನ ಸಾವಿನಲ್ಲಿಯೂ ಗಾಂಭೀರ್ಯವಿದೆ. ಸೌಂದರ್ಯ ತುಂಬಿದೆ. ಆತನಿಗೂ ಆತನು ನಡೆಸಿದ ಜೀವನಕ್ಕೂ ಎಷ್ಟು ಯೋಗ್ಯವಾದ ಸಾವು! ಆ ಸಾವಿನಿಂದ ಆತನ ಆ[illegible] ಸಂದೇಶ ಅಥವಾ ಉಪದೇಶ ವೆಂಬುದು ಮತ್ತಷ್ಟು ರಂಜಕವ[illegible]ನ್ನು ಚೈತನ್ಯ ತುಂಬಿದ್ದಾಗಲೇ ಸರ್ವಾಂಗಸೌಷ್ಠವವಿದ್ದಾಗಲೇ ಆ[illegible]ಸಾನಪಡೆದನು. ಆತನಿಷ್ಟ ಪಡುತ್ತಿದ್ದಂತೆ ಪ್ರಾರ್ಥನಾ ಮುಹೂರ್ತದಲ್ಲಿಯೇ ಪ್ರಾಣತ್ಯಾಗಮಾಡಿ ದನು. ಆಜೀವಪರ್ಯಂತ ಲಕ್ಷ್ಯವಾಗಿಟ್ಟುಕೊಂಡು ದುಡಿದಿದ್ದ ಐಕ್ಯತೆ ಗಾಗಿ ಷಾಹಿದೀ ರೀತಿಯಲ್ಲಿ ಪ್ರಾಣತೆತ್ತನು. ಎಲ್ಲರೂ ಬಯಸಬೇಕಾದ ಬಗೆಯ ಆಕಸ್ಮಿಕ ಮರಣವನ್ನು ಪಡೆದನು. ಶರೀರವು ದುರ್ಬಲಗೊಂಡು ಕೃಶವಾಯಿತೆಂಬುದಿಲ್ಲ, ದೀರ್ಘಕಾಲ ಅಸ್ವಸ್ಥತೆಯಿಂದ ನರಳಲಿಲ್ಲ, ವೃದ್ಧಾ ಪ್ಯಕ್ಕೆ ಸಹಜವೆನಿಸುವ ದೃಷ್ಟಿಮಾಂದ್ಯವಿಲ್ಲ. ಆತನಿಗಾಗಿ ನಾವು ವ್ಯಸನ ಪಡಬೇಕೆಂಬುದೇಕೆ? ನಮ್ಮ ಸ್ಮರಣೆಯಲ್ಲಿ ನಿಲ್ಲುವ ಆತನ ರೂಪವಾದರೂ ಎಂತಹುದು! ಕೊನೆಯವರೆಗೂ ಬೆಳಕುತೋರಿದ ಪಾದಗಳನ್ನಿಡುತ್ತ ಸಾಂಕ್ರಾಮಿಕವಾದ ಮಂದಹಾಸವನ್ನು ಬೀರುತ್ತಾ ಕಣ್ಣುಗಳಲ್ಲಿ ತುಂಬು ನಗುವನ್ನು ಚೆಲ್ಲುತ್ತಿರುವ ಯಜಮಾನನ ಚಿತ್ರ. ದೈಹಿಕ ದೌರ್ಬಲ್ಯ ಕ್ಕಾಗಲೀ ಮಾನಸಿಕ ದೌರ್ಬಲ್ಯಕ್ಕಾಗಲೀ ಆತನ ಬಳಿ ಸ್ವಲ್ಪವಾದರೂ

ಎಡೆಯಿಲ್ಲ. ಪೂರ್ಣ ವಿಕಾಸಪಡೆದ ಚೈತನ್ಯದಿಂದ ಆಯುಸ್ಸನ್ನು ನಡೆಸಿ ಹಾಗೆಯೇ ಮೃತಿಹೊಂದಿದಾತನ ಚಿತ್ರ ನಮ್ಮ ಮನಸ್ಸುಗಳಲ್ಲಿ ಮಾತ್ರ ವಲ್ಲದೆ ನಮ್ಮ ಸಮಕಾಲೀಕರೆಲ್ಲರ ಮನಸ್ಸುಗಳಲ್ಲಿಯೂ ಅಚ್ಚಳಿಯದೆ ನಿಲ್ಲುವುದು."

"ಎಂದೆಂದಿಗೂ ಮಾಸದೆ ಆತನ ಚಿತ್ರ ನಮ್ಮ ಮನಸ್ಸುಗಳಲ್ಲಿ ಚಿರಸ್ಥಾಯಿಯಾಗಿರುವುದು ಮಾತ್ರವಲ್ಲ. ಅದಕ್ಕಿಂತ ಹೆಚ್ಚಿನದನ್ನು ಆತನು ಸಾಧಿಸಿದನು. ನಮ್ಮೆಲ್ಲರ ಅಂತರಂಗಗಳಲ್ಲಿಯೂ ಚೈತನ್ಯ ಗಳಲ್ಲಿಯೂ ಆತನು ಪ್ರವೇಶಿಸಿ ಅವುಗಳನ್ನು ಶುದ್ಧಿಗೊಳಿಸಿ ತೇಜೋವಂತ ವನ್ನಾಗಿ ರೂಪಿಸಿದನು. ಗಾಂಧೀಜಿಯ ಸಮಕಾಲೀಕರೆಂಬುವರು ಕಾಲಗತಿ ಯಲ್ಲಿ ಅದೃಶ್ಯರಾದರು. ಆದರೆ ಆ ಚೈತನ್ಯವು ಹಾಗೆಯೇ ಉಳಿಯುವುದು, ತಲೆತಲಾಂತರಗಳ ಮೇಲೆ ಆ ಮಹಿಮೆ ಬೀರುವುದು. ಏಕೆಂದರೆ ಆತನಿತ್ತ ಚೈತನ್ಯ ಭಾರತದೇಶದ ಚೈತನ್ಯದ ಅಂಗವಾಗಿ ಪರಿಣಮಿಸಿದೆ. ನಮ್ಮ ಚೈತನ್ಯ ಬಲಗುಂದಿದ್ದ ಕಾಲಕೆ ಸರಿಯಾಗಿ ಬಾಪು ಕಾಣಿಸಿಕೊಂಡು ನಮ್ಮ ಚೈತನ್ಯಕ್ಕೆ ಬಲವನ್ನಿತ್ತು ಬಿಡನು. ಆತನಿತ್ತ ಬಲ ಒಂದು ಸಮಯಕ್ಕಲ್ಲ, ಒಂದು ದಿನ ಅಥವಾ ಒಂದು ವರ್ಷಕ್ಕಲ್ಲ; ಆ ಬಲ ನಮ್ಮ ರಾಷ್ಟ್ರನಿಧಿಯ ಭಾಗವಾಗಿದೆ."

ಮಹಾತ್ಮಾ ಗಾಂಧಿಯವರ ಮರಣದಿಂದ ಭಾರತದ ಚರಿತ್ರೆಯ ಒಂದು ಯುಗ— ನಿಷ್ಕಾಮಕರ್ಮದ ಧಾರ್ಮಿಕ ಯುಗ— ಕಳೆಯಿತು. ಜೀವನದಲ್ಲಿ ಉತ್ತಮಾಂಶಗಳೇನು ಸ್ವಾತಂತ್ರ್ಯವೆಂದರೇನು ಮಾನವನ ಹಕ್ಕುಬಾಧ್ಯತೆಗಳೇನು ಇವನ್ನು ಅವನು ಸಂಪಾದಿಸುವ ಬಗೆ ಹೇಗೆ ಅವನು ಪ್ರಪಂಚದ ಇತರ ಜನಾಂಗಗಳ ಪ್ರಜೆಗಳಿಗೆ ಸರಿಸಮನಾಗಿ ನಿಂತು ತನ್ನ ವ್ಯಕ್ತಿತ್ವವನ್ನೂ ಸಂಸ್ಕೃತಿಯನ್ನೂ ಮೆರೆದು ಗೌರವವನ್ನು ಪಡೆಯುವುದು ಹೇಗೆ, ಒಂದು ಜನಾಂಗ ಹೇಗೆ ಮುಂದೆ ಬಂದೀತು— ಮೊದಲಾದ ಸಮಸ್ಯೆಗಳನ್ನು ತಮ್ಮದೇ ಆದ ಒಂದು ಸತ್ಯ ಅಹಿಂಸಾಮಾರ್ಗದಿಂದ ಬಿಡಿಸಿ ಉನ್ನತಿಯ ಮಾರ್ಗವನ್ನು ತೋರಿದವರು ಅವರು. ಅಂತಹವರು ಪ್ರಪಂಚದಲ್ಲಿ ಹುಟ್ಟುವುದೇ ಅಪೂರ್ವ. ಅಂತಹ ಸತ್ಪುರುಷರನ್ನು ಪಡೆದದ್ದು ಭಾರತದ ಪುಣ್ಯ. ಅದರ ಜನತೆಯ ಪುಣ್ಯ. ಅವರು ಕಣ್ಮರೆ

ಯಾಗುತ್ತಲೇ ನೆಹರೂರವರ ಮೇಲೆ ಹೆಚ್ಚು ಭಾರ ಬಿದ್ದಂತಾಯಿತು. ಗಾಂಧಿಯವರು ಹಾಕಿದ ಅಸ್ತಿಭಾರದ ಮೇಲೆ ಕಟ್ಟಡವನ್ನು ಕಟ್ಟುವ ಭಾರ ನೆಹರೂರವರ ಮೇಲೆ ಬಿದ್ದಿತು. ಭಾರತದ ಜನತೆಯ ಏಳಿಗೆಯೇ ಗುರಿಯಾಗಿ ದುಡಿಯುತ್ತಿದ್ದ ಮಹಾತ್ಮರ ದಾರಿಯಲ್ಲಿ ನೆಹರೂರವರೂ ಅದೇ ಸಾಧನೆಗಾಗಿಯೇ ದುಡಿಯುತ್ತಿದ್ದಾರೆ. ಹಾಗೇ ದಿನ ದಿನಕ್ಕೆ ಯಶಸ್ವಿಯೂ ಆಗುತ್ತಿದ್ದಾರೆ.

ಮಹಾತ್ಮಾ ಗಾಂಧಿ-ನೆಹರೂರವರ ಬಾಂಧವ್ಯ ಕೃಷ್ಣ ಅರ್ಜುನರ ಸಂಬಂಧಕ್ಕೆ ಸಮನಾದುದು. ಕೃಷ್ಣನಂತೆ ಗಾಂಧಿಯವರು ಧರ್ಮತತ್ತ್ವಗಳನ್ನು ನಿರೂಪಿಸಿದರು. ಅವರ ಬೋಧೆಯೇ ನೆಹರೂರವರಿಗೆ ಗೀತಾ ಬೋಧೆಯಾಯಿತು. ಗಾಂಧಿಯವರದು ಕಟ್ಟಾಜ್ಞೆಯಲ್ಲ. ಕೃಷ್ಣ "ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು"—ಎಂದು ಹೇಳಿದಂತೆ ನೆಹರೂರವರಿಗೆ ತಾವು ಹೇಳಿದುದನ್ನು ವಿಮರ್ಶೆಮಾಡಿದ ಮೇಲೆಯೇ ಅದನ್ನು ಒಪ್ಪಿಕೊಳ್ಳುವಂತೆ ಹೇಳಿದರು. ಕಾಂಗ್ರೆಸ್ಸಿಗೆ ದೂರದಲ್ಲಿದ್ದು ಜವಾಹಿರರಿಂದ ಕೆಲಸಮಾಡಿಸಿದರು. ವಾಸ್ತವವಾಗಿ ಕಾಂಗ್ರೆಸ್ ಪ್ರಾಂತ ಪ್ರಮುಖರು ಗಾಂಧಿಯವರನ್ನು ಅಧ್ಯಕ್ಷರನ್ನಾಗಿ ಆರಿಸಿದ್ದರೂ ಅವರು ಅದನ್ನು ಒಪ್ಪದೆ ಕೇವಲ ೪೦ ವರ್ಷದವರಾಗಿದ್ದ ನೆಹರೂರವರನ್ನು ಕಾಂಗ್ರೆಸ್ ಅಧ್ಯಕ್ಷ ಪದವಿಗೇರಿಸಿದರು. ಕೆಲಸದಲ್ಲಿ ತೊಡಗುವಂತೆ ಮಾಡಿದರು. ಅಂತಹ ಕೆಲಸದಿಂದ ಭಾರತಕ್ಕೆ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟರು. ಇಂತಹ ಮಹಾತ್ಮರಿಗೆ ಭಾರತದೇಶ ಎಷ್ಟು ಋಣಿಯಾಗಿದೆ ಎಂಬುದನ್ನು ವಿವರಿಸುವುದು ಸಾಧ್ಯವಿಲ್ಲ. ಅದು ಮಾತಿಗೆ ಮೀರಿದುದು.

## ೬. ಸಾಹಿತಿ ನೆಹರು

ನಿತ್ಯಜೀವನದಲ್ಲಿ ನೆಹರೂರವರು ವಿರಾಮವೆಂಬುದನ್ನೇ ಕಾಣರು. ಯೋಚಿಸುವುದಕ್ಕಾಗಲೀ ಬರೆಯುವುದಕ್ಕಾಗಲೀ ಅವರಿಗೆ ಪುರಸೊತ್ತಿಲ್ಲ. ಪ್ರತಿದಿನವೂ ಅವರಿಗೆ ಸಾವಿರಾರು ಕಾಗದಗಳು ಬರುತ್ತಿರುತ್ತವೆ. ಅವರ ಕಾರ್ಯದರ್ಶಿಗಳು ಎಷ್ಟೋ ಕಾಗದಗಳನ್ನು ಅವರ ಗಮನಕ್ಕೆ ತರದೇ ಇದ್ದರೂ ಅವರ ಸ್ವಂತ ಸ್ನೇಹಿತರು, ರಾಜಕಾರಿಣಿಗಳು ವಿಪುಲವಾಗಿರುವುದರಿಂದಲೂ ಪ್ರಪಂಚದ ಮೂಲೆ ಮೂಲೆಗಳಿಂದ ಅವರಿಗೆ ಕಾಗದಗಳು ಬರುವುದರಿಂದಲೂ ಅವರೇ ನೋಡಬೇಕಾದ, ಉತ್ತರ ಬರೆಯಬೇಕಾದ ಕಾಗದಗಳು ತುಂಬಾ ಇರುತ್ತವೆ. ಭಾರತದಂತಹ ದೊಡ್ಡ ದೇಶಕ್ಕೆ ವಿದೇಶಾಂಗ ಮಂತ್ರಿಯಾಗಿರುವುದರಿಂದ ವಿವಿಧ ದೇಶದ ಸರ್ಕಾರಗಳ ಮತ್ತು ಮಂತ್ರಿಮಂಡಲಗಳ ವರ್ತುಲಗಳಿಂದ ಪತ್ರವ್ಯವಹಾರವು ನಡೆದಿರುತ್ತದೆ. ಭಾರತಕ್ಕೆ ಮಹಾಪ್ರಧಾನಿಯಾದುದರಿಂದ ಪ್ರಾಂತ ಮಂತ್ರಿಮಂಡಲದ ಮಟ್ಟದಲ್ಲಿ ಇತ್ಯರ್ಥವಾಗಬೇಕಾದ ವಿಷಯಗಳೂ ಎಷ್ಟೋ ಇರುತ್ತವೆ. ಜೊತೆಗೆ ಕಚೇರಿಯ ಕಾಗದಗಳು ಬೇರೆ. ಸಾಲದುದಕ್ಕೆ ಯಾವಾಗಲೂ ಯಾರಾದರೂ ರಾಜ ಅತಿಥಿಗಳೋ, ಹೊರ ರಾಷ್ಟ್ರಗಳ ನಾಯಕರ ಭೇಟಿಯೋ ಕಾದಿರುತ್ತದೆ. ಈಚೆಗಂತೂ ಅವರುಗಳ ಓಡಾಟ ವಿಚಾರವಿನಿಮಯ ಜಾಸ್ತಿಯಾಗಿದೆ. ಸಂಜೆಹೊತ್ತಿನಲ್ಲಿ ಉಪನ್ಯಾಸಗಳು. ಅಧ್ಯಕ್ಷ ಭಾಷಣಗಳು ಅಥವಾ ವಿವಿಧ ದೇಶದ ಪ್ರತಿನಿಧಿಗಳ ಊಟ ಉಪಚಾರಗಳು—ಹೀಗೆ ಏನಾದರೊಂದು ಕಾದಿರುತ್ತದೆ. ಈ ಕೆಲಸಗಳಲ್ಲಿ ನೆಹರೂರವರಿಗೆ ಓದುವುದಕ್ಕಾಗಲೀ, ಚಿಂತನೆಮಾಡುವುದಕ್ಕಾಗಲೀ ವಿರಾಮವೆಲ್ಲಿ?

ಹಾಗೆಂದು ನೆಹರೂರವರು ಓದದೆ, ಬರೆಯದೆ ಇಲ್ಲ. ಹೊಸ ಪುಸ್ತಕವೋ, ಹೊಸದಾದ ಯಾವುದಾದರೂ ವಿಷಯವನ್ನು ತಿಳಿಯಹೇಳುವ ಉದ್ಗ್ರಂಥವೋ ಪ್ರಕಟವಾದರೆ ಅದನ್ನು ನೆಹರೂರವರು ಓದದೆ ಇರುವುದಿಲ್ಲ. ರಾತ್ರಿ ಸುಮಾರು ಹನ್ನೆರಡು ಘಂಟೆಯ ಮೇಲೆ ಒಂದು ಘಂಟೆಯ ಒಳಗೆ—ಅವರು ಅವುಗಳನ್ನು ಓದುವ ಕಾಲ. ಅವರು ಐದು ಘಂಟೆಗಿಂತ



ವಿಶ್ವವಿದ್ಯಾಲಯದ ಉಡುಪಿನಲ್ಲಿ ನೆಹರು

ಹೆಚ್ಚಾಗಿ ನಿದ್ದೆಮಾಡುವುದಿಲ್ಲ. ಬೆಳಗ್ಗೆ ಆರಕ್ಕೆ ಎದ್ದು ಶೀರ್ಷಾಸನವನ್ನು ಮಾಡಿ, ಉಪಾಹಾರ ತೆಗೆದುಕೊಂಡು, ಬೆಳಗಿನ ವೃತ್ತಪತ್ರಿಕೆಗಳ ಮೇಲೆ ಕಣ್ಣಾಡಿಸಿ, ಬಂದ ಕಾಗದಗಳಿಗೆ ಉತ್ತರವಾಗಿ ಮರುಕಾಗದವನ್ನೋ ಟೆಲಿಗ್ರಾಮುಗಳನ್ನೋ ಕೊಡುತ್ತಾರೆ. ಆಮೇಲೆ ಕಚೇರಿಯ ಕೆಲಸ. ಮಧ್ಯಾಹ್ನದ ಊಟವಾದಮೇಲೆ ಒಂದು ಘಂಟೆ ವಿರಾಮ— ಇದೂ ಅನೇಕ ದಿನ ಸಿಗುವುದಿಲ್ಲ. ತಿರುಗಿ ಕಚೇರಿ ಕೆಲಸ. ಸಂಜೆ ಉಪನ್ಯಾಸ ಅಥವಾ ಯಾವುದಾದರೂ 'ಟೀ' ಪಾರ್ಟಿ. ಅದಾಗಿ ತಿರುಗಿ ಕೆಲಸಕ್ಕೆ ಕುಳಿತರೆಂದರೆ ತಿರುಗಿ ೧೨ ಘಂಟೆಯುವರೆಗೆ ಕಚೇರಿಯ ಕೆಲಸ. ೧೨ರಿಂದ ೧ರವರೆಗೆ ಓದು. ಆಮೇಲೆ ನಿದ್ದೆಗೆ ಪ್ರಯತ್ನ. ಹೀಗೆ ಅವರ ಕಾರ್ಯಕ್ರಮ ಗಡಿಯಾರದ ಹಾಗೆ ಬಿಡುವಿಲ್ಲದೆ ನಡೆಯುತ್ತಿರುತ್ತದೆ. ನೆಹರೂರವರ ಈ ಬಿಡುವಿಲ್ಲದ ಕೆಲಸದ ವಿಷಯ ಎಲ್ಲರಿಗೂ ಗೊತ್ತು. ವಿಶ್ರಾಂತಿಯನ್ನು ತೆಗೆದುಕೊಳ್ಳಿ—ಎಂದು ಹೇಳಲು ಎಲ್ಲರೂ ಇಷ್ಟಪಡುತ್ತಾರೆ. ನಮ್ಮ ನಾವಿಕರಿಗೆ ಒಮ್ಮೆ ಹಾಗೆ ಹೇಳುವ ಸುಯೋಗ ಒದಗಿತು. ಸಮಭಾಜಕ ವೃತ್ತವನ್ನು ದಾಟುವಾಗ ಹಡಗಿನ ನಾವಿಕರು 'ವರುಣೋತ್ಸವ'ವನ್ನು ನಡೆಸುವ ಪದ್ಧತಿ. ಆಗ ಯಾರಾದರೊಬ್ಬರು ವರುಣದೇವನಂತೆ ವೇಷ ಹಾಕಿಕೊಂಡು ದರ್ಬಾರು ನಡೆಸಿ ಬಹುಮಾನಗಳನ್ನು ಕೊಡುವುದೋ ಅಥವಾ ದಂಡನೆ ವಿಧಿಸುವುದೋ ಪದ್ಧತಿ. ಜವಾಹಿರಲಾಲರಿದ್ದ ಹಡಗಿಗೆ ಅಂತಹ ಸಂದರ್ಭ ಒದಗಿತು. ಆಗ ವರುಣದೇವ ನೆಹರೂರವರನ್ನು ಅಪರಾಧಿಸ್ಥಾನದಲ್ಲಿ ನಿಲ್ಲಿಸಿ 'ನೀನು ತಪ್ಪನ್ನು ಮಾಡಿದ್ದಿ! ವಿಶ್ರಾಂತಿಯಿಲ್ಲದೆ ಅತಿಯಾಗಿ ದುಡಿಯುತ್ತಿದ್ದಿ! ಒಂದು ವಾರ ಯಾವ ಕೆಲಸವನ್ನೂ ಇಟ್ಟುಕೊಳ್ಳದೆ ನೀನು ವಿಶ್ರಾಂತಿ ಶಿಕ್ಷೆಯನ್ನನುಭವಿಸತಕ್ಕದ್ದು'— ಎಂದು ಅಪ್ಪಣೆ ಕೊಡಿಸಿದನು. ದೇಶದ ಜನರ ಮನಸ್ಸಿನಲ್ಲಿದ್ದುದನ್ನು ಹಾಗೆ ಹೇಳುವ ಸಂದರ್ಭ ಒದಗಿದುದು ಆ ನಾವಿಕರ ಪುಣ್ಯ.

ಎಂದಾದರೂ ಸಂಜೆ ಯಾವ ಸಭೆ ಸಮಾರಂಭಗಳೂ ಇಲ್ಲದಿದ್ದರೆ ಆಗ ನೆಹರೂರವರು ಇಂದಿರೆಯೊಡನೆಯೂ ಅವಳ ಇಬ್ಬರು ಮಕ್ಕಳೊಡನೆಯೂ ಆಟವಾಡಿಕೊಂಡಿರುತ್ತಾರೆ. ನೆಹರೂರವರಿಗೆ ಮಕ್ಕಳೆಂದರೆ ಬಹು ಪ್ರೀತಿ. ಅವರ ಮೊಮ್ಮಕ್ಕಳನ್ನು ಬೆನ್ನಮೇಲೆ ಕೂಡಿಸಿಕೊಂಡು

ಅವರು ಕೈಕಾಲುಗಳನ್ನೂರಿ ನಡೆಯುತ್ತಾ ಅವರಿಗೆ ಕುದುರೆ ಸವಾರಿ ಮಾಡಿಸುವರು. ಮಕ್ಕಳೊಡನೆ ಮಕ್ಕಳಹಾಗೇ ಆಟವಾಡುವರು. ಆಗ ಯಾರಾದರೂ ಅವರನ್ನು ನೋಡಿದರೆ ಜಗದ್ರಾಜಕಾರಿಣಿಯೆಂದು ಅವರನು ನಂಬುವುದೇ ಇಲ್ಲ. ಅವರ ಮಕ್ಕಳ ಪ್ರೀತಿ ಎಷ್ಟರವರೆಗೆ ಹೋಗಿದೆಯೆಂದರೆ, ಈಗ ಭಾರತದಾದ್ಯಂತ ಮಕ್ಕಳ ಸಂಘಗಳು ಪ್ರಾರಂಭವಾಗಿ ಅವುಗಳ ಚಟುವಟಿಕೆಗಳು ತುಂಬಾ ಹೆಚ್ಚಾಗುತ್ತಾ ಬಂದಿವೆ. 'ಬಾಲ್ಕಂಜಿಬಾರಿ'—ಎಂಬ ಮಕ್ಕಳ ಸಂಸ್ಥೆ ದೇಶದಾದ್ಯಂತ ಅಂಗಸಂಸ್ಥೆಗಳನ್ನು ಹೊಂದಿ ಕೆಲಸಮಾಡುತ್ತಿದೆ. ಅವರ ಈ ಮಕ್ಕಳಮೇಲಿನ ಅಭಿಮಾನ ಬಹು ದೂರದೃಷ್ಟಿಯದು. ಈ ಮಕ್ಕಳು ನಾಳಿನ ಪ್ರಜೆಗಳು ತಾನೇ. ಅವರನ್ನು ಸಂತೋಷವಾಗಿಟ್ಟಿರಬೇಕು. ಅವರಲ್ಲಿ ಸುಪ್ತವಾಗಿರುವ ಕಲೆಗಾರಿಕೆಯನ್ನು ಪ್ರಕಾಶಪಡಿಸಬೇಕು, ಸನ್ಮಾರ್ಗದಲ್ಲಿ ಅವರು ನಡೆಯುವಂತೆ ಮಾಡಬೇಕು, ಮುಂದೆ ಅವರು ಸತ್ಪ್ರಜೆಗಳಾಗಬೇಕು—ಇದು ಅವರ ಆಶಯ. ಇದರ ಸಾಧನೆಗೆ ಅವರು ತುಂಬಾ ಉತ್ತೇಜನ ಕೊಡುತ್ತಿದ್ದಾರೆ.

ಹೀಗೆ ಬೆಳಗಿನಿಂದ ಸಂಜೆಯವರೆಗೂ ಬಿಡುವಿಲ್ಲದಿರುವಾಗ ನೆಹರೂರವರು ಸಾಹಿತ್ಯದ ಕಡೆ ಹೇಗೆ ಗಮನಕೊಟ್ಟಾರೆಂದು ಕೇಳಬಹುದು. ಆದರೆ ಸಾಹಿತಿ ತನ್ನ ಮನಸ್ಸನ್ನು ತಡೆಹಿಡಿದಿರಲಾದೀತೆ? ಸಾಹಿತ್ಯ ಸೃಷ್ಟಿಯಾಗಬೇಕಾದರೆ ಚಿಂತನೆ ಆವಶ್ಯಕವಷ್ಟೆ. ನೆಹರೂರವರಿಗೆ ಅದಕ್ಕೆ ಕಾಲ ರೈಲು ಪ್ರಯಾಣಮಾಡುವಾಗ ಅಥವಾ ಏರೋಪ್ಲೇನಿನಲ್ಲಿ ಸಂಚರಿಸುವಾಗ ಮಾತ್ರ. ಅವರ ಪ್ರಸಿದ್ಧವಾದ ಪುಸ್ತಕಗಳು ಮೂರು, 'ಆತ್ಮಕತೆ', 'ಮಗಳಿಗೆ ತಂದೆ ಬರೆದ ಓಲೆಗಳು' ಎಂಬ 'ಪ್ರಪಂಚದ ಚರಿತ್ರೆಯ ಕೆಲವು ನೋಟಗಳು' ಮತ್ತು 'ಭಾರತದ ಪುನರ್ದರ್ಶನ'. ಈ ಒಂದೊಂದು ಪುಸ್ತಕವೂ ಪ್ರಪಂಚದ ಸಾಹಿತಿಗಳ ಗುಂಪಿನಲ್ಲಿ ನೆಹರೂರವರನ್ನು ಸೇರಿಸಬಲ್ಲುದಾಗಿವೆ. ಇವನ್ನು ಅವರು ಬರೆದುದು ಜೈಲುವಾಸದಲ್ಲಿದ್ದಾಗ. ಬಾಲ್ಯದಿಂದಲೂ ನೆಹರೂರವರು ಅತಿಯಾದ ಓದುಗಾರರು. ಅವರು ಓದಿ ಜೀರ್ಣಿಸಿಕೊಂಡಿದ್ದ ವಿಷಯಗಳನ್ನು ಜೈಲುವಾಸದ ಬಿಡುವಿನಲ್ಲಿ ತಮ್ಮದೇ ಆದ ವಿಶಿಷ್ಟ ಅಭಿಪ್ರಾಯಗಳೊಡನೆ 'ಜಗತ್ಕಥಾವಲ್ಲಿರಿ'ಯಲ್ಲಿ ಬರೆದಿಟ್ಟರು. ಹಾಗೇ ಅವರ ಜೀವನದ ಸಂಗತಿಗಳು ನೆನಪಿಗೆ ಬಂದುವು. ಅವರ ಜೀವನ

ತೆರೆದಿಟ್ಟ ಪುಸ್ತಕದಂತೆ. ಅದರಲ್ಲಿ ಗುಟ್ಟಾಗಿಟ್ಟಿರಬೇಕಾದಂತಹುದೇನೂ ಇಲ್ಲ. ಭಾರತದ ರಾಜಕೀಯದ ಹಿನ್ನೆಲೆಯಲ್ಲಿ ತಮ್ಮ ಜೀವನವನ್ನು ತಾವೇ ವಿಮರ್ಶಿಸಿಕೊಂಡು ಆತ್ಮಕತೆಯನ್ನು ಬರೆದರು. ಇನ್ನೊಂದು ಜೈಲಿನಲ್ಲಿದ್ದಾಗ ಭಾರತವನ್ನೆಲ್ಲಾ ಪ್ರವಾಸಮಾಡಿದಾಗ ಹೊಳೆದ ಹೊಸ ಭಾವಗಳನ್ನು ಬರೆದಿಟ್ಟರು. ಅವರು ಓದಿ ತಿಳಿದಿದ್ದ ವಿಷಯಗಳ ಹಿನ್ನೆಲೆ ಯಲ್ಲಿ ಭಾರತವನ್ನು ಕಂಡಾಗ ಭಾರತ ತನ್ನ ಗತವೈಭವದ ಹೊಸ ಬೆಳಕನ್ನು ಚೆಲ್ಲಿತು. ಆ ಹಿಂದಿನ ವೈಭವದ ದಿನಗಳು ಆ ಸುಸಂಸ್ಕೃತರಾದ ಜನ, ಅವರ ತುಂಬುಜೀವನ, ಕಲಾಪೂರ್ಣವಾದ ನಾಗರೀಕತೆ, ಅವರ ಧ್ಯೇಯಸಾಧನೆಗಳು, ಎಲ್ಲ ಶಾಸ್ತ್ರಗಳಲ್ಲೂ ಪಡೆದ ನಿಪುಣತೆ—ಇವು ನೆಹರೂರವರ ಚಿತ್ತಭಿತ್ತಿಯ ಮುಂದೆ ಸುಳಿದುವು. ಯಾವ ಜನರ ಎಂತಹ ಜೀವನ ಒಂದು ಶಾಶ್ವತವಾದ ಅಚ್ಚಳಿಯದ ಸಂಸ್ಕೃತಿಯನ್ನು ಭಾರತಕ್ಕೆ ತಂದುಕೊಟ್ಟಿತೋ ಆ ಜನ, ಜೀವನ ನೆಹರೂರವರ ಕಣ್ಣಮುಂದೆ ಬಂದು ನಿಂತಿತು. ಬುದ್ಧನು ಧರ್ಮವನ್ನು ಸಾರಿದ ಸಾರನಾಥಕ್ಕೆ ಹೋದಾಗ ಅದೇ ಬುದ್ಧ ಈಗ ೨,೫೦೦ ವರ್ಷಗಳಾದ ಮೇಲೆ ಧರ್ಮವನ್ನು ಬೋಧಿಸುತ್ತಿರುವಂತೆ ಭಾಸವಾಯಿತು. ಅಶೋಕನ ಸ್ತಂಭಗಳನ್ನೂ ಶಿಲಾ ಶಾಸನಗಳನ್ನೂ ಕಂಡಾಗ ಆ ಚಕ್ರವರ್ತಿಯ ಚಕ್ರವರ್ತಿತನವನ್ನು ಮೀರಿದ ಭವ್ಯತೇಜಸ್ಸು ಮನಸ್ಸಿನ ಮುಂದೆ ಸುಳಿಯಿತು. ಫತೇಪುರ ಸಿಕ್ರಿ ಊರನ್ನು ಕಂಡಾಗ ಸಾಮ್ರಾಟ ಅಕ್ಬರನು ತನ್ನ ಸಾಮ್ರಾಟತ್ವವನ್ನು ಮರೆತು ಸಕಲ ಮತಗಳ ಸಮನ್ವಯ ಮಾಡುವ ಕಾರ್ಯದಲ್ಲಿ ತೊಡಗಿ, ಮಾನವನ ಬಗೆಹರಿಯದ ಸಮಸ್ಯೆಗಳನ್ನು ಪರಿಹಾರಮಾಡುತ್ತಿರುವಂತೆ ತೋರಿತು. ಹೀಗೆ ಭಾರತದ ಏರುಪೇರುಗಳೂ ಸೋಲು ಗೆಲುವುಗಳೂ ಕವಿಯ ಪ್ರತಿಭೆಗೆ ನಿಲುಕುವಂತೆ, ನೆಹರೂರವರ ಭಾವನಾಲೋಕದಲ್ಲಿ ಕಾಣಿಸಿಕೊಂಡುವು. ಅವರು ಅದನ್ನು 'ಭಾರತದ ಪುನರ್ದರ್ಶನ' ದಲ್ಲಿ ಬರೆದರು. ಇದು ನೆಹರೂರವರ ಗ್ರಂಥಗಳಲ್ಲೆಲ್ಲಾ ಅತ್ಯುತ್ತಮವಾದುದು. ಈ ಗ್ರಂಥದಲ್ಲಿ ನಾವು ಭಾರತದ ಪುನರ್ದರ್ಶನವನ್ನು ಮಾತ್ರವಲ್ಲ, ನೆಹರೂರವರ ಪುನರ್ದರ್ಶನವನ್ನೂ ಮಾಡುತ್ತೇವೆ. ಅವರ ಪಾಂಡಿತ್ಯ, ಪ್ರತಿಭೆ, ಕಲಾಭಿಜ್ಞತೆ, ತಾಯ್ನಾಡ ಹೆಮ್ಮೆ—ಇವು ಹಿಂದೆಂದೂ ಪ್ರದರ್ಶಿತವಾಗ

ದಷ್ಟು ಇಲ್ಲಿ ಪ್ರತಿಫಲಿತವಾಗಿವೆ. ಬಾಲಗಂಗಾಧರ ತಿಲಕ್, ಅರವಿಂದ ಘೋಷ್, ಮಹಾತ್ಮಾ ಗಾಂಧಿಯವರಂತೆಯೇ ನೆಹರೂರವರೂ ಸಹ ಜೈಲುವಾಸದ ವಿರಾಮವನ್ನು ಸದುಪಯೋಗಪಡಿಸಿಕೊಂಡು ಮಹಾಗ್ರಂಥ ಗಳನ್ನು ಬರೆದು ಲೋಕಕ್ಕೆ ತುಂಬಾ ಉಪಕಾರಮಾಡಿದ್ದಾರೆ.

ಜವಾಹಿರಲಾಲರ ಶೈಲಿ ಸರಳವಾದುದು. ಪದಗಳನ್ನು ತೂಕಮಾಡಿ ಹಾಕುವಂತೆ ಬರೆಯುತ್ತಾರೆ. ಭಾವಗಳು ತೊಡಕಿಲ್ಲದಂತೆ ನಿರೂಪಿತವಾಗು ತ್ತವೆ. ಮಾತುಗಳು ನಿರರ್ಗಳವಾದ ಪ್ರವಾಹದ ಹಾಗೆ ಹರಿಯುತ್ತವೆ. ತೆರೆದ ಮನಸ್ಸಿನಿಂದ ಬರುವ ವಾಕ್ಯಗಳು ನೇರವಾಗಿ ಹೃದಯವನ್ನು ಹೊಗುತ್ತವೆ. ನೆಹರೂರವರು ಭಾವುಕರೂ ಅಹುದು. ಭಾವಾವೇಶದಲ್ಲಿ ಅವರು ಬರೆಯುವ ಮಾತುಗಳು ಗಂಭೀರವಾಗಿ ಭಾವಪೂರ್ಣವಾಗಿ ಓದುಗರ ಮನಸ್ಸನ್ನು ಕಲಕುತ್ತವೆ. ಆತ್ಮಕತೆಯಲ್ಲಿ ಬರುವ ಸೆರೆಮನೆಯ ಜೀವನವೋ, ಹಿಮಾಲಯದ ವರ್ಣನೆಯೋ, ಭಾರತದ ಪುನರ್ದರ್ಶನದಲ್ಲಿ ಬರುವ ಕಮಲಾದೇವಿಯ ವರ್ಣನೆಯೋ, ಗಾಂಧಿಯವರು ಸತ್ತಾಗ ಹರಿಜನ ಪತ್ರಿಕೆಯಲ್ಲಿ ಬರೆದ ಅಗ್ರಲೇಖನವೋ — ಒಂದೊಂದೂ ಒಂದೊಂದು ಆಣಿಮುತ್ತುಗಳು. ಅವನ್ನು ಉದಾಹರಿಸುವುದಕ್ಕೆ ಇಲ್ಲಿ ಸ್ಥಳವಿಲ್ಲ.

ಈ ಮೇಲಿನ ಮೂರು ಗ್ರಂಥಗಳನ್ನಲ್ಲದೆ ಜವಾಹಿರರು ಸಾವಿರಾರು ಸಣ್ಣಪುಟ್ಟ ಲೇಖನಗಳನ್ನು ಬರೆದಿದ್ದಾರೆ. ಮೋತೀಲಾಲ ನೆಹರೂರವರು ಸಿ. ವೈ. ಚಿಂತಾಮಣಿಯವರ 'ಲೀಡರ್' ಪತ್ರಿಕೆಯ ವಿರುದ್ಧವಾಗಿ 'ಇಂಡಿಪೆಂಡೆಂಟ್' ಎಂಬ ಇಂಗ್ಲಿಷ್ ಪತ್ರಿಕೆಯನ್ನು ಷುರುಮಾಡಿದಾಗ ಅದಕ್ಕೆ ಅನೇಕ ಲೇಖನಗಳನ್ನು ಬರೆದರು. ಸ್ವಾತಂತ್ರ್ಯಸಮರದ ಕಾಲದಲ್ಲಿ ಅವರು ಲಕ್ನೋದ 'ನ್ಯಾಷನಲ್ ಹೆರಾಲ್ಡ್' ಪತ್ರಿಕೆಗೆ ಆಗಾಗ ಲೇಖನ ಗಳನ್ನು ಕಳುಹಿಸುತ್ತಿದ್ದರು. ಇವಲ್ಲದೆ ಎಲ್ಲ ಪತ್ರಿಕೆಗಳಲ್ಲೂ ಪ್ರಕಟ ವಾಗುವ ಹಾಗೆ ಕಾಂಗ್ರೆಸ್ ಕೆಲಸಗಳ ಬಗ್ಗೆ ಆಗಾಗ ಬರೆಯುತ್ತಿದ್ದರು. ಈಚೆಗೆ ಮಹಾ ಪ್ರಧಾನಿಯಾದ ಮೇಲಂತೂ ಅವರ ಲೇಖನಗಳು, ಉಪನ್ಯಾಸಗಳು, ಭಾಷಣಗಳು—ಎಲ್ಲಾ ಅವರಿಂದಲೇ ಬರೆಯಲ್ಪಟ್ಟವು —ಪ್ರಪಂಚದ ಎಲ್ಲ ಪತ್ರಿಕೆಗಳಲ್ಲೂ ಪ್ರಕಟವಾಗುತ್ತಿವೆ. ಈ ಒಂದೊಂದು

ಲೇಖನದಲ್ಲೂ ನಾವು ಒಂದೊಂದು ಹೊಸತನವನ್ನು ಕಾಣುತ್ತೇವೆ. ಅವಿರತ ವಾಗಿ, ಐವತ್ತು ವರ್ಷಗಳಿಂದ ಬರೆಯಲಾಗುತ್ತಿರುವ ಅವರ ಸಾಹಿತ್ಯ ಬಹು ಹೆಚ್ಚಾಗಿ ಬೆಳೆದಿದೆ. ಬಹಳತಃ ಅವು ಆಯಾಕಾಲದ ಸಮಸ್ಯೆಯ ಬಗ್ಗೆ ಬರೆದುವು. ನಾಲ್ಕು ದಿನ ನಿಲ್ಲುವ ಬರಹಗಳಲ್ಲ. ಆದರೂ ಆ ವಿಪುಲ ವಾದ ಬರವಣಿಗೆ ನೆಹರೂರವರ ವಿದ್ವತ್ಪೂರ್ಣವಾದ ಫಲವತ್ತಾದ ಮನಸ್ಸಿನ ಪರಿಚಯ ಮಾಡಿಕೊಡುವುದಾಗಿದೆ. ಇಂದಿನ ಪ್ರಪಂಚದ, ಸಾಹಿತ್ಯದಲ್ಲೂ ಹೆಸರಾಂತ, ರಾಜಕಾರಿಣಿಗಳಲ್ಲಿ ಬ್ರಿಟಿಷ್ ಪ್ರಧಾನಿ ಚರ್ಚಿಲ್ಲರನ್ನು ಬಿಟ್ಟರೆ ನೆಹರೂರವರಷ್ಟು ಬರೆದಿರುವವರು ಬೇರೆ ಯಾರೂ ಸಿಗಲಾರರು.

# ೭. ಭಾಷಣಕಾರ ನೆಹರು

ನೆಹರೂರವರು ಒಳ್ಳೆಯ ವಾಚಾಳಿಗಳು. ಲೋಕಾಭಿರಾಮವಾಗಿ ಮಾತನಾಡುತ್ತಲೇ ಕುಳಿತಿರಲಿ, ಭಾಷಣವನ್ನೇ ಮಾಡಲಿ, ಅವರು ಕೇಳುವವರ ಕಣ್ಮನಗಳನ್ನು ಸೆರೆಹಿಡಿದುಬಿಡುತ್ತಾರೆ. ನೆಹರೂರವರು ತುಂಬಾ ಓದಿದವರು, ವಿದ್ಯಾವಂತರು. ಮಾತನಾಡುವಾಗ ಎದುರು ಮಾತನಾಡುವವರ ಮನಸ್ಸಿನಲ್ಲಿರುವುದನ್ನು ಗ್ರಹಿಸಬಲ್ಲರು. ಅವರ ಅಭಿಪ್ರಾಯವನ್ನು ಬಹು ಬೇಗನೆ ಗ್ರಹಣಮಾಡಿ ಅದಕ್ಕೆ ಸರಿಯಾದ ಉತ್ತರ ಕೊಡುವರು. ಅವರಿಗೆ ತಿಳಿಯದ ವಿಷಯವಿಲ್ಲ. ಸಾಹಿತ್ಯ, ವಿಜ್ಞಾನ, ಕಲೆ—ಎಲ್ಲದರ ಬಗ್ಗೆಯೂ ಒಳ್ಳೆ ತಿಳಿವಳಿಕೆಯನ್ನು ಹೊಂದಿದ್ದಾರೆ. ಪ್ರಪಂಚ ವನ್ನೆಲ್ಲಾ ಹಲವಾರು ಸಲ ಸುತ್ತಿ ಬಂದಿರುವುದರಿಂದ ಪ್ರಪಂಚದ ವಿವಿಧ ಜನಾಂಗಗಳ ನಡೆನುಡಿ, ಆಚಾರ ವ್ಯವಹಾರ, ಸಂಸ್ಕೃತಿ ಇವುಗಳ ಪರಿಚಯ ಹೊಂದಿದ್ದಾರೆ. ಪೌರ್ವಾತ್ಯ ಪಾಶ್ಚಿಮಾತ್ಯ ರೀತಿ ನೀತಿ ಸಂಸ್ಕೃತಿ ನಾಗರಿಕತೆ ಗಳನ್ನು ತಿಳಿದಿದ್ದಾರೆ. ಅದರ ಸಹಾಯದಿಂದ ಮಾತನಾಡಲು ಬರುವವರು, ಸ್ವದೇಶದವರಾಗಲಿ ಪರದೇಶದವರಾಗಲಿ, ಯಾವ ಪ್ರಶ್ನೆಯನ್ನೇ ಹಾಕಲಿ, ಸಮರ್ಪಕವಾದ ಉತ್ತರ ಕೊಡುತ್ತಾರೆ. ಜೊತೆಗೆ ನೆಹರೂರವರು ಯಾವಾ ಗಲೂ ಝಳ ಝಳ, ಶುಭ್ರವಾಗಿರತಕ್ಕವರು. ಆಹಾರ ಪದಾರ್ಥ ಸಾಮಾನ್ಯವಾಗಿರಬಹುದು, ಆದರೆ ರುಚಿಗೂ ನೋಟಕ್ಕೂ ಅದು ಸೊಗಸಾ ಗಿರಬೇಕು. ಉಡುವ ಖದ್ದರ್ ಒರಟಾಗಿರಬಹುದು, ಆದರೂ ಅದು ಶುಭ್ರವಾಗಿದ್ದು ಉಡುವ ರೀತಿ ಸೊಗಸಾಗಿರಬೇಕು. ಗಾಂಧಿ ಟೋಪಿ ಯನ್ನು ಹಾಕುವ ರೀತಿಯೇ ಸಾಕು ದೃಷ್ಟಾಂತಕ್ಕೆ. ಅವರಲ್ಲಿ ಈ ಲಕ್ಷಣ ಬೆಡಗು ಬೀರುವ ಚೇಷ್ಟೆಯಲ್ಲ, ಅನಿವಾರ್ಯ ಜನ್ಮಲಕ್ಷಣ. ಅವರು ಜೀವನ ದಲ್ಲಿ ಸಂತೋಷವನ್ನು ಕಾಣುವವರು (optimist), ಹಾಸ್ಯವನ್ನು ತುಂಬು ವವರು, ಸೊಗಸನ್ನೂ ಸೌಂದರ್ಯವನ್ನೂ ತಂದಿಟ್ಟುಕೊಂಡು ಆನಂದಪಡ ತಕ್ಕವರು. ಈ ಶುಭ್ರತೆ, ಜೀವನದ ದೃಷ್ಟಿಗಳು ಎದುರಿನಲ್ಲಿರುವವರ ಮೇಲೆ ಒಳ್ಳೆ ಪರಿಣಾಮವನ್ನುಂಟುಮಾಡುತ್ತವೆ.




ರಷ್ಯಾ ಸ್ಟೇಡಿಯಂನಲ್ಲಿ ನೆಹರೂರವರು ಪಂಚಶೀಲವನ್ನು ಘೋಷಿಸುತ್ತಿರುವುದು

ನೆಹರೂರವರ ವ್ಯಕ್ತಿತ್ವ ತುಂಬಾ ಪ್ರಭಾವಶಾಲಿಯಾದುದು. ಅವರ ತೀಕ್ಷ್ಣವಾದ ಕಣ್ಣುಗಳು, ಸರಸವಾದ ಮಾತು, ಕಿರುನಗೆ, ಖಚಿತವಾಗಿ, ಕಡ್ಡಿ ಎರಡು ತುಂಡು ಮಾಡಿದಂತೆ, ಹೇಳುವ ಹಾಗೂ ಕೈ ಚಲನದಿಂದ ಸೂಚಿತವಾಗುವ ಖಂಡಿತವಾದಿತ್ವ, ಅದರಲ್ಲೂ ಒಂದು ನಯ—ಇವು ಮನಸ್ಸನ್ನು ಸೆರೆಹಿಡಿಯುತ್ತವೆ. ಅವರು ಬಹು ಬೇಗ ಕೋಪಗೊಳ್ಳುತ್ತಾರೆಂದು ಜನ ಹೇಳುತ್ತಾರೆ. ಅದು ನಿಜ. ಆದರೆ ಅದಕ್ಕೆ ನಿಜವಾದ ಕಾರಣವನ್ನು ಜನ ಗ್ರಹಿಸಿಲ್ಲ. ಈಗ ಯಾರಾದರೂ ಅವರೊಡನೆ ಮಾತನಾಡುತ್ತಿದ್ದಾರೆಂದುಕೊಳ್ಳೋಣ. ಏನೋ ಹೇಳುತ್ತಾರೆ. ನೆಹರೂರವರು ಸುಮ್ಮನಿರುತ್ತಾರೆ. ಅವರಿಗೆ ತಿಳಿಯಿತೋ ಇಲ್ಲವೋ ಎಂದು ಪುನಃ ಅದನ್ನು ಹೇಳತೊಡಗುತ್ತಾರೆ. ಆಗ ನೆಹರೂರವರು ರೇಗುತ್ತಾರೆ. ಇವರು ಒಂದು ವಿಷಯ ಹೇಳಿದಾಗ ನೆಹರೂರವರ ಮನಸ್ಸು ಅದನ್ನು ಗ್ರಹಿಸಿ ಮುಂದಿನ ವಿಷಯವನ್ನು ಕೇಳಲು ಆತುರವಾಗಿರುತ್ತದೆ. ಆಗ ಇವರು ಪುನಃ ಹೇಳಿದ್ದನ್ನೇ ಹೇಳಿದರೆ ಅವರಿಗೆ ರೇಗುವುದು ಸಹಜವೇ. ತುಂಬಾ ಮೇಧಾವಿಗಳಾದವರಿಗೆ ರೇಗುವುದು ಸಾಮಾನ್ಯ ಲಕ್ಷಣ. ಅವರ ಮನಸ್ಸು ಓಡುವ ಓಟದಲ್ಲಿ ಇತರರ ಮಾತೂ ಮನಸ್ಸೂ ಮುಂದುವರೆಯುವುದಿಲ್ಲ, ಕಾರ್ಯಸಾಗುವುದಿಲ್ಲ. ನೆಹರೂರವರ ವಿಚಾರವೂ ಹಾಗೆಯೇ.

ಒಂದು ಸಲ ನೆಹರೂರವರು ವೈಸರಾಯರಾಗಿದ್ದ ಲಾರ್ಡ್ ಲಿನ್‌ಲಿತ್‌ಗೋರವರನ್ನು ನೋಡಲು ಹೋದರು. ಬ್ರಿಟನ್-ಭಾರತಗಳ ಸಂಬಂಧವಾಗಿ ಮಾತು ಜರುಗಿತು. ನೆಹರೂರವರು ಬಂದ ಮೇಲೆ, ಲಿನ್‌ಲಿತ್‌ಗೋರವರು ನ್ಯಾಯಾಂಗ ಮಂತ್ರಿ ಸರ್ ನೀಲರತ್ನ ಸರ್ಕಾರರವರೊಂದಿಗೆ ಹೀಗೆ ಹೇಳಿದರಂತೆ. "ನೆಹರೂರವರು ಮಾತನಾಡುವಾಗ ಅವರು ಈ ಭೂಮಿಯನ್ನು ಬಿಟ್ಟು ಎತ್ತರದ ಪ್ರದೇಶದಲ್ಲಿ ನಿಂತು ಮಾತನಾಡುತ್ತಿದ್ದಂತೆ ತೋರಿತು. ಅವರು ಬ್ರಿಟನ್-ಭಾರತಗಳ ಮೈತ್ರಿಯನ್ನು ಸೂಚಿಸುತ್ತಾ 'ಇದು ನಮ್ಮ ನಿಮ್ಮ ಕಲಹವಲ್ಲ; ಪ್ರಪಂಚದ ವಸಾಹತು ಸ್ವತಂತ್ರ್ಯ ಮನೋಧರ್ಮಗಳ ಕಲಹ' ಎನ್ನುತ್ತಾ ಪ್ರಪಂಚದ ಚಿತ್ರವನ್ನೇ ನನ್ನ ಮುಂದಿಟ್ಟರು. ಇತರ ರಾಜಕಾರಿಣಿಗಳಂತೆ ಅವರದು ಸಂಕುಚಿತ ಮನೋಧರ್ಮವಲ್ಲ"—ಅಂತ. ಹಾಗೆಯೇ ಪಾಟಿಯಾಲಾ ಮಹಾರಾಜ

ರಾಗಿದ್ದ ಭೂಪೇಂದ್ರ ಸಿಂಗರು ಒಂದು ದಿನ ನೆಹರೂರವರನ್ನು ಪುಸ್ತಕದ ಅಂಗಡಿಯಲ್ಲಿ ಭೇಟಿಮಾಡಿ, ಮರುದಿನ ಮಧ್ಯಾಹ್ನದ ತಿಂಡಿಗೆ ಕರೆದಿದ್ದರು. ನೆಹರೂರವರು ಸುಮಾರು ಒಂದು ಘಂಟೆಯ ಕಾಲ ಅವರೊಡನಿದ್ದು ವಾಪಸು ಬಂದರು. ಆ ಒಂದು ಘಂಟೆಯ ಕಾಲದಲ್ಲಿ ನೆಹರೂರವರು ಪಾಟಿಯಾಲಾ ಮಹಾರಾಜರಿಗೆ ತಮ್ಮ ಜೀವಮಾನದಲ್ಲೇ ಕಲಿಯದಿದ್ದಷ್ಟು ರಾಜಕೀಯ ವಿಷಯಗಳನ್ನು ಹೇಳಿದರಂತೆ. ಮಹಾರಾಜರು 'ನಾನು ಪ್ರಪಂಚವೆಲ್ಲಾ ಸುತ್ತಾಡಿದ್ದೇನೆ. ಅನೇಕ ರಾಷ್ಟ್ರಾಧಿಪತಿಗಳು, ಮಹಾ ಮಂತ್ರಿಗಳನ್ನು ಕಂಡಿದ್ದೇನೆ. ಆದರೆ ಅವರಾರೂ ತಿಳಿಸದ ಮಹದ್ವಿಷಯ ಗಳು ನೆಹರೂರವರಿಂದ ತಿಳಿದುವು. ಪ್ರಪಂಚದ ರಾಜಕೀಯ ಶಕ್ತಿಗಳು ಯಾವ ದಾರಿಯಲ್ಲಿ ಸಾಗುತ್ತಿವೆ, ಅದರಿಂದ ನಾಳಿನ ಪ್ರಪಂಚ ಹೇಗೆ ರೂಪುಗೊಳ್ಳುತ್ತದೆ ಎಂಬುದರ ಚಿತ್ರವನ್ನವರು ನನಗೆ ಕೊಟ್ಟರು'—ಎಂದು ಹೇಳಿದರಂತೆ. ನೆಹರೂರವರ ಮನಸ್ಸು ಸಂಕುಚಿತವಾದ ಭಾವನೆಗಳ ನ್ನುಳ್ಳುದಲ್ಲ. ಪ್ರಪಂಚದ ಚರಿತ್ರೆಯನ್ನರಿತು, ಇಂದಿನ ರಾಜಕೀಯ ರಂಗದ ಜಾಡನ್ನು ಹಿಡಿದು, ಭವಿಷ್ಯವನ್ನು ರೂಪಿಸಬಲ್ಲ ಮನಸ್ಸು ಅದು. ಅವರ ಕಲ್ಪನೆಯಲ್ಲಿ ಯಾವಾಗಲೂ ವಿಶಿಷ್ಟ ಪ್ರಪಂಚದ ಭೂಪಟವೇ ಹಾರಾಡು ತ್ತಿರುತ್ತದೆ. ಇವರ ಹಾಗೆಯೇ ಅಮೆರಿಕನ್ ಮಹಿಳೆಯರು, ಪತ್ರಿಕೋ ದ್ಯೋಗಿಗಳು ಮೊದಲಾದವರೊಡನೆ ನಡೆದ ಭೇಟಿಯ ಸಂಗತಿಗಳನ್ನು ಈ ಹಿಂದೆಯೇ ಬರೆದಿರುವುದಾಗಿದೆ. ನೆಹರೂರವರ ಸಂಭಾಷಣಾ ಕೌಶಲ್ಯ ಯನ್ನು ಇವು ಸೂಚಿಸುತ್ತವೆ.

ಸಂಭಾಷಣೆಯಲ್ಲಿ ಹೇಗೋ ಹಾಗೇ ಸಾರ್ವಜನಿಕ ಭಾಷಣ ಗಳಲ್ಲಿಯೂ ನೆಹರೂರವರ ಪಾಂಡಿತ್ಯ, ಪಾಶ್ಚಿಮಾತ್ಯ ದೇಶಗಳ ಸಂಚಾರದ ಅನುಭವ, ರಾಜಕಾರಿಣಿಗಳೊಡನೆ ಪಡೆದ ಸಂಪರ್ಕ, ನಿರರ್ಗಳವಾಗಿ ಬರುವ ಮಾತುಗಳು, ಜೊತೆಗೆ ಯಾರ ಮುಂದೆ ಭಾಷಣ ಮಾಡುತ್ತಿದ್ದಾ ರೆಯೋ ಅವರ ಕಷ್ಟ ಸುಖಗಳ ತಿಳಿವಳಿಕೆ—ಇವುಗಳು ನೆಹರೂರವರಿಗೆ ವಿಶೇಷವಾದ ಜನಾನುರಾಗವನ್ನು ಸಂಪಾದಿಸಿಕೊಟ್ಟಿವೆ. ಇಂದಿನ ರಾಜ ಕೀಯ ಮುಂದಾಳುಗಳು, ಪ್ರಪಂಚದ ವಿವಿಧ ರಾಷ್ಟ್ರಗಳ ಮುಖ್ಯ ಮಂತ್ರಿ ಗಳು, ರಾಷ್ಟ್ರನಾಯಕರುಗಳೊಡನೆ ಹೋಲಿಸಿ ನೋಡಿದರೆ ನೆಹರೂರವ

ರಷ್ಟು ಪ್ರಪಂಚ ಪರ್ಯಟನ ಮಾಡಿದವರೂ, ಅಷ್ಟು ವಿದ್ಯಾವಂತರೂ, ಅಷ್ಟು ವಿಶಾಲ ದೃಷ್ಟಿಯುಳ್ಳವರೂ, ಅಷ್ಟು ಭಾಷಣಗಳನ್ನು ಮಾಡಿದವರೂ ಇನ್ನು ಬೇರೆ ಯಾರೂ ಇಲ್ಲ. ಅಂತಹ ಆಳವಾದ ಅನುಭವ ಅವರದು. ಹಾಗೇ ಆ ಅನುಭವವನ್ನು ಸದುಪಯೋಗಪಡಿಸಿಕೊಂಡು ಭಾರತ ಜನತೆಯನ್ನು ಮೇಲಕ್ಕೆತ್ತಲು ಪ್ರಯತ್ನ ಪಡುತ್ತಿರುವವರು ಅವರು. ಇಂತಹ ಹಿನ್ನೆಲೆ ಸದುದ್ದೇಶಗಳಿಂದ ಮಾಡುವ ಭಾಷಣ ತುಂಬಾ ಪರಿಣಾಮಕಾರಿಯಾಗುತ್ತದೆ. ಅವರ ಉಪನ್ಯಾಸದ ಭಾಷೆ ಪುಸ್ತಕದ ಭಾಷೆಯಂತೆ ವ್ಯಾಕರಣಬದ್ಧವಾದ ಕೃತಕ ಭಾಷೆಯಲ್ಲ. ಅದು ಒಬ್ಬರೊಡನೊಬ್ಬರು ಮಾತನಾಡುವ ಆತ್ಮೀಯವಾದ ಭಾಷೆ. ಭಾಷಣ ಮಾಡುವಾಗ ಎದುರಿಗಿರುವವರೊಡನೆ ಕೊಠಡಿಯಲ್ಲಿ ಕುಳಿತು ಮಾತನಾಡುವಂತೆ ಮಾತುಗಳು ಬರುತ್ತವೆ. ಅವು ಕೇಳುವವರ ಹೃದಯವನ್ನು ನೇರವಾಗಿ ಹೊಗುತ್ತವೆ. ಸ್ವಲ್ಪ ತೊದಲು ತೊದಲು ಮಾತಾದರೂ ಪದಗಳಿಗೆ ಅವರು ತೊಂದರೆ ಪಡಬೇಕಾದುದಿಲ್ಲ. ಹಿಂದಿ, ಹಿಂದೂಸ್ತಾನಿಗಳಿಗಿಂತ ಅವರು ಇಂಗ್ಲಿಷಿನಲ್ಲಿ ಚೆನ್ನಾಗಿ ಮಾತನಾಡ ಬಲ್ಲರು. ಅವರ ಮಾತು ಭಾವಪೂರ್ಣವಾದುದು. ಅವರು ಒಳ್ಳೆಯ ವಾಗ್ಮಿಗಳು ಹೇಗೋ ಹಾಗೇ ಭಾವುಕರೂ ಅಹುದು. ಕೆಲವು ವೇಳೆ ಭಾವಾವೇಶದಲ್ಲಿ ಮಾತನಾಡುತ್ತಾ ಕವಿಯ ಮನೋಧರ್ಮವನ್ನು ಪ್ರದರ್ಶಿಸುವರು. ಮಾತನಾಡುತ್ತಾ ಆಡುತ್ತಾ ಭಾಷಣಕ್ಕೆ ಕಾವೇರುತ್ತದೆ. ಕಾವೇರಿದಹಾಗೆಲ್ಲಾ ಹೇಳುವ-ಕೇಳುವವರಲ್ಲಿ ಹೆಚ್ಚು ಆತ್ಮೀಯತೆ ಬೆಳೆಯುತ್ತದೆ. ಮಹೋನ್ನತವಾದ ಭಾವಗಳು ಆಗ ಅವರ ಬಾಯಿಂದ ಹೊರ ಬರುತ್ತವೆ.

ಇಂಗ್ಲೆಂಡಿನಿಂದ ಬಂದಾಗ ನೆಹರೂರವರು ಭಾಷಣಕಾರರಾಗಿರಲಿಲ್ಲ. ಪ್ರತಾಪಘಡದ ರೈತರು ಅವರಿಗೆ ಭಾಷಣ ಕಲೆಯನ್ನು ಕಲಿಸಿದರು. ಸಾವಿರಾರು ಸಂಖ್ಯೆಯಲ್ಲಿ ಸೇರುತ್ತಿದ್ದ ಜನ ಜಂಗುಳಿಯೇ ಅವರಿಗೆ ಉತ್ತೇಜನವನ್ನು ಕೊಟ್ಟಿತು. ಗುಂಪು ಅವರನ್ನು ಪ್ರೀತಿಸಿತು; ಅವರು ಗುಂಪನ್ನು ಪ್ರೀತಿಸಿದರು. ಗುಂಪು ಹೆಚ್ಚಾದಷ್ಟೂ ಅವರ ಉತ್ಸಾಹ ಹೆಚ್ಚುತ್ತದೆ. ಅವರ ಭಾಷಣವಿದ್ದ ಕಡೆ ಮಹಾ ಸಮುದ್ರದಂತೆ ಕಣ್ಣೋಟ

ಹರಿಯುವವರೆಗೂ ಜನರ ಗುಂಪು ನಿಂತಿರುತ್ತದೆ. ಕೊರೆವ ಛಳಿ ಮಳೆ ಗಾಳಿಗಳ ಪರಿವೆಯಿಲ್ಲದೆ ಜನ ಗಂಟೆಗಟ್ಟಲೆ ಕಾದು ಅವರ ಭಾಷಣವನ್ನು ಕೇಳುತ್ತಾರೆ. ಕೃಷ್ಣನ ಕೊಳಲಿನ ಕರೆಗೆ ಗೋಪಿಯರು ಸೇರಿದಂತೆ, ಕಿಂವರಿಜೋಗಿಯ ಕೊಳಲಿಗೆ ಬಾಲಕರು ಸೇರಿದಂತೆ, ಅವರ ಭಾಷಣಕ್ಕೆ ಜನ ಸೇರುತ್ತಾರೆ. ಅವರ ಹೆಸರಿನಲ್ಲಿ ಮಾತಿನಲ್ಲಿ ಅಂತಹ ಸಂಮೋಹನ ವಿದೆ. ಅಂತಹ ಜನಾನುರಾಗವನ್ನು ಸಂಪಾದಿಸಿರುವುದರಿಂದಲೇ ಹಾಗೆ ಭಾಷಣ ಕಲೆಯನ್ನು ಅಭ್ಯಾಸಮಾಡಿರುವುದರಿಂದಲೇ ಅವರಿಗೆ ಭಾರತದ ಜನರನ್ನು ಒಂದುಗೂಡಿಸಿ ಸ್ವಾತಂತ್ರ್ಯವನ್ನು ದೊರಕಿಸುವುದು ಸಾಧ್ಯ ವಾಯಿತು.

ನೆಹರೂರವರ ಭಾಷಣಗಳನ್ನು ಏರ್ಪಾಟುಮಾಡುವುದು ಮಹಾ ಪ್ರಯಾಸದ ಕೆಲಸ. ಯಾವ ಭಾಷಣವೆಂದರೂ ಅಸಾಧ್ಯ ಜನಸಂದಣಿ ಸೇರುತ್ತದೆ. ಭಾಷಣ ಕೇಳುವ ಹಂಬಲದ ಹಾಗೆ ಅವರನ್ನೊಮ್ಮೆ ನೋಡ ಬೇಕೆಂಬ ಉತ್ಕಟೇಚ್ಛೆಯಿಂದ ಲಕ್ಷಾಂತರ ಜನ ಸೇರುತ್ತಾರೆ. ಆ ಜನರು ಆತುರದಲ್ಲಿ ಒಬ್ಬರ ಮೇಲೊಬ್ಬರು ಬಿದ್ದು, ನೂಕಲುನುಗ್ಗಲಿನಲ್ಲಿ ಪ್ರಾಣ ಕಳೆದುಕೊಂಡಿರುವವರೂ ಉಂಟು. ಇಂತಹ ಮೇರೆಮೀರಿದ ಗುಂಪನ್ನು ಶಿಸ್ತಿನಿಂದ ತಡೆಯುವುದಕ್ಕೆ ಅಸಾಧ್ಯ ಪೋಲೀಸು ಸಿಬ್ಬಂದಿ ಬೇಕಾಗುತ್ತದೆ. ಎಷ್ಟೇ ಪೋಲೀಸು ಏರ್ಪಾಟನ್ನು ಮಾಡಿಕೊಂಡಿದ್ದರೂ ಜನರ ಗುಂಪು ಅವರ ಹತೋಟಿಯನ್ನು ಮೀರಿ ವರ್ತಿಸುತ್ತದೆ. ನೆಹರೂರವರಿಗೂ ಆ ಜನರ ಮನಸ್ಸನ್ನು ತೃಪ್ತಿಪಡಿಸುವ ಹಂಬಲ ಬಹಳ. ಒಂದು ಸಲ ಸಿಂಹಳಕ್ಕೆ ಹೋಗಿದ್ದಾಗ ಸರ್ಕಾರದವರು ಅವರ ಸಂರಕ್ಷಣೆಯ ದೃಷ್ಟಿಯಿಂದ ಮೇಲು ಮುಚ್ಚಳದ ಮೋಟಾರು ಕಾರುಗಳನ್ನು ಒದಗಿಸಿದ್ದರು. ಅದನ್ನು ಕಂಡು ನೆಹರೂರವರಿಗೆ ರೇಗಿಹೋಯಿತು. 'ನನ್ನನ್ನು ನೋಡಬೇಕೆಂದು ಲಕ್ಷಾಂತರ ಮಂದಿ ದಾರಿಯುದ್ದಕ್ಕೂ ಕಾದು ನಿಂತಿರುವಾಗ ನಾನು ಘೋಷಾ ಹೆಂಗಸಿ ನಂತೆ ಮುಚ್ಚಿದ ಕಾರಿನಲ್ಲಿ ಬರಬೇಕೆ? ಅದಾಗುವುದಿಲ್ಲ'—ಎಂದು ಹೇಳಿ ನಡೆದುಕೊಂಡೇ ಹೊರಟುಬಿಟ್ಟರು. ಅವರ ಜೊತೆಗೆ ನಡೆಯುವುದಕ್ಕೆ ಮೈಗಾವಲಿನವರಿಗೆ ಕೂಡ ಆಗದಾಯಿತು. ಅವರು ಇಷ್ಟು ವಯಸ್ಸಿನಲ್ಲೂ ಅಷ್ಟು ಜಾಗ್ರತೆ ಜಾಗ್ರತೆ ನಡೆಯುತ್ತಾರೆ. ಅವರು ಈಗ ಎಲ್ಲಿ ಹೋದರೂ

ತೆರೆದ ಮೋಟಾರಿನಲ್ಲೋ ಜೀಪಿನಲ್ಲೋ ನಿಂತುಕೊಂಡು ಎಲ್ಲರಿಗೂ ಕಾಣಿಸಿಕೊಳ್ಳುತ್ತಾ ಎಲ್ಲರನ್ನೂ ನೋಡುತ್ತಾ ಅವರ ಹರ್ಷೋದ್ಗಾರಗಳಿಗೆ ಪ್ರತಿವಂದಿಸುತ್ತಾ ಬರುತ್ತಾರೆ.

ನೆಹರೂರವರ ಭಾಷಣಗಳ ಸಂಖ್ಯೆಗೆ ಮಿತಿಯಿಲ್ಲ. ನಿತ್ಯಾ ಏನಾದರೊಂದು ಸಭೆ ಸಮಾರಂಭಗಳಿರುತ್ತವೆ. ಕೆಲವು ದಿನ ಐದಾರು ಇರುವುದೂ ಉಂಟು. ಅವರ ಭಾಷಣದ ಸಾಮರ್ಥ್ಯ ಎಷ್ಟೆಂಬುದು ಗೊತ್ತಾಗಬೇಕಾದರೆ ಚುನಾವಣೆಕಾಲದ ಅವರ ಭಾಷಣಗಳನ್ನು ನೋಡಬೇಕು. ಒಂದೊಂದು ಸಲ ದಿನಕ್ಕೆ ಇಪ್ಪತ್ತು ಭಾಷಣಗಳನ್ನು ಮಾಡಿದ್ದುಂಟು. ಆರು ತಿಂಗಳ ಕಾಲದಲ್ಲಿ ಒಂದು ಲಕ್ಷ ಮೈಲಿ ಸಂಚರಿಸಿದ್ದುಂಟು. ಇಷ್ಟು ವಿಪುಲವಾಗಿ ಭಾಷಣಗಳನ್ನು ಕೊಡುವುದರಿಂದ ಅದಕ್ಕೆ ಪೂರ್ವಸಿದ್ಧತೆ ಮಾಡಿಕೊಳ್ಳುವುದು ಅಸಾಧ್ಯವಾದ ಮಾತು. ಶೇಕಡ ತೊಂಭತ್ತೊಂಬತ್ತು ಭಾಗದ ಭಾಷಣಗಳಿಗೆ ಪೂರ್ವಸಿದ್ಧತೆ ಇರುವುದಿಲ್ಲ. ಆದರೂ ಒಂದೊಂದು ಭಾಷಣದಲ್ಲೂ ಏನಾದರೊಂದು ಹೊಸ ಹೊಸ ವಿಷಯವನ್ನು ತಿಳಿಸುತ್ತಲೇ ಇರುತ್ತಾರೆ. ಸ್ಥಳ ಸಂಕೋಚದಿಂದ ಇಲ್ಲಿ ಉದಾಹರಿಸುವುದಕ್ಕಾಗದಿದ್ದರೂ ಸ್ವಾತಂತ್ರ್ಯ ಬಂದ ದಿನ ರಾಜ್ಯಾಂಗ ರಚನಾ ಸಭೆಗೆ ಮಾಡಿದ ಭಾಷಣ, ಅಮೆರಿಕದಲ್ಲಿ ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ ಮಾಡಿದ ಭಾಷಣ, ವಿಶ್ವಸಂಸ್ಥೆಯಲ್ಲಿ ಮಾಡಿದ ಭಾಷಣ, ಇಂಡೋನೇಷಿಯಾದ ಸಮ್ಮೇಳನದಲ್ಲಿ ಮಾಡಿದ ಭಾಷಣ, ಮಹಾತ್ಮಾ ಗಾಂಧಿಯವರು ಸತ್ತಾಗ ಮಾಡಿದ ಭಾಷಣ— ಇವು ಅತ್ಯುತ್ತಮವಾದವುಗಳೆಂದು ಪರಿಗಣಿತವಾಗಿವೆ. ಜನ ಅವನ್ನು ಓದಿ ಅವರ ವಿದ್ವತ್ತನ್ನೂ ಪ್ರತಿಭೆಯನ್ನೂ ಅರಿತುಕೊಳ್ಳಬೇಕಾಗಿದೆ.

# ೮. ಪಂಚಶೀಲ

ಜವಾಹಿರಲಾಲ ನೆಹರೂರವರ ವಿದೇಶೀ ರಾಜಕೀಯ ಪಂಚಶೀಲ ತತ್ತ್ವದ ಮೇಲೆ ನಿಂತಿದೆ. ಪ್ರಪಂಚದ ಅರ್ಧ ಜನಸಂಖ್ಯೆಯನ್ನುಳ್ಳ ರಾಷ್ಟ್ರಗಳು ಈ ತತ್ತ್ವವನ್ನೊಪ್ಪಿಕೊಂಡಿವೆ. ಪ್ರಪಂಚದ ಪ್ರಮುಖ ರಾಷ್ಟ್ರಗಳೆರಡರ ಪೈಕಿ ಒಂದಾದ ರಷ್ಯಾ ಈ ತತ್ತ್ವವನ್ನಾಗಲೇ ಒಪ್ಪಿ ಕೊಂಡಿದೆ. ಉಳಿದ ಅಮೆರಿಕಾ ಕೂಡ ಪಂಚಶೀಲವೆಂದರೆ ಹಾಸ್ಯ ಮಾಡುತ್ತಿದ್ದವರು ಇಂದು ಆ ಜಾಡಿನಲ್ಲೇ ಯೋಚನೆಮಾಡುತ್ತಿದ್ದಾರೆ. ಮಾನವ ಜಗತ್ತು ನಾಶವಾಗದೆ ಉಳಿಯಬೇಕಾದರೆ ಈ ಪಂಚಶೀಲಕ್ಕೇ ಶರಣುಬೀಳಬೇಕೆಂಬ ಅಭಿಪ್ರಾಯ ದಿನ ದಿನಕ್ಕೆ ಪುಷ್ಟಿಗೊಳ್ಳುತ್ತಿದೆ. ಚೀನಾದೇಶದ ಮಹಾಪ್ರಧಾನಿ ಚೂ-ಎನ್-ಲೈರವರು ಭಾರತಕ್ಕೆ ಭೇಟಿ ಕೊಟ್ಟಾಗ ಮೊಟ್ಟಮೊದಲು ರಾಜಕೀಯದ ಕರಾರಾಗಿ ಈ ಪಂಚಶೀಲ ಹೊರಬಿದ್ದಿತು. ಇದಕ್ಕೆ ಮೊದಲೇ ಟಿಬೆಟ್ಟಿನ ವಿವಾದವನ್ನು ಇತ್ಯರ್ಥ ಪಡಿಸಿಕೊಳ್ಳುವಾಗ ಭಾರತ-ಚೀನಾದೇಶಗಳು ಇದರ ಅಂಕುರಾರ್ಪಣ ಮಾಡಿದ್ದುವು.

ಪಂಚಶೀಲದ ತತ್ತ್ವಗಳು ಈ ರೀತಿ ಇವೆ: (೧) ವ್ಯವಸ್ಥಿತವಾದ ಪ್ರಾಂತೀಯ ಭದ್ರತೆಗೂ ಪರಮಾಧಿಕಾರಕ್ಕೂ ಪರಸ್ಪರ ಗೌರವ ಕೊಡು ವುದು; (೨) ಪರಸ್ಪರ ಆಕ್ರಮಣ ನಡೆಸದೆ ಇರುವುದು; (೩) ಒಂದು ರಾಷ್ಟ್ರದ ರಾಜಕೀಯ ಆರ್ಥಿಕ ಅಥವಾ ವೈಲಕ್ಷಣ್ಯ ಸಂಬಂಧವಾದ ಒಳಾ ಡಳಿತದಲ್ಲಿ, ಯಾವ ಕಾರಣದಿಂದಲಾಗಲೀ ಇನ್ನೊಂದು ರಾಷ್ಟ್ರ ಪ್ರವೇಶ ಮಾಡದಿರುವುದು; (೪) ಪರಸ್ಪರ ಸಮಾನತೆ ಮತ್ತು ಹಿತರಕ್ಷಣೆ; ಮತ್ತು (೫) ಶಾಂತಿಯುತ ಸಹಬಾಳುವೆ.

ಈ ಪಂಚಶೀಲ ತತ್ತ್ವಗಳನ್ನು ವಿವೇಚಿಸಿದವರಿಗೂ ಭಾರತದ ಸಂಸ್ಕೃತಿಯನ್ನು ವಿಮರ್ಶಿಸುವವರಿಗೂ ಈ ತತ್ತ್ವ ಭಾರತದ ಸಂಸ್ಕೃತಿಯ ತಿರುಳೆಂದು ವ್ಯಕ್ತವಾಗದೆ ಇರದು. ಹಾಗೆಯೇ ಭಾರತವನ್ನುಳಿದು ಬೇರೆ ಯಾವ ಜನಾಂಗವೂ ಈ ತತ್ತ್ವವನ್ನು ಪ್ರತಿಪಾದಿಸಲಾರದೆಂಬುದೂ

ನಿರ್ವಿವಾದ. ರಾಜಕೀಯವಾಗಿ ಈ ತತ್ತ್ವವನ್ನು ನೆಹರೂರವರು ಬಳಸಿರುವ ರಾದರೂ ಭಾರತೀಯ ಸಾಮಾಜಿಕ ಜೀವನದಲ್ಲಿ ಇದು ಉಪನಿಷತ್ತುಗಳ ಕಾಲದಿಂದ ಹಾಸುಹೊಕ್ಕಾಗಿ ಬಂದಿದೆ.

"ಸಹನಾವವತು ಸಹನೌಭುನಕ್ತು ಸಹವೀರ್ಯಂಕರವಾವಹೈ। ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ"—ಎಂಬುದು ಉಪನಿಷತ್ತಿನ ವಾಕ್ಯ. ಒಟ್ಟಿಗೆ ಬಾಳಿ ಬದುಕೋಣ, ಒಟ್ಟಿಗೆ ಊಟಮಾಡೋಣ, ಒಟ್ಟಿಗೆ ವೀರ್ಯವನ್ನು ಸಂಪಾದಿಸೋಣ, ತೇಜಸ್ವಿಗಳಾಗೋಣ. ಎಂದೆಂದಿಗೂ ಒಬ್ಬರೊಡನೊಬ್ಬರು ದ್ವೇಷಮಾಡುವುದು ಬೇಡ—ಇದು ನಮ್ಮ ಉಪನಿಷತ್ತಿನ ಋಷಿಗಳ ಸಹಬಾಳುವೆಯ ತತ್ತ್ವ. ಅಲ್ಲಿಂದ ಮುಂದೆ ಭಗವದ್ಗೀತೆಯಲ್ಲಿ ಈ ತತ್ತ್ವದ ಪ್ರತಿಪಾದನೆ ನಡೆದಿದೆ. ಗೀತಾಕಾರನಾದ ಶ್ರೀ ಕೃಷ್ಣ ಒಂದು ಹೆಜ್ಜೆ ಮುಂದೆ ಹೋಗಿ 'ಯಾವುದು ಲೋಕಹಿತವಾದುದೋ ಅದೇ ಧರ್ಮ. ದ್ವೇಷವನ್ನು ದೂರಮಾಡಿ ಸಹಬಾಳುವೆಯಿಂದ ಆ ಧರ್ಮವನ್ನು ಕಾಪಾಡಬೇಕು, ಬೆಳೆಸಬೇಕು'—ಎಂದು ಹೇಳಿದ್ದಾನೆ. ದುರ್ಯೋಧನನ ಆಸ್ಥಾನದಲ್ಲಿ ಪಂಚಶೀಲದ ತತ್ತ್ವವನ್ನು ಪ್ರತಿಪಾದಿಸಿ ಕೌರವ ಪಾಂಡವರುಗಳು ಸಹಬಾಳುವೆಯನ್ನು ನಡೆಸಬೇಕೆಂದೂ ಅದರಿಂದ ಲೋಕಹಿತವನ್ನು ಸಾಧಿಸಬೇಕೆಂದೂ ಬೋಧಿಸಿದ್ದಾನೆ. ಇದಾದಮೇಲೆ ಭಗವಾನ್ ಬುದ್ಧನು ಅವತರಿಸಿ 'ಅಹಿಂಸಾ ಪರಮೋಧರ್ಮಃ' ಎಂದು ಅಹಿಂಸೆಯ ತತ್ತ್ವವನ್ನು ಸಾರುತ್ತಾ ದ್ವೇಷ ಮಾಡುವುದನ್ನು ಬಿಟ್ಟು ಸೌಹಾರ್ದದ ಸಹಬಾಳುವೆಯಿಂದ ಬದುಕಬೇಕು—ಎಂದು ಸಾರಿದ್ದಾನೆ. ಬುದ್ಧನ ತತ್ತ್ವಗಳನ್ನೇ ಅಶೋಕ ಚಕ್ರವರ್ತಿಯೂ ಸಾರಿದನು. ಭಾರತದ ರಾಜಕೀಯ ಚರಿತ್ರೆಯನ್ನವನು ಪಂಚಶೀಲದ ಮೇಲೆ ಬೆಳೆಸಿದನು. ಕೃಷ್ಣ ಬುದ್ಧ ಅಶೋಕರುಗಳು ಈ ಸಹಬಾಳುವೆಯ ತತ್ತ್ವವನ್ನು ರಾಜಕೀಯಕ್ಕೂ ಈ ಮೊದಲೇ ಅನ್ವಯಿಸಿದರೆಂದು ಇದರಿಂದ ತೋರುತ್ತದೆ. ಇದು ಭಾರತದ ಸಂಸ್ಕೃತಿಯ ತಿರುಳು. ನೆಹರೂರವರು ಭಾರತದ ಈ ಸಂಸ್ಕೃತಿಯ ಪ್ರತೀಕವಾಗಿ ಈ ಪಂಚಶೀಲ ತತ್ತ್ವಗಳನ್ನು ಕೃಷ್ಣ ಬುದ್ಧರಂತೆ ಇಂದಿನ ರಾಜಕೀಯಕ್ಕೆ ಅನ್ವಯಿಸಿ ಪ್ರತಿಪಾದಿಸುತ್ತಿದ್ದಾರೆ

ಇಂದಿನ ಪ್ರಪಂಚದಲ್ಲಿ ಒಂದುಕಡೆ ಅಮೆರಿಕಾ ಇನ್ನೊಂದುಕಡೆ ರಷ್ಯಾಗಳವರು ಆಟಂಬಾಂಬ್, ಹೈಡ್ರೊಜನ್ ಬಾಂಬ್, ಕೊಬಾಲ್ಟ್ ಬಾಂಬ್—ಮೊದಲಾದ ಮಹಾ ಮಾರಕಾಸ್ತ್ರಗಳನ್ನು ತಯಾರಿಸುತ್ತಾ ಯುದ್ಧ ಸನ್ನದ್ಧರಾಗುತ್ತಿದ್ದಾರೆ. ಪಕ್ಷ ಪ್ರತಿಪಕ್ಷಗಳನ್ನು ಕಟ್ಟಿ ಪ್ರಪಂಚ ವನ್ನೇ ಎರಡು ಸಮರಪಕ್ಷಗಳನ್ನಾಗಿ ವಿಭಾಗಿಸುತ್ತಿದ್ದಾರೆ, ದ್ವೇಷವನ್ನು ಬಲಿಸುತ್ತಿದ್ದಾರೆ. ಈ ದ್ವೇಷವೇನಾದರೂ ಬೆಳೆದು ಯುದ್ಧವೇ ನಡೆಯುವು ದಾದರೆ ಈ ಎರಡು ರಾಷ್ಟ್ರಗಳೂ ಹೇಳಹೆಸರಿಲ್ಲದಂತೆ ನಿರ್ನಾಮವಾಗುವುದು ಖಂಡಿತ. ಕೇವಲ ಅವರುಗಳು ಹಾಳಾಗುವುದು ಮಾತ್ರವಲ್ಲ, ಆ ಮಾರ ಕಾಸ್ತ್ರಗಳಿಂದ ಉದ್ಭವವಾದ ರೇಡಿಯೇಷನ್ ಎಂಬ ವಿಷ ಉಳಿದ ಪ್ರಪಂಚದಲ್ಲೆಲ್ಲಾ ಹರಡಿ ಜೀವಿಸಿರುವ ಮಾನವಕುಲವನ್ನು ಮಾತ್ರ ವಲ್ಲದೆ ಮುಂದೆ ಹುಟ್ಟಬಹುದಾದ ಮಾನವ ಪೀಳಿಗೆಯನ್ನೂ ಕೂಡ ನಾಶ ಮಾಡುವುದಾಗಿದೆ. ಇಂತಹ ವಿನಾಶವನ್ನು ನೆನೆದರೇ ಮೈ ನಡುಗುತ್ತದೆ. ಇಂತಹ ವಿನಾಶದ ಹೆದರಿಕೆಯಿಂದ ಸಣ್ಣಪುಟ್ಟ ರಾಷ್ಟ್ರಗಳು ತಲ್ಲಣಿಸುತ್ತಿವೆ. ಮಹಾ ಮಾರಕಾಸ್ತ್ರಗಳ ಬೆಂಬಲದಿಂದ ಹೂಂಕರಿಸುತ್ತಿರುವ ಈ ರಾಷ್ಟ್ರ ಗಳಿಗೆ ಎದುರಾಗಿ ಧೈರ್ಯವಾಗಿ ನಿಂತು 'ಇದು ತಪ್ಪು' ಎಂದು ಕೂಗಿ ಹೇಳುವವರೇ ಇಲ್ಲವಾಗಿದೆ. ಇಂತಹ ಪ್ರಕ್ಷುಬ್ಧ ಸಮಯದಲ್ಲಿ ನೆಹರೂ ರವರು ದಿಟ್ಟವಾಗಿ ಎದುರಿಗೆ ನಿಂತು 'ನೀವು ಮಾಡುತ್ತಿರುವುದು ಲೋಕಕ್ಕೆ ಹಾನಿಕರ, ಇದರಿಂದ ಲೋಕಕಲ್ಯಾಣವಾಗುವುದಿಲ್ಲ, ಇದನ್ನು ನಿಲ್ಲಿಸಿ,' ಎಂದು ಸಾರಿಹೇಳುತ್ತಿದ್ದಾರೆ. 'ಶಕ್ತಿಯಿಂದಲೇ ಶಾಂತಿ' ಎಂದು ಮಾರಕಾಸ್ತ್ರಗಳ ಶಕ್ತಿಯನ್ನು ಬೆಳೆಸಿಕೊಳ್ಳುತ್ತಿರುವ ರಾಷ್ಟ್ರಗಳಿಗೆ 'ಶಕ್ತಿಯಿಂದಲೇ ಸಾವು, ಸಹಬಾಳ್ವೆಯಿಂದಲೇ ಶಾಂತಿ' ಎಂದು ಸಾರು ತ್ತಿದ್ದಾರೆ. ಸಹ ಬಾಳ್ವೆಯ ದಾರಿಯಾವುದು ಎಂದು ಪ್ರಶ್ನಿಸುವವರಿಗೆ 'ಪಂಚಶೀಲ'ದ ಕಡೆ ಕೈತೋರುತ್ತಿದ್ದಾರೆ. ಚೀನಾ, ಬರ್ಮಾ, ಯುಗೋ ಸ್ಲಾವಿಯಾ, ಪೋಲೆಂಡ್ ಇವುಗಳು ಮಾತ್ರವಲ್ಲ, ಮಾರಕಾಸ್ತ್ರಗಳನ್ನು ತಯಾರಿಸಿ ಪ್ರತಿಯುದ್ಧಕ್ಕೆ ಸಿದ್ಧವಾಗಿ ನಿಂತಿರುವ ರಷ್ಯಾಕೂಡ ಈ ಪಂಚ ಶೀಲದ ತತ್ತ್ವಗಳನ್ನು ಒಪ್ಪಿಕೊಂಡಿವೆ. ಬಾಂಡುಂಗ್ ಸಮ್ಮೇಳನದಲ್ಲಿ ೨೯ ರಾಷ್ಟ್ರಗಳವರು ಈ ತತ್ತ್ವಗಳನ್ನೊಪ್ಪಿಕೊಂಡರು. ಅಮೆರಿಕಾ

ಇಂಗ್ಲೆಂಡುಗಳೂ ಈ ತತ್ತ್ವವನ್ನು ವಿವೇಚಿಸುತ್ತಿದ್ದಾರೆ. ಅವರೂ ಇದನ್ನು ಒಪ್ಪಿಕೊಂಡರೆ ಯುದ್ಧ ಭೀತಿ ತಪ್ಪುತ್ತದೆ. ಹದಿನೆಂಟು ಅಕ್ಷೋಹಿಣೀ ಸೈನ್ಯವನ್ನು ಉಳಿಸಲಾಗದ ಕೃಷ್ಣನ ಸಂಧಿ ಪ್ರಯತ್ನಕ್ಕಿಂತಾ ನೆಹರೂರವರ ಶಾಂತಿಯತ್ನ ಕೀರ್ತಿಯುತವಾಗುತ್ತದೆ.

ಇಷ್ಟು ಪ್ರಯತ್ನದಿಂದಲೇ ನೆಹರೂರವರು ಪ್ರೀತರಾಗಿ ಕುಳಿತಿಲ್ಲ. ತಮ್ಮ ಸುತ್ತ ಪಂಚಶೀಲದ ಸಹಬಾಳುವೆಯ ತತ್ತ್ವವನ್ನು ಒಪ್ಪಿಕೊಂಡು ಎರಡು ಅಸ್ತ್ರಶಕ್ತಿಯ ರಾಷ್ಟ್ರಗಳ ಪ್ರಭಾವಕ್ಕೂ ಸಿಲುಕದಂತಹ ಶಾಂತರಾಷ್ಟ್ರಗಳ ಗುಂಪೊಂದನ್ನು ಕಟ್ಟುತ್ತಿದ್ದಾರೆ, ಬೆಳೆಸುತ್ತಿದ್ದಾರೆ. ಈಗಿನ ಭಯಗ್ರಸ್ತವಾದ ಪ್ರಪಂಚದಲ್ಲಿ ಅವರೊಬ್ಬರೇ ಆಶಾದೀವಿಗೆಯ ಬೆಳಕಾಗಿದ್ದಾರೆ.

ಮಹಾಭಾರತದಲ್ಲಿ ಶ್ರೀ ಕೃಷ್ಣನ ರಾಜಕೀಯ ಯಾವ ಧರ್ಮ ತತ್ತ್ವಗಳ ಮೇಲೆ ಸಾಗುತ್ತಿತ್ತೋ ನೆಹರೂರವರ ರಾಜಕೀಯವೂ ಅಂತಹ ತತ್ತ್ವದ ಮೇಲೆಯೇ ನಡೆಯುತ್ತಿದೆ. ಆದರೆ ಅವರು ಅದಕ್ಕೆ ಧರ್ಮದ ಗುಣವಾಚಕವನ್ನು ಉಪಯೋಗಿಸುತ್ತಿಲ್ಲ ಅಷ್ಟೆ. ಕೃಷ್ಣನ ಧರ್ಮಸೂತ್ರ 'ಪರೋಪಕಾರ ಪುಣ್ಯಾಯ ಪಾಪಾಯ ಪರಪೀಡನಂ' ಎಂಬಂತೆ ಹತ್ತು ಮಂದಿಗೆ ಉಪಕಾರವಾಗುವುದೇ ಪುಣ್ಯ, ಧರ್ಮ; ಪರಪೀಡನೆಯೇ ಪಾಪ — ಎಂಬುದು. ಒಂದು ಕಡೆ ಅನ್ಯಾಯವಾಗುತ್ತಿದ್ದರೆ ಅವನು ಅದನ್ನು ಪ್ರತಿಭಟಿಸದೆ ಬಿಡುತ್ತಿದ್ದಿಲ್ಲ. ತನ್ನ ಕೈಲಾಗದಿದ್ದರೆ ಇತರರ ಸಹಾಯದಿಂದ ಅದನ್ನು ತಿದ್ದುತ್ತಿದ್ದನು. ಜರಾಸಂಧ, ರಾಜಕುಮಾರರನ್ನು ಬಲಿಗೊಡಬೇಕೆಂದಿದ್ದಾಗ ತನ್ನ ಕೈಲಾಗದಿದ್ದರೆ ಭೀಮಾರ್ಜುನರ ಸಹಾಯದಿಂದ ಅವನನ್ನು ಕೊಂದನು. ಹಾಗೆಯೇ ಒಂದು ಅಧರ್ಮ ಯುದ್ಧ ಕೈಗೂಡಿದಾಗ ದುಷ್ಟರಾದ ಕೌರವರು ತನ್ನ ಮಾತನ್ನು ಕೇಳುವುದಿಲ್ಲವೆಂದು ತಿಳಿದಿದ್ದರೂ ಅವನು ಸಂಧಿಪ್ರಯತ್ನವನ್ನು ಬಿಡಲಿಲ್ಲ. ಒಂದು ಅನ್ಯಾಯ ನಡೆಯುತ್ತಿರುವಾಗ ಅದು ಅನ್ಯಾಯ ಎಂದು ತಿಳಿದವನು ಅದನ್ನು ನಿಲ್ಲಿಸುವುದಕ್ಕೆ ಪ್ರಯತ್ನಪಡದೆ ಇರಬಾರದು. ಅದರಿಂದ ಆ ಅನ್ಯಾಯ ನಡೆಯುವುದು ತಪ್ಪದಿದ್ದರೂ ಆ ತಡೆಗಟ್ಟುವ ಪ್ರಯತ್ನಕ್ಕೆ ಪುಣ್ಯ ಬಂದೇ ಬರುತ್ತದೆ. ಅದೇ ಧಾರ್ಮಿಕ ನಡತೆ ಎಂಬುದು ಕೃಷ್ಣನ ಮತ. ಅದರಂತೆ ಅವನು ಸಂಧಿಪ್ರಯತ್ನಕ್ಕೆ ಕೈಹಾಕಿದನು. ಹಾಗೆಯೇ ನೆಹರೂರವರೂ

ನಡೆಯುತ್ತಿದ್ದಾರೆ. ಅವರ ಮಾತನ್ನೇ ಉದಾಹರಿಸುವುದಾದರೆ: "ದೂರ ದಲ್ಲಿ ಕಾಣುವ ಪರ್ವತವನ್ನು ಸಮೀಪಿಸಿ ಆರೋಹಣಗೈಯುವುದು ಸುಖಕರವೆನಿಸುತ್ತದೆ; ಪರ್ವತ ಶೃಂಗವೂ ಬಾರೆಂದು ಸಂಜ್ಞೆ ಮಾಡುತ್ತದೆ. ಸಮೀಪ ಸಾರಿದಾಗ ಮಾತ್ರ ಎಡರುಗಳು ಕಂಡುಬಂದು ಮೇಲಕ್ಕೇರಿ ದಂತೆಲ್ಲಾ ಪ್ರಯಾಸ ಹೆಚ್ಚುತ್ತಾ ಆ ಶಿಖರವೆಲ್ಲಿಯೋ ಮೇಘಮಂಡಲದಲ್ಲಿ ಅದೃಶ್ಯವಾಗುವುದು. ತಥಾಪಿ ಏರುವ ಪ್ರಯತ್ನಲಾಭವೇ ಯೋಗ್ಯ ಪ್ರಾಪ್ತಿ: ಪ್ರಯತ್ನದಲ್ಲಿಯೇ ಸಂತೋಷವುಂಟು, ತೃಪ್ತಿಯುಂಟು. ಪರಿಣಾಮಕ್ಕಿಂತಲೂ ಪ್ರಯತ್ನವೇ ಪ್ರಾಯಶಃ ಜೀವನದಲ್ಲಿ ಶ್ರೇಷ್ಠ ವಾದುದು. ಅನೇಕ ವೇಳೆಗಳಲ್ಲಿ ಸರಿಯಾದುದನ್ನು ತಿಳಿದುಕೊಳ್ಳಲು ಕಷ್ಟ: ತಪ್ಪಾದುದನ್ನು ತಿಳಿದುಕೊಳ್ಳುವುದು ಸುಲಭ. ತಪ್ಪೆಂದು ತಿಳಿದು ದನ್ನು ತಪ್ಪಿಸಿಕೊಳ್ಳುವಷ್ಟೇ ಸಾಕು. ದೊಡ್ಡತನ ತುಂಬಿದ್ದ ಸಾಕ್ರೆಟೀಸನ ಮಾತುಗಳನ್ನು ವಿನೀತನಾಗಿ ಹೇಳಿಕೊಳ್ಳಬಹುದಾದರೆ ಇಷ್ಟನ್ನೇ ಹೇಳಿ ಕೊಂಡೇನು. 'ಮರಣವೆಂಬುದೇನೋ ನಾನರಿಯೆ, ಒಳ್ಳೆಯದೇ ಆಗಿರ ಬಹುದು; ಅದನ್ನು ಕಂಡು ನನಗೆ ಅಂಜಿಕೆಯಿಲ್ಲ. ಆದರೆ ತನ್ನ ಪ್ರಾಕೃತ ವನ್ನು ವಂಚಿಸುವುದು ದೋಷವೆಂಬ ಪ್ರಜ್ಞೆ ಇದೆ. ತಪ್ಪೆಂದು ನಿರ್ಧರ ವಾದುದನ್ನು ತ್ಯಾಗಮಾಡಿ ಒಪ್ಪಾಗಿರಬಹುದೆಂದು ಮನಸ್ಸಿಗೆ ತಿಳಿದುದನ್ನು ಆರಿಸಿಕೊಳ್ಳುವೆನು." ಇದು ನೆಹರೂರವರ ಜೀವನದ ಗುರಿ. ಆ ದಾರಿಯಲ್ಲಿ ಕಷ್ಟವಿದೆ ಎನ್ನುವುದು ಅವರಿಗೆ ಗೊತ್ತು. ಆದರೂ ಪ್ರಪಂಚಕ್ಕೆ ನಾಶದ ಭೀತಿ ಇದೆ ಎಂದು ತಿಳಿದಾಗ ಇತರ ರಾಷ್ಟ್ರಗಳಲ್ಲಿ ಶಾಂತಿಸಂದೇಶವನ್ನು ಸಾರುತ್ತಾ ಅವರ ಸಹಾಯದಿಂದ ಪ್ರಪಂಚ ನಾಶವಾಗುವುದನ್ನು ತಪ್ಪಿಸಲು ಪ್ರಯತ್ನಿಸುತ್ತಿದ್ದಾರೆ. ಹಿಂದೆ ಕೊರಿಯಾ ಯುದ್ಧ ಸಮಯದಲ್ಲಿ ಭಾರತಕ್ಕೆ ಅಂತರರಾಷ್ಟ್ರೀಯ ರಾಜಕಾರಣದಲ್ಲಿ ಇಂದಿನಗೌರವ ಸ್ಥಾನಮಾನಗಳಿರಲಿಲ್ಲ. ಆದರೂ ಕೃಷ್ಣ ಸಂಧಿಪ್ರಯತ್ನ ನಡೆಸಿದಂತೆ ಕೊರಿಯ ಯುದ್ಧದ ನಿಲುಗಡೆಗೆ ಷರತ್ತುಗಳನ್ನು ಸೂಚಿಸಿದರು. ದೈವವಶಾತ್ ಎರಡು ಪಕ್ಷಗಳವರೂ ಇವರ ಸಂಧಾನಗಳನ್ನೊಪ್ಪಿಕೊಂಡರು. ಯುದ್ಧಮಾಡುವುದಕ್ಕೆ ಕಳುಹಿಸ ಬೇಕಾದ ಭಾರತೀಯ ಸೈನ್ಯವನ್ನು ಶಾಂತಿ ಸ್ಥಾಪಿಸುವುದಕ್ಕಾಗಿ ಕಳುಹಿಸುವ ಸುಯೋಗ ಒದಗಿತು. ಅಲ್ಲಿಂದೀಚೆಗೆ ನಮ್ಮ ದೇಶದ ಕೀರ್ತಿಯೂ

ನಮ್ಮ ಸೈನ್ಯದ ಖ್ಯಾತಿಯೂ ಹೆಚ್ಚಾಗಿ, ವಿಯಟ್‌ನಾಮ್ ಮುಂತಾದ ದೇಶಗಳಿಗೆ ಶಾಂತಿಗಾಗಿ ಶ್ರಮಿಸುವ ಸೈನ್ಯಗಳನ್ನು ಕಳುಹಿಸುವ ಕರೆ ಬರುತ್ತಿದೆ.

ಹೀಗೆ ಭಾರತ ಸಂಸ್ಕೃತಿಯ ತಳಹದಿಯ ಮೇಲೆ ಮುನ್ನಡೆಯುತ್ತಿರುವ ನೆಹರೂರವರ ವಿದೇಶ ರಾಜಕೀಯನೀತಿ ಪಂಚಶೀಲದಿಂದ ಪ್ರಪಂಚದ ಭಯವನ್ನು ನಿವಾರಿಸುತ್ತಾ ತನ್ನ ಕೀರ್ತಿಯನ್ನು ಪ್ರಸರಿಸುತ್ತಾ ಲೋಕಕ್ಕೇ ಒಂದು ಆದರ್ಶವಾಗಿ ಮುನ್ನಡೆಯುತ್ತಿದೆ.

# ೯. ವಿದೇಶಾಂಗ ಮಂತ್ರಿ ನೆಹರು

ನೆಹರೂರವರು ಸ್ವತಂತ್ರಭಾರತದ ಪ್ರಥಮ ವಿದೇಶಾಂಗ ಮಂತ್ರಿಗಳು. ಭಾರತಕ್ಕೆ ಸ್ವಾತಂತ್ರ್ಯ ಬರುವುದಕ್ಕೆ ಮುಂಚೆ ಅದು ಇಂಗ್ಲಿಷರ ಅಧೀನ ರಾಜ್ಯವಾದುದರಿಂದ ಪ್ರಪಂಚದ ಇತರ ರಾಷ್ಟ್ರಗಳಲ್ಲಿ ನೆಲೆಸಿದ್ದ ಇಂಗ್ಲಿಷ್ ಪ್ರತಿನಿಧಿಗಳು ಭಾರತದ ಪ್ರಶ್ನೆಗಳಿಗೆ ಜವಾಬುದಾರರಾಗಿದ್ದರು. ಸ್ವಾತಂತ್ರ್ಯ ಬಂದಮೇಲೆ ಪ್ರಪಂಚದ ವಿವಿಧ ರಾಷ್ಟ್ರಗಳಲ್ಲಿ ಭಾರತಕ್ಕೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಸಂಪರ್ಕಹೊಂದಲು ಭಾರತದ ಪ್ರತಿನಿಧಿಗಳನ್ನೇ ಇಡಬೇಕಾಯಿತು. ಅದಕ್ಕೆ ತಯಾರಾದ ವಿಶೇಷ ಸಿಬ್ಬಂದಿ—ಭಾರತದ ವಿದೇಶಾಂಗ ನೀತಿಯನ್ನು ರೂಪಿಸಬಲ್ಲ ನುರಿತ ರಾಜಕಾರಿಣಿಗಳು—ಬೇಕು. ಅಂತಹ ಸಿಬ್ಬಂದಿಯನ್ನು ಇಂಗ್ಲೀಷಿನವರು ತಯಾರು ಮಾಡಿರಲಿಲ್ಲವಾದ್ದರಿಂದ ಅವರ ಅಭಾವ ಬಹಳವಾಗಿ, ನೆಹರೂರವರೊಬ್ಬರ ಮೇಲೆಯೇ ಬಹಳ ಜವಾಬುದಾರಿ ಬಿದ್ದಿದೆ. ಇಂದಿನ ವಿದೇಶಾಂಗ ಕಚೇರಿಯನ್ನೆಲ್ಲಾ ನೆಹರೂರವರೇ ತಮ್ಮ ಸ್ವಂತ ಶ್ರಮದಿಂದ ಕಟ್ಟಿದ್ದಾರೆ. ಅದು ಈಗ ತುಂಬಾ ದಕ್ಷತೆಯಿಂದ ಕೆಲಸ ಮಾಡುತ್ತಿದೆ.

ಸ್ವಾತಂತ್ರ್ಯ ಬರುವ ಮೊದಲಿನಿಂದಲೂ ನೆಹರೂರವರಿಗೆ ದಲಿತ ರಾಷ್ಟ್ರಗಳ ಬಗ್ಗೆ ತುಂಬಾ ಸಹಾನುಭೂತಿ. ಹಿಂದೆ ಅಬಿಸೀನಿಯಾ ಆಕ್ರಮಣಕಾಲದಲ್ಲೂ, ಚೀನಾ ಆಕ್ರಮಣಕಾಲದಲ್ಲೂ ಅವರು ತೋರಿದ ಸಹಾನುಭೂತಿಯನ್ನು ನೋಡಿದ್ದೇವೆ. ಮುಖ್ಯ ಮಂತ್ರಿಯಾದ ತರುಣದಲ್ಲೇ ಜಾವ, ಸುಮಾತ್ರಾ ದ್ವೀಪಗಳಲ್ಲಿ ಡಚ್ಚರು ಯುದ್ಧ ಹೂಡಿದರು. ಆಗ ನೆಹರೂರವರು ದೆಹಲಿಯಲ್ಲಿ ಏಷ್ಯಾ ರಾಷ್ಟ್ರಗಳ ಸಮ್ಮೇಳನವನ್ನು ಸೇರಿಸಿ ಇಂಡೋನೇಷಿಯಾ ರಾಷ್ಟ್ರಕ್ಕೆ ಸಹಾನುಭೂತಿಯನ್ನು ತೋರಿಸಿದರು; ಡಚ್ಚರ ಆಕ್ರಮಣ ತಡೆಗಟ್ಟುವಂತೆ ಮಾಡಿದರು. ಪಾಶ್ಚಿಮಾತ್ಯ ರಾಷ್ಟ್ರಗಳು ಏಷ್ಯವನ್ನು ಉಪೇಕ್ಷಿಸಿದಾಗ ಕೊಲಂಬೋದಲ್ಲಿ ಪಂಚರಾಷ್ಟ್ರಗಳ ಸಮ್ಮೇಳನ ಸಮಾವೇಶವಾಯಿತು. ಅದರಿಂದ ಏಷ್ಯಾ ಜಾಗೃತವಾಗಿದೆ. ಹಿಂದಿನಹಾಗೆ ನಾವು ಅವರನ್ನು ಆಳುವುದಾಗುವುದಿಲ್ಲ—ಎಂಬ ಪಾಠವನ್ನು ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಕಲಿಸಿದಂತಾಯಿತು. ಈ ಮಧ್ಯೆ ಪೂರ್ವ

ಪಶ್ಚಿಮ ಪಾಕೀಸ್ತಾನಗಳ ಮತೀಯ ಧೋರಣೆಯಿಂದ ಭಾರತೀಯರಿಗೂ ಪಾಕೀಸ್ತಾನದವರಿಗೂ ಎರಡು ದಿಕ್ಕುಗಳಲ್ಲೂ ನಿತ್ಯ ಘರ್ಷಣೆ ಷುರುವಾಯಿತು. ನೆಹರೂರವರು ಅಂದಿನ ಪಾಕೀಸ್ತಾನದ ಮಂತ್ರಿಯಾಗಿದ್ದ ಲಿಯಾಖತ್ತಾಲಿ ಖಾನರೊಡನೆ ಒಪ್ಪಂದ ಮಾಡಿಕೊಂಡು ಆ ಘರ್ಷಣೆಯನ್ನು ತಡೆಗಟ್ಟಿದರು. ಕಾಶ್ಮೀರದ ಪ್ರಶ್ನೆಯಂತೂ ಇನ್ನೂ ನಿರ್ಧರವಾಗದೆ ಇದೆ. ಆದರೆ ಯುದ್ಧವಾಗುತ್ತಿದುದನ್ನು ನಿಲ್ಲಿಸಿ ಯಾವುದಾದರೂ ಒಂದು ರೀತಿ ಇತ್ಯರ್ಥವಾಗುವವರೆಗೂ ಯಾರೂ ಮುಂದುವರೆಯಬಾರದೆಂದು ಯುದ್ಧ ಸ್ತಂಭನದ ಒಪ್ಪಂದವನ್ನು ಮಾಡಿಕೊಂಡರು. ಬ್ರಿಟಿಷರು ಹೊರಟುಹೋದರೂ ಫ್ರೆಂಚರು ಮತ್ತು ಪೋರ್ಚುಗೀಸರು ಪುಟ್ಟ ಪುಟ್ಟ ಪ್ರದೇಶಗಳನ್ನು ಆಳುತ್ತಿದ್ದರು. ನಾಲ್ಕಾರುವರುಷ ಅವರೊಡನೆ ಶಾಂತವಾದ ಸಂಧಾನವಾದನಂತರ ಫ್ರೆಂಚರು ತಮ್ಮ ಸ್ವಾಸ್ತ್ಯಗಳನ್ನು ಭಾರತಕ್ಕೆ ಬಿಟ್ಟುಕೊಟ್ಟರು. ಆದರೆ ಪೋರ್ಚುಗೀಸರು ಮಾತ್ರ ಗೋವಾ, ಡಯು, ಡಾಮನ್—ಪ್ರಾಂತಗಳನ್ನು ಬಿಡದೆ ಇನ್ನೂ ಮೂರ್ಖತೆಯಿಂದಲೇ ಹಟಹಿಡಿದಿದ್ದಾರೆ. ಮನಸ್ಸುಮಾಡಿದರೆ ಅವನ್ನು ಒಂದು ದಿನದಲ್ಲಿ ಆಕ್ರಮಿಸಿಕೊಳ್ಳುವ ಶಕ್ತಿಯಿದ್ದರೂ ನೆಹರೂರವರ ವಿದೇಶಾಂಗ ನೀತಿ ಶಾಂತರೀತಿಯದಾದ್ದರಿಂದ ಇನ್ನೂ ವ್ಯವಹಾರ ನಡೆಯುತ್ತಲೇ ಇದೆ. ಈ ಗೋವಾ ಕಾಶ್ಮೀರದ ಪ್ರಶ್ನೆಗಳು ತೊಡಕಾಗಿ ಕುಳಿತುಕೊಂಡಿವೆ.

ಸುತ್ತಮುತ್ತಲ ರಾಷ್ಟ್ರಗಳಿಗೂ ಭಾರತಕ್ಕೂ ಯಾವಾಗಲೂ ಸ್ನೇಹ ಸೌಹಾರ್ದ ಸಹಕಾರಗಳಿರಬೇಕೆಂಬುದು ನೆಹರೂರವರ ಆಸೆ. ನೆರೆರಾಷ್ಟ್ರವಾದ ಬರ್ಮ ಇಂಡೊನೇಷಿಯಾಗಳೊಡನೆ ನೆಹರೂರವರು ತುಂಬಾ ಸ್ನೇಹವನ್ನು ಬೆಳಸಿದ್ದಾರೆ. ಪರಸ್ಪರ ಹಣಕಾಸು ಧನಧಾನ್ಯಗಳ ಸಹಾಯ, ವೈಜ್ಞಾನಿಕ ಪರಿಣತರ ನೆರವು ಎರವು, ವಿದೇಶಾಂಗನೀತಿಯಲ್ಲಿ ಪರಸ್ಪರ ಸಮಾಲೋಚನೆ—ಇವುಗಳಿಂದ ಆ ಸ್ನೇಹದ ಅಭಿವೃದ್ಧಿಯಾಗುತ್ತಿದೆ. ನೇಪಾಳ ಭೂತಾನ ಪ್ರದೇಶಗಳು ಭಾರತದಿಂದ ಸಹಾಯಹೊಂದಿ ಸ್ನೇಹದಿಂದಿವೆ. ಹಾಗೇ ಹಿರಿಯ ನೆರೆರಾಷ್ಟ್ರವಾದ ಚೀನಾ-ಭಾರತಗಳಿಗೆ ಗಾಢವಾದ ಮೈತ್ರಿ ಬೆಳೆಯುತ್ತಿದೆ. ಚೀನಾ ಪ್ರಧಾನಿ ಚೂ-ಎನ್-ಲೈರವರು ಭಾರತಕ್ಕೆ ಭೇಟಿಕೊಟ್ಟರು. ನೆಹರೂರವರೂ ಆಹ್ವಾನಿತರಾಗಿ

ಚೀನಾಕ್ಕೆ ಹೋಗಿ ಬಂದರು. ವಿಶ್ವಸಂಸ್ಥೆಯಲ್ಲಿ ಚೀನಾದ ಪ್ರಾತಿನಿಧ್ಯಕ್ಕಾಗಿ ಭಾರತ ವಕಾಲತ್ತು ವಹಿಸಿದೆ. ಇನ್ನೊಂದು ಮಹಾ ಪ್ರಬಲವಾದ ನೆರೆರಾಷ್ಟ್ರ ರಷ್ಯ. ಅಲ್ಲಿಗೂ ನೆಹರೂರವರು ಆಹ್ವಾನಿತರಾಗಿ ಹೋಗಿ ಬಂದರು. ಅದೊಂದು ಅಭೂತಪೂರ್ವ ಸ್ವಾಗತ. ನೆಹರೂರವರು ರಷ್ಯಾದ ಸ್ನೇಹವನ್ನೂ ಸಂಪಾದಿಸಿದ್ದಾರೆ. ಹಾಗೇ ಯುಗೋಸ್ಲೋವಿಯದ ಮಾರ್ಷಲ್ ಟಿಟೋ ಭಾರತಕ್ಕೆ ಭೇಟಿ ಕೊಟ್ಟಮೇಲೆ ನೆಹರೂರವರು ಅಲ್ಲಿಗೂ ಹೋಗಿ ಬಂದರು. ಈಜಿಪ್ಟ್ ದೇಶವೂ ಭಾರತದೊಂದಿಗೆ ಸ್ನೇಹದಿಂದಿದೆ. ಈ ಎಲ್ಲ ರಾಷ್ಟ್ರಗಳವರೂ ನೆಹರೂರವರೊಡನೆ ಪಂಚಶೀಲದ ತತ್ತ್ವಗಳಿಗೆ ಸಹಿ ಹಾಕಿದ್ದಾರೆ.

ದಕ್ಷಿಣ ಆಫ್ರಿಕದ ಯೂರೋಪಿಯನ್ ಸರ್ಕಾರ ಅಲ್ಲಿರುವ ಭಾರತೀಯ ಜನಾಂಗದವರನ್ನೂ ಸ್ಥಳವಂದಿಗರಾದ ಕಪ್ಪು ಜನರನ್ನೂ ವಿಚಿತ್ರವಾಗಿ ಹಿಂಸಿಸುತ್ತಿದೆ. ವರ್ಣದ್ವೇಷಕ್ಕೆ ಶತ್ರುವಾಗಿರುವ ಭಾರತ ಅದನ್ನು ಪ್ರತಿಭಟಿಸಿರುವುದರಿಂದ ಅದು ಭಾರತದ ಮೇಲೆ ಕೋಪಗೊಂಡಿದೆ. ನ್ಯಾಯ ಪಕ್ಷಪಾತಿಯಾಗಿ ಉತ್ತಮ ತತ್ತ್ವಗಳನ್ನು ಪ್ರತಿಪಾದಿಸುತ್ತಲಿರುವ ಭಾರತ ಅದಕ್ಕೆ ಲಕ್ಷ್ಯಮಾಡುತ್ತಿಲ್ಲ. ಹಾಗೇ ಸಿಲೋನಿನ ಭಾರತೀಯರ ಪ್ರಶ್ನೆಯೂ ಬಗೆಹರಿಯದೆ ಇದೆ.

ನೆಹರೂರವರ ವಿದೇಶಾಂಗ ನೀತಿ ಎರಡು ತತ್ತ್ವಗಳ ಮೇಲೆ ನಿಂತಿದೆ. ಮೊದಲನೆಯದು, ಯಾವ ಪ್ರಬಲರಾಷ್ಟ್ರಗಳ ಗುಂಪಿಗೂ ಸೇರದೆ ಸ್ವತಂತ್ರವಾದ ತಾಟಸ್ಥ್ಯನೀತಿಯನ್ನು ಅನುಸರಿಸತಕ್ಕದ್ದು ಮತ್ತು ಎರಡನೆಯದು ಪಂಚಶೀಲದ ತತ್ತ್ವದಿಂದ ರಾಷ್ಟ್ರರಾಷ್ಟ್ರಗಳಿಗೆ ಸೌಹಾರ್ದ ಸಹಾನುಭೂತಿಯನ್ನು ಕಲ್ಪಿಸುವುದು. ಭಾರತ ಮೊದಲು ತಟಸ್ಥರಾಷ್ಟ್ರವಾಗಿರುವುದೆಂದು ಹೇಳಿದಾಗ ಪ್ರಪಂಚಕ್ಕೆ ಪ್ರಪಂಚವೇ ಮೂಗುಮುರಿಯಿತು. ಈಗ ಭಾರತದ ಮೇಲ್ಪಂಕ್ತಿಯಲ್ಲಿ ಅಂತಹ ತಟಸ್ಥರಾಷ್ಟ್ರಗಳ ಗುಂಪೊಂದು ಬೆಳೆಯುತ್ತಿರುವಾಗ, ಭಾರತದ ಈ ತತ್ತ್ವವನ್ನು ಪ್ರಪಂಚವೇ ಗೌರವದಿಂದ ಕಾಣುವುದಕ್ಕೆ ಷುರುಮಾಡಿದೆ. ಹಾಗೇ ಪಂಚಶೀಲದ ತತ್ತ್ವವೂ ದಿನದಿನಕ್ಕೆ ಪ್ರಸರಿಸುತ್ತಿದೆ. ಬರ್ಮ, ಇಂಡೋನೇಷ್ಯ, ಚೈನ, ರಷ್ಯ, ಯುಗೋಸ್ಲೋವಿಯಾ, ಈಜಿಪ್ಟ್ ಮೊದಲಾದ ರಾಷ್ಟ್ರಗಳು ಪಂಚಶೀಲವನ್ನೊಪ್ಪಿ

ಕೊಂಡಿವೆ. ನೇಟೊ ಸಿಯಾಟೊದಂತಹ ಮಿಲಿಟರಿ ಒಪ್ಪಂದಗಳ ಹಾವಳಿ ಹೆಚ್ಚಾದಾಗ ನೆಹರೂರವರು ಏಷ್ಯನ್-ಆಫ್ರಿಕನ್ ಸಮ್ಮೇಳನವೊಂದನ್ನು ಕೂಡಿಸಿದರು. ಚೈನಾ ಕೂಡಿ ೨೯ ರಾಷ್ಟ್ರಗಳ ಪ್ರತಿನಿಧಿಗಳು ಅದರಲ್ಲಿ ಭಾಗವಹಿಸಿ ಪಂಚಶೀಲದ ತತ್ತ್ವವನ್ನೊಪ್ಪಿಕೊಂಡುವು. ಅಮೆರಿಕಾ ರಷ್ಯಾಗಳು ಆಟಂ, ಹೈಡ್ರೋಜನ್, ಕೊಬಾಲ್ಟ್ ಬಾಂಬುಗಳಂತಹ ಮಾರಕಾಸ್ತ್ರಗಳನ್ನು ಸೃಷ್ಟಿಮಾಡಿ ಪ್ರಪಂಚವನ್ನೇ ಯುದ್ಧಭಯದಲ್ಲಿ ಮುಳುಗಿಸಿವೆ, ಈ ಭಯನಿವಾರಣೆಗೆ ಮಾರ್ಗ ಪಂಚಶೀಲದ ಮಾರ್ಗ, ಭಾರತದ ಮಾರ್ಗ, ನೆಹರೂರವರ ಮಾರ್ಗ. ನೆಹರೂರವರು ಯುದ್ಧ ಭಯದ ಎದುರಾಗಿ ಅದರ ನಿವಾರಣೆಗಾಗಿ ಪಂಚಶೀಲ ಪ್ರಭಾವದ ಭೌಗೋಲಿಕ ಪ್ರದೇಶವೊಂದನ್ನೇ ಸೃಷ್ಟಿಸುತ್ತಿದ್ದಾರೆ. ಯುದ್ಧ ಭಯವನ್ನು ತಪ್ಪಿಸುತ್ತಿದ್ದಾರೆ. ಯಾವ ಅಣುಶಕ್ತಿಯಿಂದ ಮಾರಕಾಸ್ತ್ರಗಳನ್ನು ತಯಾರಿಸುತ್ತಿದ್ದಾರೋ ಅದೇ ಅಣುಶಕ್ತಿಯನ್ನು, ಪ್ರಪಂಚಕ್ಕೆ ಉಪಯೋಗವಾಗುವ ರೀತಿಯಲ್ಲಿ, ಶಾಂತಿಸಾಧನಗಳಿಗೆ ಉಪಯೋಗಿಸಬೇಕೆಂದು ಹೇಳುತ್ತಿದ್ದಾರೆ. ಅಂತಹ ಪ್ರಯತ್ನ ಭಾರತದಲ್ಲೂ ನಡೆಯುತ್ತಿದೆ. ಸ್ವಾತಂತ್ರ್ಯ ಬಂದ ತರುಣದಲ್ಲೇ ಅಮೆರಿಕಾ, ನೆಹರೂರವರಿಗೆ ಆಹ್ವಾನಕೊಟ್ಟು ಕರೆಸಿಕೊಂಡು ತನ್ನ ಕಡೆಗೆ ತಿರುಗಿಸಿಕೊಳ್ಳಲು ಪ್ರಯತ್ನಪಟ್ಟಿತು. ಆದರೆ ನೆಹರೂರವರು ಸ್ವತಂತ್ರ ಮಾರ್ಗವನ್ನು ಬಿಟ್ಟುಕೊಡಲಿಲ್ಲ. ರಷ್ಯಾ ಚೀನಾಗಳಿಗೆ ಹೋದಾಗಲೂ ಅಷ್ಟೆ. ನೆಹರೂರವರು ಭಾರತದ ಸ್ವಾತಂತ್ರ್ಯದ ನಿಲುವನ್ನು ಸಾಧಿಸಿಕೊಂಡು ಬಂದಿದ್ದಾರೆ. ಮೂರು ದೇಶಗಳ ಭೇಟಿಗಳಲ್ಲೂ ಭಾರತಕ್ಕೆ ಯಾವ ಯಾವುದರ ಅನುಷ್ಠಾನದಿಂದ ಉಪಯೋಗವಾಗಬಹುದು ಎಂಬುದನ್ನು ತಿಳಿದುಕೊಂಡು ಅದರಂತೆ ಭಾರತವನ್ನು ಪ್ರಗತಿ ಮಾರ್ಗದಲ್ಲಿ ನಡೆಸುತ್ತಿದ್ದಾರೆ. ತಾಟಸ್ಥ್ಯನೀತಿ ಎಂಬುದು ಎರಡು ಹಲ್ಲುಸಾಲುಗಳ ಮಧ್ಯೆ ಇರುವ ನಾಲಿಗೆಯ ಹಾಗೆ ಬಹು ಅಪಾಯದ ಮಾರ್ಗ. ಸ್ವಲ್ಪ ಎಚ್ಚರತಪ್ಪಿದರೂ ತೊಂದರೆಗೆ ಸಿಕ್ಕಿಕೊಳ್ಳಬೇಕಾಗುತ್ತದೆ. ಆದರೆ ನೆಹರೂರವರ ಬುದ್ಧಿವಂತಿಕೆಯಿಂದ ಭಾರತ ತಾಟಸ್ಥ್ಯವನ್ನು ಕಾಪಾಡಿಕೊಂಡು ಬಂದಿರುವುದಲ್ಲದೆ ಇತರ ರಾಷ್ಟ್ರಗಳನ್ನು ತನ್ನ ದಾರಿಗೆ ಎಳೆದುಕೊಂಡು ಪ್ರಪಂಚದ ಶಾಂತಿಗೆ ತಳಹದಿಯನ್ನು ಹಾಕುತ್ತಿದೆ.

ಯುದ್ಧದಲ್ಲಿ ಮುಳುಗಿ ನಾಶವಾಗಬೇಡಿ, ಶಾಂತಿ ಸೌಹಾರ್ದ ಸಹಕಾರಗಳಿಂದ ಬಾಳಿ ಎಂದು ಸಾರಿ ನೆಹರೂರವರು ವಿಶ್ವಪ್ರೇಮವನ್ನು ಬೆಳೆಸುತ್ತಿದ್ದಾರೆ.

ನೆಹರೂರವರು ಭಾರತದ ವಿದೇಶಾಂಗ ನೀತಿಯನ್ನು ರೂಪಿಸುವಾಗ ಕೇವಲ ಭಾರತದ ಏಳಿಗೆಯನ್ನು ಮಾತ್ರ ಗಮನದಲ್ಲಿಟ್ಟುಕೊಂಡಿರುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಸಮಸ್ತ ಪ್ರಪಂಚದ ಭೂಪಟವೇ ಅವರ ಕಣ್ಣ ಮುಂದೆ ನಿಂತಿರುತ್ತದೆ. ಪ್ರಪಂಚದ ಯಾವ ಭಾಗದಲ್ಲಿ ಯುದ್ಧವಾಗುತ್ತಿದ್ದರೂ ಅದನ್ನು ನಿಲ್ಲಿಸಲು ಸಲಹೆಯನ್ನು ಕೊಡಲು ಅವರು ಹಿಂಜರಿಯುವುದಿಲ್ಲ. ಯಾರು ಕೇಳಲಿ ಬಿಡಲಿ ತಮ್ಮ ಅಭಿಪ್ರಾಯವನ್ನು ಸೂಚಿಸಿಯೇ ತೀರುತ್ತಾರೆ. ಹಿಂದೆ ಕೊರಿಯಾ ಯುದ್ಧದಲ್ಲಿ ಹೀಗೇ ಆಯಿತು. ಈಚಿನ ಇಂಡೋ ಚೈನಾ ಯುದ್ಧದಲ್ಲಿ ಹೀಗೇ ಆಯಿತು. ನೆಹರೂರವರು ಯುದ್ಧ ಸ್ತಂಭನದ ಸಲಹೆಗಳನ್ನು ಸೂಚಿಸಿದರು. ದೇವರು ಒಳ್ಳೆಯ ಬುದ್ಧಿ ಕೊಟ್ಟುದರಿಂದ ಆ ಯುದ್ಧಗಳ ಎರಡು ಕಡೆಗಳವರೂ ಅದನ್ನು ಒಪ್ಪಿದರು. ಯುದ್ಧ ನಿಂತಿತು. ಅಷ್ಟು ಮಾತ್ರವಲ್ಲ. ಆ ತಾತ್ಕಾಲಿಕ ಯುದ್ಧಸ್ತಂಭನದ ಕರಾರುಗಳನ್ನು ಪಾಲಿಸುವ ಮೇಲ್ವಿಚಾರಣೆಗಾಗಿ ಭಾರತ ತನ್ನ ಸೈನ್ಯವನ್ನು ಕಳಿಸಿಕೊಡಬೇಕಾಯಿತು. ಒಂದು ಕಾಲಕ್ಕೆ ಯಾವ ಭಾರತದ ಸೈನ್ಯಗಳು ಯುದ್ಧಕ್ಕಾಗಿ ಹೊರಡುತ್ತಿದ್ದುವೋ ಅಂತಹ ಸೈನ್ಯಗಳು ಈಗ ಶಾಂತಿದೂತರಾಗಿ ಶಾಂತಿಪಾಲನೆಗೆ ಹೋಗುವಂತಾಯಿತು. ಪ್ರಪಂಚದಲ್ಲಿ ಇಂತಹ ಕೀರ್ತಿ ಮೊದಲು ದೊರೆತಿರುವುದು ಭಾರತದ ಸೈನ್ಯಗಳಿಗೇ. ಈ ಸಂದರ್ಭದಲ್ಲಿ ನೆಹರೂರವರ ಪ್ರವಾಸೀ ಪ್ರತಿನಿಧಿಯಾದ ಶ್ರೀ ವಿ. ಕೆ. ಕೃಷ್ಣ ಮೆನನ್‌ರವರ ಪ್ರಯತ್ನವನ್ನು ನಾವು ಗಮನಿಸಬೇಕು. ಪ್ರಪಂಚದಲ್ಲಿ ಪೂರ್ವ ಪಶ್ಚಿಮಗಳಿಗಿರುವ ಬಿಕ್ಕಟ್ಟನ್ನು ಕಡಿಮೆಮಾಡಲು ಅವರು ಮಾಡುತ್ತಿರುವ ಸಂತತವಾದ ಪ್ರಯತ್ನ ಅತ್ಯಂತ ಶ್ಲಾಘ್ಯವಾದುದು. ನೆಹರೂರವರ ವಿದೇಶಾಂಗ ನೀತಿಯನ್ನು ಅಕ್ಷರಶಃ ಅರ್ಥಮಾಡಿಕೊಂಡಿರುವವರು ಅವರು. ಜಿನೀವಾದಲ್ಲಿ ಸೇರಿದ ಚತುರ್ಮಹಾರಾಷ್ಟ್ರ ಸಭೆ ತಾ॥ ೨೩–೭–೧೯೫೫ರಲ್ಲಿ ಫಲಪ್ರದವಾಗಿ ಕೊನೆಗೊಂಡಿತು. ಆ ಚತುರ್ಮಹಾರಾಷ್ಟ್ರಗಳ ಮುಖ್ಯರನ್ನು ಶಾಂತಿಮಾರ್ಗಾನ್ವೇಷಣೆಗೆ ಪ್ರೇರಿಸಿದುದು ನೆಹರೂರವರ ಪ್ರಭಾವಶಕ್ತಿ.

ಅವರ ಪ್ರಯತ್ನಗಳು ಪೂರ್ವ ಪಶ್ಚಿಮ ರಾಷ್ಟ್ರಗಳ ನಡುವಣ ಭಿನ್ನಾಭಿಪ್ರಾಯ ನಿವಾರಣೆಗೆ ನೆರವಾದುವು. ಅಲ್ಲದೆ ಲೋಕ ಸಂಪರ್ಕಕ್ಕೆ ವಿಹಿತ ವಾತಾವರಣವನ್ನೂ ಅದು ನಿರ್ಮಾಣಮಾಡಿತು. ಪ್ರಪಂಚ ಇದಕ್ಕೆ ನೆಹರೂರವರಿಗೆ ಎಷ್ಟು ಋಣಿಯಾಗಿದ್ದರೂ ತೀರದು.

ಸ್ವಾತಂತ್ರ್ಯ ಬಂದಕೂಡಲೇ ಭಾರತ ವಿಶ್ವಸಂಸ್ಥೆಯ ಸದಸ್ಯನಾಗಿ ಸೇರಿತು. ಅಂದಿನಿಂದ ಅಲ್ಲಿ ನಮ್ಮ ಪ್ರತಿನಿಧಿಗಳು ಮಾಡಿದ ಭಾಷಣಗಳಿಂದ, ಬಿಕ್ಕಟ್ಟಿನ ಸಂದರ್ಭಗಳ ಮಧ್ಯಸ್ಥಿಕೆಯಿಂದ, ದಲಿತ ರಾಷ್ಟ್ರಗಳ ಪ್ರಗತಿಗಾಗಿ ಮಾಡುತ್ತಿರುವ ಪ್ರಯತ್ನಗಳಿಂದ ಯಾವ ಶಕ್ತಿಯುತವಾದ ರಾಷ್ಟ್ರದ ಬಾಲವನ್ನೂ ಹಿಡಿಯದೆ ನ್ಯಾಯ, ಸತ್ಯಗಳ ಧೀರವಾದ ಮಾರ್ಗವನ್ನು ಧೈರ್ಯದಿಂದ ಪ್ರತಿಪಾದಿಸುತ್ತಿರುವುದರಿಂದ, ಆ ವಿಶ್ವಸಂಸ್ಥೆಯಲ್ಲಿ ಭಾರತದ ಬಗ್ಗೆ ಗೌರವಾದರಣೆಗಳು ದಿನದಿನಕ್ಕೆ ಹೆಚ್ಚಾಗುತ್ತಿವೆ. ಏಳು ವರ್ಷಗಳ ಹಿಂದೆ ಸದಸ್ಯತ್ವ ಕೂಡ ಇಲ್ಲದಿದ್ದ ಭಾರತ ಇಂದು ಪಡೆದಿರುವ ಸನ್ಮಾನ ಗೌರವಗಳನ್ನು ನೋಡಿದರೆ ಪ್ರಪಂಚದ ಪಂಚ ಮಹಾರಾಷ್ಟ್ರಗಳ ಪೈಕಿ ಭಾರತವನ್ನು ಒಂದಾಗಿ ಪರಿಗಣಿಸಬೇಕೆಂಬ ಭಾವ ಬಲಿಯುತ್ತಿದೆ. ಭಾರತದ ಮಿಲಿಟರಿ ಸೈನ್ಯಗಳ ಶಕ್ತಿಯು ಪ್ರಪಂಚದ ರಾಷ್ಟ್ರಗಳ ಗಮನವನ್ನು ಸೆಳೆದು ಅದು ಹೇಳುವ ಮಾತನ್ನು ಕೇಳುವ ಹಾಗೆ ಮಾಡದಿದ್ದರೂ ಭಾರತದ ನೈತಿಕ ಶಕ್ತಿ ಪ್ರಪಂಚದ ಎಲ್ಲ ರಾಷ್ಟ್ರಗಳೂ ಅದು ಹೇಳುವ ಮಾತನ್ನು ಸಾವಧಾನದಿಂದ ಕೇಳಿ ವಿಮರ್ಶಿಸುವಷ್ಟು ಗಮನವನ್ನು ಕೊಡುವಂತೆ ಮಾಡಿವೆ. ಒಮ್ಮೆ ನೆಹರೂರವರೇ ಹೇಳಿದರು : 'ಇನ್ನು ಇಪ್ಪತ್ತು ವರ್ಷಗಳಲ್ಲಿ ಭಾರತ ಪ್ರಪಂಚದ ಮಹಾರಾಷ್ಟ್ರಗಳಲ್ಲಿ ನಾಲ್ಕನೆಯ ಸ್ಥಾನವನ್ನು ಪಡೆಯುತ್ತದೆ'—ಎಂದು. ಅಮೆರಿಕಾ, ರಷ್ಯ, ಚೀನಾ ಮತ್ತು ಭಾರತ—ಇವೇ ಆ ಚತುರ್ರಾಷ್ಟ್ರಗಳು. ಭಾರತದ ಪ್ರಗತಿ, ವಿದೇಶಾಂಗ ನೀತಿಗಳಿಂದ ಭಾರತ ಅಂತಹ ಸ್ಥಾನವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

# ೧೦. ಮಹಾಪ್ರಧಾನಿ ನೆಹರು

ಭಾರತ ಮಹೋನ್ನತವಾಗಿ ಬಾಳಿದ ದೇಶ. ಈಗಿನ ನವನಾಗರೀಕ ರೆನಿಸಿಕೊಳ್ಳುತ್ತಿರುವ ಇಂಗ್ಲೆಂಡ್, ಅಮೆರಿಕ, ಫ್ರಾನ್ಸ್, ರಷ್ಯಾ ಮುಂತಾದ ಮಹಾ ರಾಷ್ಟ್ರಗಳ ಜನ, ಅನಾಗರಿಕರಂತೆ, ಕಾಡುಮೇಡುಗಳಲ್ಲಿ ಅಲೆಯು ತ್ತಿದ್ದಾಗ ಭಾರತ ಅತ್ಯಂತ ಮುಂದುವರೆದ ನಾಗರೀಕ ಜನಾಂಗವಾಗಿತ್ತು. ಅದರ ನಾಗರೀಕತೆ ಪಾಶವೀವೃತ್ತಿಯನ್ನು ನಾಶಮಾಡಿ ಸತ್ಯ ಅಹಿಂಸೆಗಳ ಶಾಂತಮಾರ್ಗವಲ್ಲಿ ಮುಂದುವರೆದಿತ್ತು. ಅದರ ಸಾಹಿತ್ಯ ಸಂಸ್ಕೃತಿ ಎಂದಿಗೂ ಅಳಿಯದ ಪ್ರಪಂಚದ ಆಸ್ತಿ. ಇಂತಹ ದೇಶ ರಾಜಕೀಯ, ಸಾಮಾಜಿಕ ಆಂದೋಲನಗಳಿಗೆ ಸಿಕ್ಕಿ ಸಂಕುಚಿತ ಮನೋವೃತ್ತಿಯನ್ನು ಬೆಳೆಸಿಕೊಂಡು ತನ್ನ ಹಿರಿತನವನ್ನು ಮುಂದುವರೆಸಿಕೊಳ್ಳದೆಹೋಯಿತು. ಅದು ನಿಂತ ಕಡೆ ನಿಂತಿತು. ಆಗ ಪ್ರಪಂಚದ ಇತರ ರಾಷ್ಟ್ರಗಳ ಜನ ನಾಗರೀಕರಾಗುತ್ತಾ ಬಂದರು. ವಿಜ್ಞಾನ ಅಲ್ಲಿ ಬೆಳೆಯಿತು. ನವನಾಗರೀಕತೆ ಅಲ್ಲಿ ಬೆಳೆಯುತ್ತಾ ಬಂದು, ಭಾರತಕ್ಕಿಂತ ಅವು ಮುಂದುವರಿದ ದೇಶ ಗಳೆಂದು ಪರಿಗಣಿತವಾದುವು. ಅವರ ದೃಷ್ಟಿಯಲ್ಲಿ ಭಾರತ ಅನಾಗರಿಕ ರಾಷ್ಟ್ರವಾಯಿತು. ಮುಸಲ್ಮಾನರೇತ್ಯಾದಿ ಪರದೇಶದ ಜನರು ಧಾಳಿ ಯಿಟ್ಟು ಭಾರತವನ್ನು ಆಳಿದರು. ಭಾರತ ಛಿದ್ರ ಛಿದ್ರವಾಗಿ ಒಡೆಯಿತು. ಅಂತಹ ಅನೈಕಮತ್ಯ ಬೆಳೆದ ಕಾಲದಲ್ಲಿ ಇಂಗ್ಲೀಷಿನವರು ಜಗಳವಾಡಿ ಕೊಂಡಿದ್ದ ಸಣ್ಣ ಪುಟ್ಟ ರಾಜರುಗಳನ್ನು ಒಬ್ಬರಾದಮೇಲೊಬ್ಬರಂತೆ ಗೆದ್ದು ಸಮಗ್ರ ಭಾರತವನ್ನೂ ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡರು; ಇನ್ನೂರು ವರ್ಷ ಆಳಿದರು. ತಾವು ನಾಗರೀಕರೆಂದು ಹೇಳಿಕೊಂಡರೂ ಆ ನಾಗರೀ ಕತೆಯ ಪ್ರಯೋಜನವನ್ನು ಅವರು ಭಾರತಕ್ಕೆ ನೀಡಲಿಲ್ಲ. ಅವರು ಎರಡು ಘೋರ ಯುದ್ಧಗಳನ್ನು ಹೂಡಿದರು, ಅದಕ್ಕಾಗಿ ಭಾರತದ ಜನ-ಧನವನ್ನು ಬಲಿಗೊಟ್ಟರು. ಅಂತಹ ಘೋರ ಯುದ್ಧಗಳನ್ನು ಗೆದ್ದವರು ಮಹಾತ್ಮಾ ಗಾಂಧಿಯವರ ಅಹಿಂಸಾ ಅಸಹಕಾರ ಚಳುವಳಿಯನ್ನೆದುರಿಸಲಾರದೆ ಭಾರತವನ್ನು ಬಿಟ್ಟು ಹೊರಟರು.

ಬ್ರಿಟಿಷರು ಭಾರತವನ್ನು ಬಿಟ್ಟುಹೊರಟಾಗ ಭಾರತದ ಸ್ಥಿತಿ ತುಂಬಾ ಶೋಚನೀಯವಾಗಿದ್ದಿತು. ಭಾರತದ ಮಕ್ಕಳು ಅನ್ಯಾದೃಶವಾದ ದಾರಿದ್ರ್ಯದಲ್ಲಿ ತೊಳಲುತ್ತಿದ್ದರು. ಅವರ ಆಹಾರವನ್ನು ಅವರು ಬೆಳೆದುಕೊಳ್ಳಲಾರದೆ ಬರ್ಮಾದಿಂದ ಬರುವ ಅಕ್ಕಿಗೂ, ಮಲಯಾದಿಂದ ಬರುವ ಸಕ್ಕರೆಗೂ ಬಾಯಿಬಿಟ್ಟು ಕುಳಿತಿರಬೇಕಾಗಿತ್ತು; ಇಲ್ಲಿ ತಯಾರಾದ ಬಟ್ಟೆ ಇಲ್ಲಿಯವರಿಗೆ ಸಾಕಾಗುತ್ತಿದ್ದಿಲ್ಲ. ವಾಸಿಸುವುದಕ್ಕೆ ಸರಿಯಾದ ಮನೆಗಳಿರಲಿಲ್ಲ. ಅವಿದ್ಯೆಯು ತಾನೇ ತಾನಾಗಿತ್ತು. ಆರೋಗ್ಯದ ವ್ಯವಸ್ಥೆ ವೈದ್ಯಸಹಾಯಗಳಿರಲಿಲ್ಲ. ಹಳ್ಳಿಗಳ ಪಾಡಂತೂ ಇನ್ನೂ ಶೋಚನೀಯ. ಜೊತೆಗೆ ಘೋರಾಕಾರವಾದ ನಿರುದ್ಯೋಗ ತಾಂಡವವಾಡುತ್ತಿತ್ತು. ಯುದ್ಧಗಳಿಂದ ದೇಶದ ಆರ್ಥಿಕ ಸ್ಥಿತಿ ಶೋಷಿಸಿಹೋಗಿತ್ತು. ಜನ ನಿರ್ವೀರ್ಯರಾಗಿದ್ದರು. ಸಾಲದುದಕ್ಕೆ ಬ್ರಿಟಿಷರು ಭಾರತವನ್ನು ಬಿಟ್ಟುಹೋಗುವಾಗ ಹಾಗೇ ಹೋಗಲಿಲ್ಲ. ಕೋಮುವಾರು ಭೂತವನ್ನೆಬ್ಬಿಸಿ ಭಾರತವನ್ನು ಭಾರತ ಪಾಕೀಸ್ತಾನಗಳೆಂದು ಇಬ್ಭಾಗ ಮಾಡಿದರು. ಸುಮಾರು ಆರುನೂರು ಸಣ್ಣ ಪುಟ್ಟ ದೇಶೀಯ ರಾಜರನ್ನು ಸ್ವತಂತ್ರರೆಂದು ಘೋಷಿಸಿದರು. ಭಾರತದ ಐಕ್ಯತೆಯನ್ನು ಛಿದ್ರ ಛಿದ್ರಮಾಡಿ ಹೋದರು.

ಇಂತಹ ಶೋಚನೀಯಾವಸ್ಥೆಯಲ್ಲಿದ್ದ ಭಾರತದ ಹೊಣೆಗಾರಿಕೆಯನ್ನು ನೆಹರೂರವರು ತಾ॥ ೧೫–೮–೧೯೪೭ ರಲ್ಲಿ ವಹಿಸಿಕೊಂಡರು. ಬ್ರಿಟಿಷರೇನೋ ಭಾರತಕ್ಕೆ ತುಂಬಾ ಅನ್ಯಾಯ ಮಾಡಿದ್ದರು. ಆದರೆ ಬಿಟ್ಟುಕೊಡುವಾಗ ಒಂದು ಬಗೆಯಲ್ಲಿ ದೊಡ್ಡತನವನ್ನೇ ತೋರಿದರು. ರಕ್ತಪಾತವಾಗದಂತೆ ಭಾರತಕ್ಕೆ ಸ್ವಾತಂತ್ರ್ಯ ದೊರೆಯಿತು. ನೆಹರೂರವರು ಬ್ರಿಟಿಷರೊಡನೆ ಸೌಹಾರ್ದದಿಂದಲೇ ಇರಬೇಕೆಂದು ಆಸೆಪಟ್ಟರು. ಬ್ರಿಟಿಷ್ ಒಕ್ಕೂಟ (British Commonwealth) ಕ್ಕೆ ಸೇರಬೇಕೆಂದು ಭಾರತವನ್ನು ಬ್ರಿಟನ್ ಕೇಳಿತು. ನೆಹರೂರವರು ಸಂಪೂರ್ಣ ಸ್ವಾತಂತ್ರ್ಯ ಧೋರಣೆಯವರಾದ್ದರಿಂದ ಭಾರತ ಸರ್ವಸ್ವತಂತ್ರ ಪ್ರಜಾರಾಜ್ಯವಾಗಿರುವುದೆಂದೂ, ಬ್ರಿಟಿಷರು 'ಬ್ರಿಟಿಷ್ ಒಕ್ಕೂಟ'ದಲ್ಲಿನ 'ಬ್ರಿಟಿಷ್' ಎಂಬ ಪದವನ್ನು ತೆಗೆದುಹಾಕಿದರೆ ಆ ಒಕ್ಕೂಟದಲ್ಲಿರುವುದಾಗಿಯೂ ಹೇಳಿದರು. ವಿಶಾಲ ಹೃದಯದಿಂದ ಬ್ರಿಟಿಷರು ಆ ಪದವನ್ನು ತೆಗೆದುಹಾಕಿದರು.

ಬ್ರಿಟಿಷರ ರಾಜ್ಯಾಂಗದ ಚರಿತ್ರೆಯನ್ನು ಬಲ್ಲವರಿಗೆ, ಈ ಬದಲಾವಣೆ ನೆಹರೂರವರು ಸಾಧಿಸಿದ ಒಂದು ಪವಾಡವೆಂದು ಗೊತ್ತಾಗದೆ ಇರದು. 'ಬ್ರಿಟಿಷ್ ಒಕ್ಕೂಟ' ಈಗ ಬರಿಯ 'ಪ್ರಜಾರಾಷ್ಟ್ರಗಳ ಒಕ್ಕೂಟ' (Commonwealth of Nations) ವಾಗಿ, ಭಾರತ ಅದರಲ್ಲಿ ಸೇರಿಕೊಂಡಿದೆ. ಇದರಿಂದ ಈ ಒಕ್ಕೂಟದ ರಾಷ್ಟ್ರಗಳಿಗೆ ವ್ಯಾಪಾರೋದ್ಯೋಗಗಳಲ್ಲಿಯೂ, ಕೈಗಾರಿಕಾ ಪ್ರಗತಿಯಲ್ಲಿಯೂ ಪರಸ್ಪರ ವಿಚಾರವಿನಿಮಯಗಳೂ, ಸಹಕಾರ ಸಹಾಯಗಳೂ ಏರ್ಪಟ್ಟು ಅನುಕೂಲವಾಗುತ್ತಿವೆ.

ನೆಹರೂರವರು ಪ್ರಧಾನ ಮಂತ್ರಿಯಾಗುತ್ತಲೇ ಬ್ರಿಟಿಷರು ತಾವು ಹೋಗುವಕಾಲಕ್ಕೆ ಬಿತ್ತಿದ ವಿಭಜನೆ ಮತ್ತು ದೇಶೀಯ ಸಂಸ್ಥಾನ ಸ್ವಾತಂತ್ರ್ಯಗಳ ಬೀಜಗಳು ಮೊಳೆತವು. ಪಾಕೀಸ್ತಾನವು ತಾನು ಮುಸ್ಲಿಂ ರಾಷ್ಟ್ರವಾಗುವುದೆಂದು ಘೋಷಿಸಿತು. ಅಲ್ಲಿದ್ದ ಹಿಂದುಗಳನ್ನು ಮತಾಂತರಗೊಳಿಸುವುದು ಅಥವಾ ಹಿಂಸೆಪಡಿಸುವುದಕ್ಕೆ ಷುರುವಾಯಿತು. ಅಸಂಖ್ಯಾತ ಹಿಂದುಗಳು ಭಾರತಕ್ಕೆ ವಲಸೆ ಬಂದರು. ಸುಮಾರು ಒಂದೂವರೆ ಕೋಟಿ ಜನ ಹಿಂದುಗಳು ಮುಸ್ಲಿಮರು ತಮ್ಮ ತಮ್ಮ ಮನೆ ಮಠಗಳನ್ನು ಬಿಟ್ಟು ಪಾಕೀಸ್ತಾನದಿಂದ ಭಾರತಕ್ಕೂ, ಭಾರತದಿಂದ ಪಾಕೀಸ್ತಾನಕ್ಕೂ ವಲಸೆ ಹೋದರು. ಪಾಕೀಸ್ತಾನದವರು ಹಾಗೆ ವಲಸೆಹೋದ ಹಿಂದುಗಳ ಆಸ್ತಿ ಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಂಡರು. ಅದರ ಲೇಣಿ ದೇಣಿ ಇನ್ನೂ ಇತ್ಯರ್ಥವಾಗದೆ ಹಾಗೇ ಉಳಿದಿದೆ. ಹಿಂದುಗಳ ಕೊಲೆ ಸುಲಿಗೆ ಮಾನಹಾನಿಗಳು ತಡೆಯಿಲ್ಲದೆ ನಡೆದುವು. ಪಾಕೀಸ್ತಾನದಲ್ಲಿ ಏನೇ ಆಗಲಿ ಭಾರತದಲ್ಲಿ ಆ ಸಾಂಕ್ರಾಮಿಕ ಹಬ್ಬದಂತೆ ನೆಹರೂರವರು ತಡೆದರು. ಹಾಗೆ ವಲಸೆ ಬಂದವರಿಗೆ ಭೂಮಿ ಕಾಣಿಗಳನ್ನು ಕೊಟ್ಟು ಮನೆ ಮಠಗಳನ್ನು ಕಟ್ಟಿಕೊಟ್ಟರು. ಅವರಿಗಾಗಿ ಹೊಸ ಊರುಗಳೇ ನಿರ್ಮಿತವಾದುವು. ಅವರಿಗೆ ಒದಗಿಸುವ ಸೌಕರ್ಯಗಳನ್ನು ನೆನೆಸಿದರೆ, ಭಾರತದ ಪ್ರಜೆಗೂ ನಿರಾಶ್ರಿತನಾಗಿ ಬಂದಿದ್ದರೆ ಚೆನ್ನಾಗಿತ್ತು — ಎನಿಸುವ ಹಾಗಾಗಿದೆ.

ಸ್ವಾತಂತ್ರ್ಯ ಬಂದ ಹೊಸದರಲ್ಲಿ ಎದ್ದ ಇನ್ನೊಂದು ಸಮಸ್ಯೆ ದೇಶೀಯ ಸಂಸ್ಥಾನಗಳದು. ಈ ಸಮಸ್ಯೆಯನ್ನು ಪರಿಹಾರಮಾಡಲು ಸರ್ದಾರ್ ವಲ್ಲಭಾಯಿ ಪಟೇಲರು ನೆಹರೂರವರ ಬೆಂಬಲಿಗರಾಗಿ ನಿಂತರು. ಪಟೇಲರ

ಮನವಿಯನ್ನು ಮನ್ನಿಸಿ ದೇಶೀಯ ಸಂಸ್ಥಾನದ ರಾಜ ಮಹಾರಾಜರುಗಳು ತಮ್ಮ ತಮ್ಮ ಸಂಸ್ಥಾನಗಳನ್ನು ಭಾರತದ ಅಕ್ಕಪಕ್ಕದ ಪ್ರಾಂತಗಳಲ್ಲಿ ವಿಲೀನಗೊಳಿಸಲು ಒಪ್ಪಿದರು. ಹಾಗೂ ಸ್ವಲ್ಪ ಪ್ರತಿಭಟಿಸಿದವರು ತಿರುವಾಂಕೂರು ಮತ್ತು ಹೈದರಾಬಾದು ಸಂಸ್ಥಾನಗಳವರು. ಹೈದರಾಬಾದಿನಲ್ಲಂತೂ ಬಲಪ್ರಯೋಗವನ್ನೇ ಮಾಡಬೇಕಾಯಿತು. ದೇಶೀಯ ಸಂಸ್ಥಾನಗಳಾಗಿ ಸುಮಾರು ಆರುನೂರು ಭಾಗಗಳಾಗಿ ಹರಿದು ಹಂಚಿ ಹೋಗಿದ್ದ ಭಾರತದೇಶ ಐಕ್ಯತೆಯನ್ನು ಸಾಧಿಸಿ ಒಂದು ಸರ್ಕಾರದ ಆಡಳಿತಕ್ಕೆ ಬಂದಿತು. ಭರತಖಂಡ ಸೃಷ್ಟಿಯದಾಗಿನಿಂದ ಸಾಧಿತವಾಗದಿದ್ದ ಪವಾಡ ಅಂದು ಜವಾಹಿರಲಾಲರ ರಾಜನೀತಿ ನೈಪುಣ್ಯದಿಂದ ಸಾಧಿತವಾಯಿತು. ಹಿಂದೆ ಪ್ರಸ್ತಾಪಿಸಿರುವಂತೆ ಕಾಶ್ಮೀರದ ಪ್ರಶ್ನೆಯೊಂದು ಇನ್ನೂ ಉಳಿದುಕೊಂಡಿದೆ.

ಯಾವ ಒಂದು ಸ್ವತಂತ್ರ ರಾಷ್ಟ್ರದಲ್ಲೂ ಅದರ ಪ್ರಜೆಗಳ ಹಕ್ಕು ಬಾಧ್ಯತೆಗಳ ಪ್ರಶ್ನೆ ಮುಖ್ಯವಾದುದು. ಯಾವ ದೇಶದ ಪ್ರಜೆಗೂ ತನ್ನ ಜೀವಿತವನ್ನು ತನಗೆ ತೋರಿದ ರೀತಿಯಲ್ಲಿ ರೂಪಿಸಿಕೊಂಡು ಸ್ವತಂತ್ರವಾಗಿ ಬಾಳಲು ಹಕ್ಕಿರಬೇಕು. ಆ ಹಕ್ಕುಬಾಧ್ಯತೆಗಳು ಅವನಿಗೆ ದೊರಕಬೇಕಾದರೆ ಆ ದೇಶದ ರಾಜ್ಯಾಂಗದಲ್ಲಿ ಅದಕ್ಕೆ ತಕ್ಕ ರಕ್ಷಣೆಗಳಿರಬೇಕು. ಇದಕ್ಕೆ ಮುಖ್ಯವಾಗಿ ಒಂದು ರಾಜ್ಯಾಂಗ ಬೇಕು. ೧೯೪೬ರಲ್ಲಿ ತಾತ್ಕಾಲಿಕ ಸರಕಾರವು ರಚನೆಯಾದಾಗಲೇ ನೆಹರೂರವರು ಭಾರತವು ಎಂತಹ ಧ್ಯೇಯವುಳ್ಳ ರಾಷ್ಟ್ರವಾಗಬೇಕೆಂದು ಯೋಚಿಸಿ ಆ ಶಾಸನ ಸಭೆಯ ಮುಂದೆ 'ಧ್ಯೇಯನಿರೂಪಣೆಯ ನಿರ್ಣಯ' (Objective Resolution) ವೊಂದನ್ನು ಮಂಡಿಸಿದ್ದರು. ಅದು ಆಗ ಅಂಗೀಕೃತವಾಗಿತ್ತು. ಈಗ ನೆಹರೂರವರು ಅಧಿಕಾರಕ್ಕೆ ಬರುತ್ತಲೇ ಭಾರತದ ರಾಜ್ಯಾಂಗರಚನೆಗೆ ಏರ್ಪಾಟುಮಾಡಿದರು. ಭಾರತದ ನಾನಾ ಮೂಲೆಗಳಿಂದ ನ್ಯಾಯಾಂಗ ರಾಜಕೀಯ ಶಾಸ್ತ್ರವೇತ್ತರು, ಪ್ರಜಾಪ್ರತಿನಿಧಿಗಳನ್ನು ಸೇರಿಸಿ ಮೂರು ವರ್ಷಗಳಲ್ಲಿ ಒಂದು ರಾಜ್ಯಾಂಗವನ್ನು ತಯಾರುಮಾಡಿದ್ದಾರೆ. ಹೀಗೆ ತಯಾರಾಗಿರುವ ರಾಜ್ಯಾಂಗ ನೆಹರೂರವರ 'ಧ್ಯೇಯನಿರೂಪಣೆಯ ನಿರ್ಣಯ'ದ ಪ್ರತಿಧ್ವನಿಯೇ ಆಗಿರುವುದನ್ನು ನೋಡಿದರೆ ನೆಹರೂರವರ ತಿಳಿವಳಿಕೆ ಎಷ್ಟು

ಆಳವಾದುದೂ, ತೂಕವುಳ್ಳುದೂ ಆಗಿದೆಯೆಂಬುದು ವ್ಯಕ್ತವಾಗುತ್ತದೆ. ಇದರಿಂದ ವ್ಯಕ್ತಿ ಸ್ವಾತಂತ್ರ್ಯ ಸಂಪೂರ್ಣವಾಗಿ ದೊರಕಿದಂತಾಗಿದೆ. ರಾಜ್ಯಾಂಗರಚನೆ ಬಹು ಕಷ್ಟದ ಕೆಲಸ. ಅದರಲ್ಲಿ ರೂಪಿಸುವ ಒಂದೊಂದು ಪದವನ್ನೂ ಚರ್ಚೆಮಾಡಿ ವಿವೇಚಿಸಿ ಹಾಕಬೇಕಾಗುತ್ತದೆ. ಭಾರತದ ರಾಜ್ಯಾಂಗ ತುಂಬಾ ಉದ್ದವಾಗಿದೆ. ಅಷ್ಟು ದೊಡ್ಡ ರಾಜ್ಯಾಂಗವನ್ನು ಮೂರು ವರ್ಷಗಳ ಅಲ್ಪಕಾಲದಲ್ಲಿ ರಚಿಸಿರುವುದು ತುಂಬಾ ಶ್ಲಾಘನೀಯ ವಾದುದು. ನಮ್ಮಂತೆಯೇ ನಾವು ಸ್ವಾತಂತ್ರ್ಯ ಪಡೆದ ದಿನವೇ ಸ್ವಾತಂತ್ರ್ಯ ಪಡೆದ ಪಾಕೀಸ್ತಾನದಲ್ಲಿ ಎಂಟು ವರ್ಷಗಳಾದರೂ ರಾಜ್ಯಾಂಗವನ್ನು ರಚಿಸದಿರುವುದನ್ನು ನೋಡಿದರೆ ಆಗ ಭಾರತದ ಸಾಧನೆಯ ಹಿರಿಮೆ ಅರ್ಥ ವಾಗುವುದು. ನೆಹರೂರವರು ಈ ರಾಜ್ಯಾಂಗದಲ್ಲಿ ಭಾರತವನ್ನು ಜಾತ್ಯಾತೀತರಾಷ್ಟ್ರವೆಂದು ಸಾರಿದ್ದಾರೆ. ಅದರ ಎಲ್ಲ ಪ್ರಜೆಗಳಿಗೂ ಜಾತಿ ಮತ ಲಿಂಗಭೇದವಿಲ್ಲದೆ ಸಮಾನವಾದ ಹಕ್ಕುಬಾಧ್ಯತೆಗಳು ನಿರೂಪಿಸಲ್ಪಟ್ಟಿವೆ.

ಇಂತಹ ಮೂಲಸಮಸ್ಯೆಗಳನ್ನು ನಿವಾರಣೆಮಾಡಿ ನೆಹರೂರವರು ದೇಶದ ಉತ್ಪತ್ತಿಯನ್ನೂ, ಪ್ರಜಾಸೌಖ್ಯವನ್ನೂ ಹೆಚ್ಚುಮಾಡಲು ಪ್ರಯತ್ನಿಸುತ್ತಿದ್ದಾರೆ. ಪ್ರಪಂಚದ ಮೂಲೆಮೂಲೆಗಳಲ್ಲಿ ಪ್ರವಾಸಮಾಡಿ ಅಲ್ಲಿಯ ಜನಜೀವನವನ್ನೂ, ಮಹಾರಾಷ್ಟ್ರಗಳಲ್ಲಿ ಜನಜೀವನದ ಮಟ್ಟ ಹೆಚ್ಚಲು ಆಯಾ ಸರ್ಕಾರಗಳು ಕೈಗೊಂಡ ಕ್ರಮಗಳನ್ನೂ ನೋಡಿಕೊಂಡು ಬಂದಿರುವ ನೆಹರೂರವರ ಅನುಭವ ಈಗ ಪ್ರಯೋಜನಕ್ಕೆ ಬರುತ್ತಿದೆ. ಹಾಗೆಂದು ಅವರು ಯಾವ ರಾಷ್ಟ್ರದ ಒಂದು ಪದ್ಧತಿಯನ್ನೂ ಇದ್ದಕ್ಕಿದ್ದಹಾಗೆ ಭಾರತಕ್ಕೆ ಅನ್ವಯಿಸಲು ತಯಾರಾಗಿಲ್ಲ. ಭಾರತದ ಸಂಸ್ಕೃತಿ ಜನಜೀವನದ ರೀತಿನೀತಿಗಳಿಗೆ ಹೊಂದಿಕೊಳ್ಳುವಂತಹ ಪದ್ಧತಿಯನ್ನು ಅವರು ಜಾರಿಗೆ ತರಲು ಪ್ರಯತ್ನಿಸುತ್ತಿದ್ದಾರೆ. ಸಮತಾವಾದದ ಕೆಲವು ರೀತಿನೀತಿಗಳು ಅವರಿಗೆ ಸರಿತೋರಿವೆ. ಆದರೆ ರಷ್ಯಾದಲ್ಲಿರುವಂತಹ ಸಮತಾವಾದದ ತತ್ತ್ವಗಳು ಭಾರತಕ್ಕೆ ಅನ್ವಯಿಸಲಾರದು. ಅಲ್ಲಿಯದು ನಿರಂಕುಶ ಪ್ರಭುತ್ವ. ಇಲ್ಲಿ ನಾವು ಪ್ರಜಾಪ್ರಭುತ್ವದ ತಳಹದಿಯ ಮೇಲೆ ಕಟ್ಟಲಾಗುವ ಸಮತಾವಾದ ರೀತಿಯ ಸಮಾಜವನ್ನು ರೂಪಿಸಬೇಕೆನ್ನುತ್ತಾರೆ ನೆಹರೂರವರು. ಪ್ರತಾಪಘಡದ ರೈತರ ಗೋಳನ್ನು ನೋಡಿರುವ ಅವರು ಜಮೀನು

ದಾರಿ ನಿರ್ಮೂಲವಾಗಬೇಕೆಂದು ಬಯಸಿದುದು ಸಹಜವೇ ಆಗಿದೆ. ಈಗ ಭಾರತದಲ್ಲಿ ದುಡಿಯುವವನದೇ ಭೂಮಿಯು ಸ್ವಾಮ್ಯವಾಗಿದೆ. ಜಮೀನು ದಾರಿ ಮಾಯವಾಗಿದೆ. ದುಡಿಯುವ ರೈತ ಈಗ ನೆಮ್ಮದಿಯಿಂದಿದ್ದಾನೆ. ಅವನಿಗೆ ಬೇಕಾದ ಭೂಮಿ ಇದೆ. ಬೀಜ, ಎತ್ತು, ನೇಗಿಲುಗಳನ್ನು ಕೊಳ್ಳಲು ಸರ್ಕಾರ ಸಾಲ ಕೊಡುತ್ತದೆ. ಜಪಾನೀ ಪದ್ಧತಿಯ ಉಳಿಮೆ ಬಿತ್ತನೆ ಗಳಿಂದ ಒಂದು ಖಂಡುಗ ಬೆಳೆಯುತ್ತಿದ್ದಕಡೆ ನಾಲ್ಕು ಖಂಡುಗ ದವಸ ಬೆಳೆಯುತ್ತಿದ್ದಾನೆ ಅವನು. ಆಧುನಿಕ ಯಂತ್ರೋಪಕರಣಗಳೂ, ಶೀಮೆ ಗೊಬ್ಬರವೂ, ವ್ಯವಸಾಯ ತಜ್ಞರ ನೆರವೂ ಆತನಿಗೆ ಸುಲಭವಾಗಿ ದೊರೆಯುವ ಏರ್ಪಾಟಾಗಿದೆ.

ಕೃಷಿಕರನ್ನು ಬಿಟ್ಟರೆ ಕಾರ್ಮಿಕರ ಸಮಸ್ಯೆ ಅಷ್ಟೇ ಗುರುತರವಾದುದು. ಅವನಿಗೆ ಸರಿಯಾದ ಕೂಲಿ ಸಿಗಬೇಕು, ರಜಾ ಸೌಕರ್ಯ, ವಸತಿ ಸೌಕರ್ಯ, ವೈದ್ಯಕೀಯ ಸೌಕರ್ಯ — ಇವು ದೊರಕುವಂತೆ ಶಾಸನಗಳು ಜಾರಿಗೆ ಬರುತ್ತಲಿವೆ. ಸಾಧ್ಯವಾದ ಕಡೆ ಕಾರ್ಖಾನೆಗಳನ್ನು ರಾಷ್ಟ್ರೀಕರಣ ಮಾಡುವ ಪ್ರಯತ್ನ ನಡೆಯುತ್ತಿದೆ. ಬಂಡವಾಳಗಾರರು ಅಧಿಕ ಲಾಭ ಸಂಪಾದನೆ ಮಾಡದಂತೆಯೂ, ಕಾರ್ಮಿಕರ ಸೌಕರ್ಯಕ್ಕಾಗಿ ಆ ಲಾಭ ವನ್ನು ಉಪಯೋಗಿಸುವಂತೆಯೂ ಪ್ರಚಾರ ನಡೆಯುತ್ತಿದೆ. ಬಂಡವಾಳ ಗಾರರು ಕಾರ್ಮಿಕರ ಘರ್ಷಣೆಗಳಲ್ಲಿ ಸರ್ಕಾರ ಪ್ರವೇಶಿಸಿ ರಾಜಿಮಾಡಿಸುತ್ತಾ ಮುಷ್ಕರಗಳು ಆಗದಂತೆಯೂ, ಆದ ಮುಷ್ಕರಗಳ ಅವಧಿ ಕಡಿಮೆಯಾಗು ವಂತೆಯೂ ಪ್ರಯತ್ನಗಳು ನಡೆಯುತ್ತಿವೆ. ಇಂತಹ ಸಂದರ್ಭಗಳು ಬಂದಾಗ ನೆಹರೂರವರು ತಾವು ಪ್ರಪಂಚಪರ್ಯಟನದಲ್ಲಿ ಕಂಡ ಅನುಭವ ದಿಂದ ನಿವಾರಣೋಪಾಯಗಳನ್ನು ಸೂಚಿಸಿ ಕಾರ್ಮಿಕರಿಗೂ, ಬಂಡವಾಳ ಗಾರರಿಗೂ ಒಪ್ಪಿಕೆಯಾಗುವ ರೀತಿಯಲ್ಲಿ ರಾಜಿ ಮಾಡಿಸುತ್ತಿದ್ದಾರೆ. ಇಂತಹ ಸಂದರ್ಭಗಳಲ್ಲಿ ನೆಹರೂರವರು ಪ್ರತಿಪಾದಿಸುವ ಸೂತ್ರವೇ ಘರ್ಷಣೆಯ ನಿವಾರಣೆಗೆ ಕಾರಣವಾಗಿದೆ. ಈ ಬಗ್ಗೆ ಅವರು ಹೇಳುವುದು, 'ಸಮಾಜದಲ್ಲಿ ಲಾಭಾನ್ವೇಷಣೆಯ ಬುದ್ಧಿ ಹೋಗಿ, ಸೇವಾ ಬುದ್ಧಿ ಹುಟ್ಟ ಬೇಕು. ಸ್ಪರ್ಧೆ ಸಹಕಾರಕ್ಕೆ ಎಡೆಗೊಡಬೇಕು. ಪದಾರ್ಥಗಳ ತಯಾರಿಕೆಯ ಉದ್ದೇಶ ಹಣ ಗಳಿಸುವುದಕ್ಕಾಗಿರಕೂಡದು. ಎಲ್ಲರ ಪ್ರಯೋಜನವನ್ನೂ

ಸಾಧಿಸುವುದಕ್ಕೋಸ್ಕರ ತಯಾರಿಕೆಯಾಗಬೇಕು'— ಈ ಗುರಿಯನ್ನು ಸಾಧಿಸಲು ಅವರು ವಿಶ್ವಪ್ರಯತ್ನ ಮಾಡುತ್ತಿದ್ದಾರೆ; ಕೃತಕಾರ್ಯರಾಗುತ್ತಿದ್ದಾರೆ.

ರಷ್ಯ, ಕೆನಡಾ ರಾಷ್ಟ್ರಗಳು ಇಪ್ಪತ್ತು ಇಪ್ಪತ್ತೈದು ವರುಷಗಳಲ್ಲಿ ಯಾವ ಪ್ರಗತಿಯನ್ನು ಸಾಧಿಸಿರುವುವೋ ಅಂತಹ ಪ್ರಗತಿಯನ್ನು ಭಾರತವು ಹದಿನೈದು ವರ್ಷಗಳಲ್ಲಿ ಸಾಧಿಸಬೇಕು ಎಂಬುದು ನೆಹರೂರವರ ಹಂಬಲ. ಇದು ವೈಜ್ಞಾನಿಕ ಯುಗ. ವಿಜ್ಞಾನದಲ್ಲಿ ಭಾರತ ಹಿಂದೆ ಬಿದ್ದಿದೆ. ಆ ಬಗ್ಗೆ ಪ್ರಗತಿಯನ್ನು ಸಾಧಿಸುವುದು ಅತ್ಯವಶ್ಯಕ. ಇಲ್ಲದಿದ್ದರೆ ಭಾರತ ಪ್ರಪಂಚದಲ್ಲಿ ತಲೆಯೆತ್ತಿ ನಿಲ್ಲಲಾರದು. ಅಂತಹ ಸಾಧನೆಗಾಗಿ ವಿಜ್ಞಾನದ ವಿವಿಧ ಶಾಖೆಗಳಲ್ಲಿ ಪ್ರಯೋಗ ಮಂದಿರಗಳನ್ನು ಸ್ಥಾಪಿಸಿದ್ದಾರೆ. ವಿಜ್ಞಾನದಲ್ಲಿ ಮುಂದುವರೆದ ರಾಷ್ಟ್ರಗಳಿಗೆ ಭಾರತೀಯರನ್ನು ಕಳುಹಿಸಿ ಅಲ್ಲಿ ತಯಾರುಮಾಡಿಸಿ ಕರೆತರುತ್ತಿದ್ದಾರೆ. ಪ್ರತಿ ವರ್ಷ ಸಾವಿರಾರು ಇಂತಹ ವಿದ್ಯಾರ್ಥಿಗಳ ವ್ಯಾಸಂಗ ಹೊರದೇಶಗಳಲ್ಲಿ ನಡೆಯುತ್ತಿದೆ. ಈ ಪ್ರಯೋಗ ಮಂದಿರಗಳು ಕ್ಷಿಪ್ರದಲ್ಲಿಯೇ ದೇಶದ ಪ್ರಗತಿಗೆ ಸಹಾಯವಾಗುವುವಾಗಿವೆ.

ಇಂಗ್ಲೆಂಡಿನ ಬೆವರಿಡ್ಜ್ ಪ್ಲಾನ್ ಮಾದರಿಯಲ್ಲಿ ಭಾರತದಲ್ಲಿ ಪ್ರತಿಯೊಬ್ಬ ಪ್ರಜೆಗೂ ವಾಸಿಸುವುದಕ್ಕೆ ಮನೆ, ಹೊಟ್ಟೆ ತುಂಬ ಆಹಾರ, ಮೈ ತುಂಬ ಬಟ್ಟೆ, ಉಚಿತ ವೈದ್ಯಕೀಯ ಸೌಕರ್ಯ, ಉಚಿತ ವಿದ್ಯಾಭ್ಯಾಸ, ಕೆಲಸ ಮಾಡಬಲ್ಲವರಿಗೆ ಕೆಲಸ— ಇವು ದೊರಕುವಂತೆ ಮಾಡಬೇಕೆಂಬುದು ನೆಹರೂರವರ ಆಶಯ. ಈ ಒಂದೊಂದು ವಿಷಯದಲ್ಲೂ ಭಾರತ ಮುಂದುವರೆಯುತ್ತಿದೆ. ಭಾರತ ನೆಹರೂರವರ ಕೈಗೆ ಬಂದಾಗ ನಮಗೆ ಬೇಕಾದಷ್ಟು ಆಹಾರವನ್ನು ನಾವು ಬೆಳೆಯುತ್ತಿರಲಿಲ್ಲ. ನೆಹರೂರವರು ಮೊದಲು ಆಹಾರದ ಕಡೆ ಗಮನ ಕೊಟ್ಟರು. ನೀರಾವರೀ ಕೆಲಸಗಳಿಗೆ ಲಕ್ಷಾಂತರ ರೂಪಾಯಿಗಳನ್ನು ಸುರಿದರು. ನದಿಗಳಿಗೆ ಭಾರಿ ಅಣೆಕಟ್ಟೆಗಳನ್ನು ಕಟ್ಟಿಸಿದರು. ಏಷ್ಯದಲ್ಲೇ ದೊಡ್ಡದಾದ ಬಾಕ್ರಾನಂಗಲ್ ಕಟ್ಟೆಯನ್ನು ಕಟ್ಟಿಸಿದರು. ದಾಮೋದರ ವ್ಯಾಲಿ ಬೃಹತ್ ಯೋಜನೆ ಮುಂದುವರೆಯುತ್ತಿದೆ. ಈ ಕಟ್ಟೆಗಳಿಂದ ಸಾಗುವಳಿಗೆ ನೀರು ಒದಗುವುದಲ್ಲದೆ ವಿದ್ಯುಚ್ಛಕ್ತಿಯೂ ಕೂಡ ಉತ್ಪಾದನೆಯಾಗುವುದಾಗಿದೆ. ಕೆರೆಗಳು

ರಿಪೇರಿಯಾದುವು. ಹಳ್ಳಿ ಹಳ್ಳಿಗೂ ಸಾಧ್ಯವಾದ ಕಡೆ ವಿದ್ಯುತ್ತಿನ ನೀರಾವರೀ ಪಂಪುಗಳನ್ನು ಸಾಲಕೊಟ್ಟು ಹಾಕಿಸಿದ್ದಾಯಿತು. ಬಂಜರು ಭೂಮಿಗಳೆಲ್ಲಾ ನಾಲಾ ನೀರಿನಿಂದ ಗದ್ದೆಗಳಾದುವು. ಆಧುನಿಕ ಯಂತ್ರೋಪಕರಣಗಳಿಂದ ವ್ಯವಸಾಯುವನ್ನು ಮಾಡಲಾಯಿತು. ಹೆಚ್ಚಾಗಿ ಬೆಳೆದವರಿಗೆ 'ಕೃಷಿ ಪಂಡಿತ' ರೆಂಬ ಬಿರುದು ಬಂತು. ಸಾವಿರಾರು ರೂಪಾಯಿ ಬಹುಮಾನಗಳು ದೊರೆತು, ಕೃಷಿಗೆ ಉತ್ತೇಜನ ಸಿಕ್ಕಿತು. ಇವೆಲ್ಲದರ ಪರಿಣಾಮವಾಗಿ ಈ ದಿನ ಭಾರತ ಆಹಾರದ ವಿಷಯದಲ್ಲಿ ಸ್ವಯಂಪೂರ್ಣವಾಗಿರುವುದು ಮಾತ್ರವಲ್ಲ; ಪರದೇಶಗಳಿಗೆ ರಫ್ತುಮಾಡುವ ಸ್ಥಿತಿಗೆ ಬಂದಿದೆ. ಹಾಗೇ ಬಟ್ಟೆ ಸಣಬುಗಳ ಕಾರ್ಖಾನೆಗಳೂ ಅವುಗಳ ಸಿಬ್ಬಂದಿಯೂ ಹೆಚ್ಚಿ ಇಂದು ನಾವು ನಮಗೆ ಸಾಕಾದಷ್ಟು ಬಟ್ಟೆಯನ್ನು ಒದಗಿಸಿಕೊಂಡು ಪರದೇಶಗಳಿಗೂ ಕಳುಹಿಸುತ್ತಿದ್ದೇವೆ. ಆಹಾರ ಬಟ್ಟೆ ಇವುಗಳಲ್ಲಿ ಸ್ವಸಂಪೂರ್ಣತೆಯನ್ನು ಪಡೆದಮೇಲೆ ಸಂಸಾರಕ್ಕೊಂದು ಮನೆ ಮಾಡಿಕೊಡುವ ಪ್ರಯತ್ನ ನಡೆಯುತ್ತಿದೆ. ಕಾರ್ಖಾನೆಗಳಿಗೆ ಅವರ ನೌಕರರಿಗೆ ಮನೆ ಒದಗಿಸಬೇಕೆಂದು ಹೇಳಲಾಗಿದೆ. ಕೇಂದ್ರ ಸರ್ಕಾರ ಲಕ್ಷಾಂತರ ರೂಪಾಯಿಗಳನ್ನು ಪ್ರಾಂತ ಸರ್ಕಾರಗಳಿಗೆ ಕೊಟ್ಟು ಮನೆ ಕಟ್ಟುವ ಯೋಜನೆಗಳನ್ನು ಕಾರ್ಯಗತ ಮಾಡುತ್ತಿವೆ. ಪ್ರತಿ ಪ್ರಾಂತಗಳಲ್ಲೂ ಅನೇಕ ಸಾವಿರ ಶಾಲೆಗಳನ್ನು ಪ್ರಾರಂಭಮಾಡಲಾಗಿದೆ. ಅನೇಕ ಪ್ರಾಂತಗಳಲ್ಲಿ ಪ್ರೈಮರೀ ವಿದ್ಯಾಭ್ಯಾಸ ಕಡ್ಡಾಯವಾಗಿದೆ. ಕ್ರಮೇಣ ಅಕ್ಷರಸ್ಥರ ಸಂಖ್ಯೆ ಶೇಕಡ ೧೩ ರಿಂದ ೫೦ ಕ್ಕೆ ಹತ್ತಬೇಕೆಂಬ ಗುರಿಯಲ್ಲಿ ಸರ್ಕಾರಗಳು ಶ್ರಮಿಸುತ್ತಿವೆ. ವೈದ್ಯಕೀಯ ಸೌಕರ್ಯ ಕ್ರಮೇಣ ಹೆಚ್ಚುತ್ತಿದೆ. ಸಾಕಾದಷ್ಟು ವೈದ್ಯರುಗಳಿಲ್ಲದಿರುವುದರಿಂದ ಹೆಚ್ಚು ಕೆಲಸ ಸಾಗದೆ ಇವೆ. ಆದರೆ ಡಿ. ಡಿ. ಟಿ. ಪ್ರಯೋಗ, ಬಿ. ಸಿ. ಜಿ. ವ್ಯಾಕ್ಸಿನೇಷಣ್ ಮುಂತಾದ ಸಾಮೂಹಿಕ ಯೋಜನೆಗಳಿಂದ ಮಲೇರಿಯಾ ಕ್ಷಯ ರೋಗಗಳನ್ನು ತಡೆಗಟ್ಟಲಾಗಿದೆ. ಸಾರ್ವಜನಿಕವಾಗಿ ಆರೋಗ್ಯ ಉತ್ತಮವಾಗಿದೆ. ಹಾಗೇ ನಿರುದ್ಯೋಗನಿರ್ಮೂಲನದ ಕಡೆಗೂ ಸರ್ಕಾರಗಳು ಗಮನವೀಯುತ್ತಿವೆ. ಈಗ ಯೋಜಿತವಾಗಿರುವ ಎರಡನೆಯ ಪಂಚವಾರ್ಷಿಕ ಯೋಜನೆ ಮುಗಿಯುವ ಹೊತ್ತಿಗೆ ಈಗಿರುವ ನಿರುದ್ಯೋಗ

ಮುಕ್ಕಾಲು ಪಾಲಿನಷ್ಟು ಕಡಿಮೆಯಾಗುವುದಾಗಿದೆ. ಈ ಐದು ವರ್ಷ ಗಳಲ್ಲಿ ಸಾಧಿತವಾಗಿರುವ ಭಾರತದ ಪ್ರಗತಿಯನ್ನು ವೀಕ್ಷಿಸಿದರೆ ಪ್ರಪಂಚದ ಇನ್ನಾವ ಮುಂದುವರಿದ ರಾಷ್ಟ್ರಗಳಲ್ಲೂ ಇಷ್ಟು ಅಲ್ಪಕಾಲದಲ್ಲಿ ಇಷ್ಟು ಹೆಚ್ಚಿನ ಪ್ರಗತಿ ಸಾಧಿತವಾಗಿಲ್ಲವೆಂದು ಗೊತ್ತಾಗುತ್ತದೆ.

ಹಳ್ಳಿಗಳು ಭಾರತದ ಜೀವನಾಡಿ. ಆ ಹಳ್ಳಿಗಳ ನೈರ್ಮಲ್ಯ, ನೀರಿನ ಸರಬರಾಜು, ವಿದ್ಯುಚ್ಛಕ್ತಿಯ ಸರಬರಾಜು, ಹಳ್ಳಿಗರಿಗೆ ಬೇಕಾದ ಸಣ್ಣಪುಟ್ಟ ಕೈಗಾರಿಕೆಗಳು—ಎಲ್ಲವನ್ನೂ ರೂಪಿಸಿ ಹಳ್ಳಿಗಳನ್ನು ಆಕರ್ಷಕ ವನ್ನಾಗಿ ಮಾಡಲು ತಜ್ಞರ ಸಮಿತಿಯ ತೀರ್ಮಾನದಂತೆ ಮೊದಲನೆಯ ಪಂಚವಾರ್ಷಿಕ ಯೋಜನೆಯನ್ನು ಜಾರಿಗೆ ತರಲಾಯಿತು. ಉಳಿದ ಗ್ರಾಮಾಂತರ ಪ್ರದೇಶಗಳನ್ನು ಆವರಿಸುವಂತೆ ಎರಡನೆಯ ಪಂಚ ವಾರ್ಷಿಕ ಯೋಜನೆಯನ್ನು ನಿಯೋಜಿಸಲಾಗಿದೆ. ದೇಶದ ಪ್ರಗತಿಗೆ ಸಹಾಯವಾಗುವ ಪ್ರತಿಯೊಂದು ವಿಷಯವೂ ಈ ಪಂಚವಾರ್ಷಿಕ ಯೋಜನೆಗಳಲ್ಲಿ ಅಡಕವಾಗಿದೆ. ಅದೊಂದು ಬೃಹತ್ಪ್ರಮಾಣದ ಯೋಜನೆ. ಪರಿಣಾಮವಾಗಿ ಸುಖೀರಾಜ್ಯ ಸ್ಥಾಪನೆಯಾಗಲಿದೆ.

ಆತ್ಮಕತೆಯನ್ನು ಬರೆಯುವ ಕಾಲಕ್ಕೇ ನೆಹರೂರವರು ಸ್ವತಂತ್ರ ಭಾರತದಲ್ಲಿ ಇಂತಹ ಸಮಾಜವನ್ನು ಸ್ಥಾಪಿಸಬೇಕೆಂದು ಸಂಕಲ್ಪಿಸಿದ್ದರು. "ನಮ್ಮ ಕೊನೆಯ ಗುರಿಯು ಜಾತಿಕೋಮುಗಳಿಲ್ಲದ ಸಮಾಜ. ಅದರಲ್ಲಿ ಪ್ರತಿಯೊಬ್ಬರಿಗೂ ಆರ್ಥಿಕ ಅನುಕೂಲವಿರಬೇಕು; ಪ್ರತಿಯೊಬ್ಬರಿಗೂ ಸಮಾನವಾದ ಅವಕಾಶವಿರಬೇಕು. ಮನುಷ್ಯ ಸಮಾಜವನ್ನು ಉತ್ತಮಗೊಳಿಸುವ ಸಂಸ್ಕೃತಿಯ ಮಟ್ಟವನ್ನು ಹೆಚ್ಚಿಸಲು ಕ್ರಮ ಬದ್ಧವಾಗಿರುವ ಸಮಾಜವೊಂದು ಏರ್ಪಡಬೇಕು. ಆಧ್ಯಾತ್ಮಿಕ ಉದ್ದೇಶ ಗಳನ್ನೂ ಸಾಧಿಸಿಕೊಳ್ಳಲು ಸಹಕಾರ, ಅಸ್ವಾರ್ಥತೆ, ಸಾಮರ್ಥ್ಯ, ನ್ಯಾಯವನ್ನು ಮಾಡುವ ಆಸೆ, ಸೌಮನಸ್ಯ, ಪ್ರೇಮ, ಇವುಗಳಿಂದ ತುಂಬಿರುವ ಸಮಾಜ; ಇದೇ ನಮ್ಮ ಕೊನೆಯ ಗುರಿ. ಪ್ರಪಂಚವೇ ಹೀಗಾಗಬೇಕೆಂಬುದು ನಮ್ಮ ಆಸೆ. ಹೀಗೆ ಮಾಡಬೇಕೆಂದು ಹೊರಟು ನಮಗೆ ಅಡ್ಡಿ ಬರುವ ಪ್ರತಿಯೊಂದನ್ನೂ ನಾವು ತೆಗೆದು ಒಗೆಯಬೇಕು. ಸಾಧ್ಯವಾದರೆ ಗೌರವದಿಂದ, ಸಾಮರ್ಥ್ಯದಿಂದ, ಆವಶ್ಯಕವಾದರೆ ಶಕ್ತಿ

ಪ್ರದರ್ಶನದಿಂದ—ಅಂತೂ ತೆಗೆದೇ ತೆಗೆಯಬೇಕು. ಇದರಿಂದ ಅನೇಕ ವೇಳೆ ಬಲಾತ್ಕಾರವೂ ಬೇಕೇ ಬೇಕು ಎಂಬುದರಲ್ಲಿ ಸಂದೇಹವಿಲ್ಲ. ಆದರೆ ನಾವು ಶಕ್ತಿಯನ್ನು ಉಪಯೋಗಿಸುವುದು ದ್ವೇಷ ಕ್ರೌರ್ಯಗಳಿಂದಲ್ಲ, ವಿಘ್ನವನ್ನು ನಿವಾರಿಸಿಕೊಳ್ಳಬೇಕೆಂಬ ಉದ್ವೇಗವಿಲ್ಲದ ಆಸೆಯಿಂದ.'' ಇಂತಹ ಉದ್ದೇಶಕ್ಕಾಗಿ ನೆಹರೂರವರು ತನುಮನಧನಗಳಿಂದ ದುಡಿಯು ತ್ತಿದ್ದಾರೆ. ಎಲ್ಲ ಬಗೆಯ ಪ್ರಗತಿಗೂ ಅಸ್ತಿಭಾರವನ್ನು ಹಾಕಿದ್ದಾಗಿದೆ. ಅವು ಫಲ ಬಿಡುವ ಕಾಲ ಸನ್ನಿಹಿತವಾಗುತ್ತಿದೆ.

ರಾಜ್ಯವನ್ನು ಗೆಲ್ಲುವುದು ಸುಲಭ, ಆದರೆ ಆಳುವುದು ಕಷ್ಟ. ಭಾರತಕ್ಕೆ ಸ್ವಾತಂತ್ರ್ಯ ಬಂದ ಕಾಲದಲ್ಲಿ ಒದಗಿದ ಕಷ್ಟಗಳನ್ನು ನೆನೆಸಿದರೆ ನಾವು ಈ ದಿನ ಇಷ್ಟು ನೆಮ್ಮದಿಯಿಂದಿದ್ದು ಇಷ್ಟು ಪ್ರಗತಿಮಾರ್ಗದಲ್ಲಿ ಅಡಿಯಿಡುತ್ತಿರುವುದು ಒಂದು ಅತಿಶಯದ ಪವಾಡವಾಗಿದೆ. ಇಂತಹ ಪವಾಡವನ್ನು ಸಾಧಿಸಿರು ವವರು ಜವಾಹಿರಲಾಲ ನೆಹರೂರವರು. ಭಾರತದ ಸ್ವಾತಂತ್ರ್ಯದ ಪರ್ವ ಕಾಲದಲ್ಲಿ ನೆಹರೂರವರಂತಹ ಮೇಧಾವಿಗಳೂ ಅನುಭವಿಗಳೂ ಆದ ರಾಜ ಕಾರಣಿಗಳು ರಾಜ್ಯದ ಸೂತ್ರಗಳನ್ನು ಹಿಡಿದು ನಡೆಸಲು ಸಿಕ್ಕಿದುದು ಭಾರತದ ಪುಣ್ಯ, ಭಾರತೀಯರ ಸೌಭಾಗ್ಯ. ನೆಹರೂರವರಂತಹವರು ಚರಿತ್ರೆಯನ್ನೇ ನಿರ್ಮಾಣಮಾಡುವಂತಹ ಪುರುಷರು; ಅವರ ಚರಿತ್ರೆಯೇ ದೇಶದ ಚರಿತ್ರೆ. ಮಹಾತ್ಮಾ ಗಾಂಧಿಯವರನ್ನು ಆಧುನಿಕ ಯುಗದ ಬುದ್ಧನೆಂದು ಹೇಳಬಹುದಾದರೆ ನೆಹರೂರವರು ಆಧುನಿಕ ಯುಗದ ಅಶೋಕ, ಆಧುನಿಕ ಯುಗದ ಅಕ್ಬರ್—ಎಂದು ಹೇಳಬಹುದು. ಇಂತಹ ವರು ಒಂದು ಜನಾಂಗಕ್ಕೆ ಸೇರಿದವರಲ್ಲ, ಪ್ರಪಂಚಕ್ಕೇ ಸೇರಿದವರು, ಎಲ್ಲ ಕಾಲಕ್ಕೆ ಸೇರಿದವರು. ಇಂತಹ ನೆಹರೂರವರು ಚಿರಕಾಲ ನಮ್ಮೊಡನೆ ಬಾಳಲಿ, ನಮ್ಮ ಪ್ರಗತಿಯನ್ನು ಸಾಧಿಸಲಿ, ಭಾರತ ೨,೫೦೦ ವರುಷಗಳ ಹಿಂದೆ ಯಾವ ಉಚ್ಚ್ರಾಯಸ್ಥಿತಿಯಲ್ಲಿತ್ತೋ ಆಧುನಿಕ ಪ್ರಪಂಚದಲ್ಲಿ ಅದು ಮತ್ತೆ ಅಂತಹ ಉಚ್ಚ್ರಾಯಸ್ಥಿತಿಯನ್ನು ಪಡೆಯುವಂತೆ ಮಾಡಲಿ ಎಂದು ಹಾರೈಸೋಣ.

# ೧೧. ನೆಹರೂರವರ ಪ್ರಪಂಚ ಪರ್ಯಟನ ಮತ್ತು ಪ್ರವಾಸಗಳು

ಭರತಖಂಡದಲ್ಲಿ ಪ್ರವಾಸದ ಕಲೆ ಪುರಾಣಗಳ ಕಾಲದಿಂದ ಬಂದದ್ದು. ಆದರೆ ಅದನ್ನು ನಮ್ಮ ಪೂರ್ವಿಕರು ಈಗಿನಂತೆ ಪ್ರವಾಸವೆಂಬ ಹೆಸರಿನಿಂದ ಕರೆಯಲಿಲ್ಲ. ಆ ಕಾಲದಲ್ಲಿ ದೇವರಲ್ಲಿ ನಂಬಿಕೆ, ಧರ್ಮಶ್ರದ್ಧೆ ಇವು ಬಾಳನ್ನು ನಡೆಸುವ ದೀವಿಗೆಗಳಾದ್ದರಿಂದಲೂ, ಆ ನಂಬಿಕೆಗೆ ಸಂಬಂಧಪಟ್ಟ ಹಾಗೆ ಹೇಳುವ ಮಾತುಗಳೂ, ವಿಧಿಸುವ ನಿಯಮಗಳೂ ಹೆಚ್ಚು ಪರಿಣಾಮ ಕಾರಿಯಾಗಿದ್ದುದರಿಂದಲೂ, ಅವುಗಳಲ್ಲಿ ಅಂಧಶ್ರದ್ಧೆ ಮೂಢನಂಬಿಕೆಗಳು ಬೆಳೆದು ಅವೊಂದು ಧರ್ಮನಿಯಮವೆಂದು ಪರಿಗಣಿತವಾಗುತ್ತಾ ಬಂದುದ ರಿಂದಲೂ ಅದಕ್ಕೆ ಸಂಬಂಧಪಟ್ಟಹಾಗೆ ಆ ಪ್ರವಾಸಗಳನ್ನು 'ತೀರ್ಥಯಾತ್ರೆ' ಎಂಬ ಹೆಸರಿನಿಂದ ಕರೆದರು. ಹಾಗಲ್ಲದಿದ್ದರೆ ದಕ್ಷಿಣದವರಿಗೆ ಕಾಶಿ, ಬದರಿ, ಗಂಗಾಸ್ನಾನಗಳು ಶ್ರೇಷ್ಠವಾಗಿರುವಾಗ ಉತ್ತರದವರಿಗೆ ತಿರುಮ ಕೂಡಲು, ಶ್ರೀರಂಗ, ರಾಮೇಶ್ವರ, ಕಾವೇರೀ ಸ್ನಾನಗಳು ಶ್ರೇಷ್ಠವೆಂದು ಹೇಳಿರುವುದೇಕೆ? ಪವಿತ್ರವಾದ ಗಂಗೆ ದಾಕ್ಷಿಣಾತ್ಯರಿಗೆ ಹೇಗೆ ಪವಿತ್ರವೋ ಕಾಶಿಯವರಿಗೂ ಹಾಗೇ ಪವಿತ್ರವಾಗಿರಬೇಡವೆ? ಔತ್ತರೇಯರಿಗೆ ಪವಿತ್ರ ವಾದ ಕಾವೇರಿ ಶ್ರೀರಂಗದವರಿಗೂ ಹಾಗೇ ಪವಿತ್ರವಾಗಿರಬೇಡವೆ? ಆದರೆ ನಮ್ಮ ಶಾಸ್ತ್ರಗಳೂ ಪುರಾಣಗಳೂ ಹಾಗೆ ಅವನ್ನು ಸಮವಾಗಿ ಕಾಣಲಿಲ್ಲ. ಅದಕ್ಕೆ ಕಾರಣವಿಷ್ಟೆ. ಉತ್ತರದವರು ದಕ್ಷಿಣದ ಕೊನೆಯವರೆಗೂ ಸಂಚಾರ ಮಾಡಬೇಕು, ದಕ್ಷಿಣದವರು ಉತ್ತರದ ಕೊನೆಯವರೆಗೂ ಸಂಚಾರ ಮಾಡಬೇಕು. ಈ ಸಂಚಾರದ ಉದ್ದೇಶ ಸಮಗ್ರ ದೇಶವನ್ನು ಒಂದುಗೂಡಿಸುವ ಉದ್ದೇಶ. ಒಂದು ಪ್ರಾಂತದ ಜನರು ಇನ್ನೊಂದು ಪ್ರಾಂತಕ್ಕೆ ಬಂದು ಅಲ್ಲಿಯ ಜನ, ಜೀವನದ ರೀತಿನೀತಿಗಳು, ವೇಷ ಭೂಷಣಗಳು, ಆಚಾರವ್ಯವಹಾರಗಳು, ಶಾಸ್ತ್ರಾರ್ಥಗಳು— ಇಂಥವು ಗಳನ್ನು ತಿಳಿದುಕೊಳ್ಳಬೇಕು ಎಂಬುದು. ಇದರಿಂದ ಮನುಷ್ಯನ ದೃಷ್ಟಿ ವಿಶಾಲವಾಗುತ್ತದೆ, ಸಂಸ್ಕೃತಿ ಬೆಳೆಯುತ್ತದೆ, ನಾಗರೀಕತೆ ಹರಡುತ್ತದೆ. ಇಂತಹ ಘನ ಉದ್ದೇಶದಿಂದ ಸ್ಥಾಪಿತವಾದ ತೀರ್ಥಯಾತ್ರೆಯೆಂಬ ಧರ್ಮ

ನಿಯಮವು ರೈಲು ಏರೋಪ್ಲೇನುಗಳ ಪ್ರಯಾಣಸೌಕರ್ಯದಿಂದ ತನ್ನ ಘನ ಉದ್ದೇಶವನ್ನು ಸಾಧಿಸಲಾರದಂತಾಗಿದೆ. ತೀರ್ಥಯಾತ್ರೆಯೆಂದರೆ ಏರೋಪ್ಲೇನಿನಲ್ಲಿ ಹೋಗಿ ಗಂಗೆಯಲ್ಲಿ ಮುಳುಗಿ ಕಾಶೀ ವಿಶ್ವೇಶ್ವರನ ದರ್ಶನ ಮಾಡಿಕೊಂಡು ಮರುದಿನವೇ ಮನೆ ಸೇರುವ ಆಡಂಬರದ ಕಾರ್ಯಕ್ರಮ ವಾಗಿಬಿಟ್ಟಿದೆ. ಇದರಲ್ಲೇ ಹೆಮ್ಮೆಪಟ್ಟುಕೊಂಡು ಇಷ್ಟರಿಂದಲೇ ಜನ ನೇರವಾಗಿ ಸ್ವರ್ಗಕ್ಕೇ ಹೋಗುವೆವೆಂದು ತಿಳಿದುಕೊಂಡಿರುವವರುಂಟು.

ಆದರೆ ಜವಾಹಿರಲಾಲರವರ ಪ್ರವಾಸ ಇಂತಹ ಧರ್ಮಶ್ರದ್ಧೆಯ ಮೂಢನಂಬಿಕೆಯ ಪ್ರವಾಸವಲ್ಲ. ಅವರು ಪ್ರವಾಸಮಾಡುವುದು ಜನರ ಸ್ವಭಾವ, ನಡವಳಿಕೆ, ಅವರಿಗಿರುವ ರಾಜಕೀಯ ಆರ್ಥಿಕ ವೈಯಕ್ತಿಕ ಅನುಕೂಲ ಅನಾನುಕೂಲಗಳು— ಇವುಗಳನ್ನು ತಿಳಿದುಕೊಳ್ಳುವುದಕ್ಕೆ; ವಿವಿಧ ಪ್ರಾಂತಗಳ ವಿವಿಧ ಪಂಗಡಗಳ ವಿವಿಧ ನಾಗರಿಕತೆ, ಕಲೆ, ಶಿಲ್ಪ, ವಾಸ್ತು, ಸಂಗೀತ, ಸಾಹಿತ್ಯ— ಇವುಗಳನ್ನರಿಯುವುದಕ್ಕೆ; ಈ ವೈವಿಧ್ಯ ದಲ್ಲಿ ಜೀವನಾಡಿಯಾಗಿ ಹರಿಯುತ್ತಿರುವ ಏಕೈಕ ಭಾರತೀಯ ಸಂಸ್ಕೃತಿ ಯನ್ನರಿಯುವುದಕ್ಕೆ. ಆಚಾರಶೀಲರು ಯಾವ ದೇವಸ್ಥಾನದ ಮೂರ್ತಿಯ ದರ್ಶನಕ್ಕಾಗಿ ಹೋಗುವರೋ, ಯಾವ ನದಿಯ ನೀರಿನಿಂದ ಪಾಪವನ್ನು ಕಳೆಯುವುದೆಂದು ಸ್ನಾನಮಾಡುವರೋ ಅಂತಹ ದೇವರ ದರ್ಶನವನ್ನಾಗಲೀ ನದಿ ಪುಷ್ಕರಣಿಗಳ ಸ್ನಾನವನ್ನಾಗಲೀ ಅವರು ಅಪೇಕ್ಷಿಸುವವರಲ್ಲ. ಕೆಲವು ಕಡೆ ದೇವರ ದರ್ಶನಕ್ಕೆ ಕರೆದರೂ ಕೂಡ ಹೋಗಿಲ್ಲ. ಅವರ ದೇವರು ಜನ. ಅವರು ಯಾವ ಯಾವ ರೀತಿಯ ಕಷ್ಟಕ್ಕೆ ಸಿಲುಕಿದ್ದಾರೆ, ಅಂತಹ ಕಷ್ಟ ದಿಂದ ಅವರನ್ನು ಉದ್ಧಾರಮಾಡಿ ಪ್ರಪಂಚದ ಇತರ ದೇಶಗಳ ಜನಗಳ ಮಟ್ಟಕ್ಕೇರುವಂತೆ ಅವರಿಗೆ ಹೇಗೆ ಸಹಾಯಮಾಡಬಹುದು ಎಂಬ ಸಮಸ್ಯೆ ಯನ್ನು ಕುರಿತು ಚಿಂತಿಸುವುದೇ ಅವರ ಪ್ರವಾಸದ ಉದ್ದೇಶ. ಆ ಉದ್ದೇಶ ಸಾಧನೆಗೆ ಆ ಜನರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದು ಆವಶ್ಯಕ ವಷ್ಟೆ. ಹಾಗೆ ಅರ್ಥಮಾಡಿಕೊಳ್ಳುವ ಉದ್ದೇಶದಿಂದ ಅವರು ಪ್ರವಾಸ ಮಾಡುತ್ತಾರೆ. ಹೋದ ಕಡೆ ಪ್ರಮುಖರಾದವರನ್ನೂ ಮುಖಂಡರನ್ನೂ ಭೇಟಿಮಾಡಿ ಅವರೊಡನೆ ರಾಜಕೀಯ, ಸಾಮಾಜಿಕ, ಆರ್ಥಿಕ ವಿಚಾರ ಗಳನ್ನು ಚರ್ಚಿಸಿ ಆ ಜನರ ಸ್ಥಿತಿಗತಿಗಳನ್ನು ಅರಿಯುತ್ತಾರೆ. ಇಂತಹ

ವಿಚಾರವಿನಿಮಯದಿಂದ ಆ ಜನರು ನೆಹರೂರವರನ್ನು ಅರಿಯುವಂತೆಯೂ, ನೆಹರೂರವರು ಆ ಜನರನ್ನು ಅರಿತಂತೆಯೂ ಆಗುತ್ತದೆ. ನೆಹರೂರವರ ಅನುಭವ ಆಳವಾಗುತ್ತದೆ, ದೃಷ್ಟಿ ವಿಶಾಲವಾಗುತ್ತದೆ. ಹೀಗೆ ನೆಹರೂರವರು ದಿನ ದಿನಕ್ಕೆ ಬೆಳೆಯುತ್ತಾಹೋಗಿದ್ದಾರೆ.

ಯಾವಾಗ ನೆಹರೂರವರು ಗಾಂಧೀಜಿಯವರ ಶಿಷ್ಯತ್ವವನ್ನು ಒಪ್ಪಿಕೊಂಡರೋ ಆಗ ಅವರು ಶುಷ್ಕನಾಗರೀಕತೆಯ ಪಟ್ಟಣಗಳನ್ನು ಬಿಟ್ಟು ನೈಜ ಸಂಸ್ಕೃತಿಯ ಹಳ್ಳಿಗಳ ಕಡೆಗೆ ಹೊರಡಬೇಕಾಯಿತು. 'ಹಳ್ಳಿಗಳ ಕಡೆ ಹೋಗಿರಿ. ಅವರಿಗೆ ಸ್ವಾತಂತ್ರ್ಯಸಂಗ್ರಾಮದ ವಿಷಯಗಳನ್ನು ತಿಳಿಸಿರಿ. ಅವರಲ್ಲಿ ರಾಜಕೀಯ ಜಾಗೃತಿಯನ್ನುಂಟುಮಾಡಿರಿ. ಊರು ಊರು ಹಳ್ಳಿ ಹಳ್ಳಿಗಳ ಜನರು ಸ್ವಾತಂತ್ರ್ಯದಾಹದಿಂದ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದ್ದೇ ಆದರೆ ಆಗ ಪ್ರಪಂಚದ ಕಾಲುಭಾಗವನ್ನಲ್ಲ, ಸಮಸ್ತ ಪ್ರಪಂಚವನ್ನೇ ಆಳುತ್ತಿರುವ ಪರರಾಷ್ಟ್ರವೂ ಕೂಡ ನಮ್ಮನ್ನು ಆಳಲಾರದು. ಒಂದು ಜನಾಂಗವೇ ದಂಗೆಯೆದ್ದರೆ ಎಷ್ಟು ಸೈನ್ಯದಿಂದೇನು ಪ್ರಯೋಜನವಾದೀತು' — ಎಂದು ಗಾಂಧಿಯವರು ಹೇಳುತ್ತಿದ್ದರು. ನೆಹರೂರವರಿಗೆ ಅದರ ಮಹತ್ವದ ಅರಿವಾಯಿತು. ಅವರು ಹಳ್ಳಿಗಳ ಕಡೆ ಹೊರಟರು. ಲಂಡನ್ನಿನ ಕಾಲೇಜಿನಲ್ಲಿ ಓದಿದವರು ಆ ರೈತರೊಡನೆ ಓಡಾಡಿದರು. ನೆಹರೂರವರ ಮೈ ಅವರ ಕೊಳೆಗೆ ಹೊಂದಿಕೊಂಡಿತು. ಅದಕ್ಕೆ ಮಳೆ ಬಿಸಿಲು ಛಳಿ ಗಾಳಿಗಳ ಹೊಡೆತವನ್ನು ಸೈರಿಸುವ ಶಕ್ತಿ ಬಂತು. ಅವರು ನೆಹರೂರವರಿಗೆ ಧೈರ್ಯವಾಗಿ ಮಾತನಾಡುವುದನ್ನು ಕಲಿಸಿದರು, ಭಾಷಣಕಲೆಯನ್ನು ಕಲಿಸಿದರು. ಅವರು ನೆಹರೂರವರಿಗೆ ತಮ್ಮ ತುಂಬುಹೃದಯದ ಪ್ರೇಮವನ್ನು ನೀಡಿದರು, ನೆಹರೂರವರೂ ಅವರನ್ನು ಪ್ರೀತಿಸಿದರು. ಅವರ ನಿಷ್ಕಪಟ ನಿರಾಡಂಬರದ ಜೀವನವನ್ನು ಮೆಚ್ಚಿದರು. ಅವರು ನೆಹರೂರವರಿಗೆ ತಮ್ಮ ಕಷ್ಟಗಳನ್ನು ಹೇಳಿಕೊಂಡರು. ಭಾರಿ ಜಮೀನುದಾರರ ಕಿರುಕುಳವನ್ನು ವಿವರಿಸಿದರು. ನೆಹರೂರವರ ಮನಸ್ಸು ಆ ದುಷ್ಟ ಜಮೀನುದಾರರ ಬಗ್ಗೆ ಕೆರಳಿತು. ಕರನಿರಾಕರಣೆಯ ಚಳುವಳಿಯನ್ನು ಷುರು ಮಾಡಿದರು. ಅದರಿಂದ ಸ್ವಲ್ಪ ರೈತರಿಗೆ ನೆಮ್ಮದಿಯುಂಟಾಯಿತು. ಸ್ವಾತಂತ್ರ್ಯ ಬಂದಮೇಲೆ ದುಡಿಯುವ ರೈತನ ಜೀವ ಹಿಂಡುತ್ತಿದ್ದ

ಜಮೀನುದಾರರನ್ನು ನಿರ್ಮೂಲಮಾಡಬೇಕೆಂದು ಅಂದೇ ಅವರು ನಿಶ್ಚಯಿಸಿದರು. ಇಂದು ಆ ಕೆಲಸವನ್ನು ಕೈಕೊಂಡಿದ್ದಾರೆ.

ನೆಹರೂರವರು ಹಳ್ಳಿಗರ ಕಡೆ ತಿರುಗಿದುದು ಅವರ ಕಷ್ಟಕಾರ್ಪಣ್ಯಗಳನ್ನು ತಿಳಿದುಕೊಂಡು ಅದಕ್ಕೆ ಪರಿಹಾರ ಹುಡುಕುವುದಕ್ಕೆ ಮಾತ್ರವಲ್ಲ, ಭಾರತ ಸ್ವಾತಂತ್ರ್ಯದ ಮಹಾ ಸಂಗ್ರಾಮದ ಬಗ್ಗೆ ತಿಳಿವಳಿಕೆ ಕೊಟ್ಟು ಅವರ ಸಹಕಾರವನ್ನೂ ಅದಕ್ಕೆ ಪಡೆಯುವುದಕ್ಕೆ. ಹಳ್ಳಿಗಳ ಕಡೆ ಹೋದಾಗ ಅವರಿಗೆ ಆಶ್ಚರ್ಯವನ್ನುಂಟುಮಾಡಿದ ಸಂಗತಿಯೆಂದರೆ, ಆ ಹಳ್ಳಿಗರಿಗೆ ಭಾರತದ ಸ್ವಾತಂತ್ರ್ಯದ ಚಳುವಳಿಯ ಬಗ್ಗೆ ಇದ್ದ ಅಜ್ಞಾನ ಅನಾದರಣೆಗಳು. ನಾವು ಮಹಾ ಕಾರ್ಯವನ್ನು ಮಾಡುತ್ತಿದ್ದೇವೆಂದು ಹೆಮ್ಮೆಪಟ್ಟುಕೊಳ್ಳುತ್ತಿದ್ದ ಪ್ರಮುಖ ರಾಜಕಾರಿಣಿಗಳಿಗೆ ಹಳ್ಳಿಗಳ ಕಡೆ ಹೋದಾಗ ತಾವು ಮಾಡುತ್ತಿರುವ ಕಾರ್ಯದಲ್ಲಿ ಹೇಗೆ ನೂರಕ್ಕೆ ತೊಂಭತ್ತುಭಾಗ ಹಳ್ಳಿಗಳಲ್ಲಿ ವಾಸಿಸುತ್ತಿರುವ ರೈತಾಪಿ ಜನರನ್ನು ಉಪೇಕ್ಷೆಮಾಡಿ ತಪ್ಪು ಮಾಡುತ್ತಿದ್ದೇವೆ ಎಂಬುದರ ಅರಿವಾಯಿತು. ನೆಹರೂರವರು ಈ ಕೊರತೆಯನ್ನು ತುಂಬಿಕೊಡಬೇಕೆಂದು ಹಳ್ಳಿ ಹಳ್ಳಿಗಳಲ್ಲಿ ಸಂಚಾರಮಾಡಿ ಕಾಂಗ್ರೆಸ್ ಸಂಸ್ಥೆಯ ಕಾರ್ಯಕಲಾಪಗಳ ಬಗ್ಗೆಯೂ, ಕಾಂಗ್ರೆಸ್ ಸಂಸ್ಥೆ ಭಾರತದ ಪ್ರಜಾಕೋಟಿಗೆ ಹೇಗೆ ಸ್ವಾತಂತ್ರ್ಯವನ್ನು ಕೊಡಿಸುವುದಕ್ಕಾಗಿ ಹೊಡೆದಾಡುತ್ತಿರುವುದೆಂಬುದರ ಬಗ್ಗೆಯೂ, ಅದಕ್ಕೆ ಸಹಾಯ ಮಾಡುವುದು ಎಷ್ಟು ಆವಶ್ಯಕವೆಂಬುದನ್ನೂ ಆ ಜನರಿಗೆ ತಿಳಿಯಹೇಳಿದರು. ಸ್ವಾತಂತ್ರ್ಯವೆಂದರೇನೆಂಬುದನ್ನು ವಿವರಿಸಿದರು. ಸ್ವಾತಂತ್ರ್ಯ ಬಂದಮೇಲೆ ಅವರು ಯಾವ ಬಗೆಯ ಸೌಖ್ಯ ನೆಮ್ಮದಿಗಳನ್ನು ಪಡೆಯಬಹುದೆಂಬುದನ್ನು ತಿಳಿಸಿದರು. ದಾಸ್ಯದಲ್ಲಿರುವ ಕುಂದುಕೊರತೆಗಳನ್ನು ಅವರ ಗಮನಕ್ಕೆ ತಂದರು. ಆಳರಸರ ಸುಲಿಗೆಯಿಂದ ಪಾರಾಗಬೇಕಾದರೆ ಏನುಮಾಡಬೇಕೆಂಬುದನ್ನು ತಿಳಿಸಿದರು. ಕಾಂಗ್ರೆಸ್ಸಿನ ಸ್ವಾತಂತ್ರ್ಯಸಂಗ್ರಾಮದ ವೈಶಿಷ್ಟ್ಯವನ್ನು ವಿವರಿಸಿ ಸತ್ಯ ಅಹಿಂಸೆಗಳ ಮಾರ್ಗದ ವಿಚಾರವಾಗಿ ತಿಳುವಳಿಕೆ ಕೊಟ್ಟರು. ಅವರು ಅಹಿಂಸೆಯ ಪಾಠವನ್ನು ಹೇಳಿಕೊಡುವಾಗ ಪಟ್ಟ ಕಷ್ಟವನ್ನು ಬೇರೆ ಕಡೆ ಆಗಲೇ ಹೇಳಲಾಗಿದೆ. ಹೀಗೆ ಪಾಠಗಳನ್ನು ಹೇಳಿ, ಉಪನ್ಯಾಸಗಳನ್ನು ಕೊಟ್ಟು ಆ ಹಳ್ಳಿಯ ಜನರನ್ನು ತಯಾರು

ಮಾಡದಿದ್ದಿದ್ದರೆ ಭಾರತದ ಯಾವ ಸ್ವಾತಂತ್ರ್ಯದ ಚಳುವಳಿಯೂ ಕಾರ್ಯಗತವಾಗುತ್ತಿರಲಿಲ್ಲ. ಹೀಗೆ ಇಡೀ ಜನತೆಯನ್ನೇ ಸ್ವಾತಂತ್ರ್ಯ ಸಂಗ್ರಾಮಕ್ಕೆ ತಯಾರುಮಾಡಿದವರು ನೆಹರೂರವರು.

ಭಾರತದಲ್ಲಿನ ಪ್ರವಾಸಗಳ ಬಗ್ಗೆ ಈ ಮೇಲಿನ ಉದ್ದೇಶಗಳೂ, ಪರಿಣಾಮಗಳೂ ಆಗಿದ್ದರೆ ಭಾರತದ ಆಚೆ ಯೂರೋಪಿನ ಸ್ಪೈಯಿನ್, ಫ್ರಾನ್ಸ್, ಜರ್ಮನಿ, ಜೆಕೋಸ್ಲೋವೇಕಿಯ, ಇಂಗ್ಲೆಂಡ್, ರಷ್ಯಾ—ಮುಂತಾದ ದೇಶಗಳಲ್ಲಿಯೂ, ಸುತ್ತಮುತ್ತಲ ಸಿಂಹಳ, ಬರ್ಮ, ಮಲಯ, ಚೀನಾ ಮುಂತಾದ ಪಾಶ್ಚಾತ್ಯ ಮತ್ತು ಪೌರ್ವಾತ್ಯ ರಾಷ್ಟ್ರಗಳಲ್ಲಿಯೂ ಮಾಡಿದ ಪ್ರವಾಸಗಳ ವೈಖರಿ ಬೇರೆ. ಇಂದಿನ ಪ್ರಪಂಚದಲ್ಲಿ 'ದೂರ'ಗಳ ಗಣನೆಯಿಲ್ಲ. ಹತ್ತಾರುಸಾವಿರ ಮೈಲಿ ದೂರವಿರುವ ಪ್ರದೇಶಗಳನ್ನು ಒಂದೆರಡು ದಿನಗಳಲ್ಲಿ ಸೇರಬಹುದಾದ ವಾಹನಸೌಕರ್ಯ, ರೇಡಿಯೋ ಟೆಲಿಫೋನ್‌ಗಳಿರುವ ಈ ಆಧುನಿಕ ಯುಗದಲ್ಲಿ ಹತ್ತುಸಾವಿರ ಮೈಲಿ ದೂರ ವಿರುವ ದೇಶ ನೆರೆನಾಡಿನಷ್ಟೇ ಹತ್ತಿರದ್ದಾಗಿಬಿಟ್ಟಿದೆ. ಒಂದು ದೇಶದಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ಪರದೇಶದವರೂ ವಿಮರ್ಶಿಸಿ ಅಭಿಪ್ರಾಯ ಸೂಚನೆಮಾಡುತ್ತಾರೆ. ಅಸಂಖ್ಯಾತವಾದ ವೃತ್ತಪತ್ರಿಕೆಗಳು ಎಲ್ಲ ಕಡೆ ನಡೆಯುವ ಎಲ್ಲ ಘಟನೆಗಳ ಬಗ್ಗೆಯೂ ಟೀಕೆಮಾಡುತ್ತಾ ಒಂದು 'ಲೋಕಾಭಿಪ್ರಾಯ' (World opinion) ವನ್ನೇ ಸೃಷ್ಟಿಸುತ್ತವೆ. ಯಾವ ದೇಶವೂ ಅದನ್ನು ಉಪೇಕ್ಷಿಸುವಹಾಗಿಲ್ಲ. ಇಂತಹ ಲೋಕಾಭಿಪ್ರಾಯ ವನ್ನು ಭಾರತದ ಸ್ವಾತಂತ್ರ್ಯಸಮರದ ಬಗ್ಗೆ, ಭಾರತಕ್ಕೆ ಸಹಾಯವಾಗುವ ರೀತಿಯಲ್ಲಿ ರೂಪಿಸಬೇಕಾದರೆ ಅದಕ್ಕೆ ತಕ್ಕ ಪ್ರಚಾರ ಆವಶ್ಯಕ. ಭಾರತ ದಲ್ಲೇ ಇದ್ದರೆ ಬ್ರಿಟಿಷ್ ಸರ್ಕಾರದವರು ಅಂತಹ ಪ್ರಚಾರಕ್ಕೆಂದಿಗೂ ಅವಕಾಶಕೊಡುವುದಿಲ್ಲವೆಂದು ತಿಳಿದು ನೆಹರೂರವರು ಆ ಕಾರ್ಯಸಾಧನೆ ಗಾಗಿ ದೂರದೇಶಗಳ ಪ್ರವಾಸಗಳನ್ನು ಕೈಗೊಂಡರು. ಅಲ್ಲಿಯ ಜನರಿಗೆ ಭಾರತೀಯ ರೀತಿಯ ಸತ್ಯ ಅಹಿಂಸೆಗಳ ಪರಿಚಯವಿರಲಿಲ್ಲ. ಗಾಂಧಿಯವರ ಸತ್ಯಾಗ್ರಹ, ಪ್ರಪಂಚ ಹಿಂದೆಂದೂ ಕಾಣದ ಹೊಸ ಸ್ವಾತಂತ್ರ್ಯದ ಮಾರ್ಗ. ಅಂತಹುದರ ಕಲ್ಪನೆಯನ್ನು ನೆಹರೂರವರು ಯೂರೋಪಿಯನ್ ರಾಷ್ಟ್ರಗಳ ವರಿಗೆ ಪರಿಚಯಮಾಡಿಕೊಟ್ಟರು. ಭಾರತದ ಸ್ವಾತಂತ್ರ್ಯ ಚಳುವಳಿಯ

ಶಕ್ತಿಯನ್ನೂ, ರೂಪರೇಖೆಗಳನ್ನೂ ಅವರಿಗೆ ವಿವರಿಸಿದರು. ಪ್ರಪಂಚದಾದ್ಯಂತವಾಗಿ ಭಾರತದ ಬಗ್ಗೆ ಸಹಾನುಭೂತಿ ಹುಟ್ಟುವಹಾಗೆ, ಉಪನ್ಯಾಸಗಳ ಮೂಲಕ, ಲೇಖನಗಳ ಮೂಲಕ, ರಾಷ್ಟ್ರನಾಯಕರುಗಳೊಡನೆ ಚರ್ಚೆಯ ಮೂಲಕ— ಶ್ರಮಿಸಿದರು. ಪ್ರಪಂಚದ ದೃಷ್ಟಿ ಭಾರತದ ಕಡೆ ಹರಿಯುವಹಾಗೆ ಮಾಡಿದರು.

ಈ ವಿಶ್ವಪರ್ಯಟನೆಯಿಂದ ಇನ್ನೊಂದು ಪ್ರಯೋಜನವೂ ಆಯಿತು. ನೆಹರೂರವರಿಗೆ ಪ್ರಪಂಚದ ವಸಾಹತು ರಾಷ್ಟ್ರಗಳ ಆಳ್ವಿಕೆಯ ವೈಚಿತ್ರ್ಯ, ಆ ಜನರ ಕುಂದುಕೊರತೆಗಳು, ಅವರು ಸ್ವಾತಂತ್ರ್ಯಕ್ಕಾಗಿ ನಡೆಸುತ್ತಿರುವ ಹೋರಾಟ— ಇವು ಗೊತ್ತಾದುವು. ಬಾಲ್ಯದಲ್ಲಿ ಕಂಡ ಯೂರೋಪು ಅವರ ಯೌವನದಲ್ಲಿ ಬದಲಾಗಿತ್ತು. ರಾಜಕೀಯ, ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳು ಬದಲಾಗಿದ್ದುವು. ವೈಜ್ಞಾನಿಕ ಪ್ರಗತಿ ಈ ಎಲ್ಲ ಬಗೆಯ ಜೀವನದಲ್ಲೂ ಅತಿ ಮಹತ್ವವಾದ ಬದಲಾವಣೆಯನ್ನು ಮಾಡಿದ್ದುವು. ರಾಜಕಾರಿಣಿಯಾದವನು ಹೀಗೆ ಬದಲಾಗುತ್ತಿದ್ದ ಪ್ರಪಂಚವನ್ನು ಕಂಡುಕೊಂಡು ಅನುಭವವನ್ನು ವಿಶಾಲಮಾಡಿಕೊಳ್ಳಬೇಕಾಗಿತ್ತು. ಪ್ರಪಂಚದ ವಿದ್ಯಮಾನಗಳ ಬಗ್ಗೆ ಕಾಲೋಚಿತವಾದ ತಿಳುವಳಿಕೆಯನ್ನು ಪಡೆಯಲು ಮೇಲಿಂದಮೇಲೆ ಕೈಕೊಂಡ ಈ ಪ್ರವಾಸಗಳು ಸಹಕಾರಿಯಾದುವು. ಜೊತೆಗೆ ನೆಹರೂರವರು ಇತರ ರಾಷ್ಟ್ರಗಳ ರಾಜಕೀಯ ಸಮಸ್ಯೆಗಳನ್ನು ಗ್ರಹಿಸಿ ಅವರ ಕಷ್ಟಗಳಿಗೆ ತಮ್ಮ ಸಹಾನುಭೂತಿಯನ್ನು ತೋರಿಸುತ್ತಿದ್ದರು. ಕೆಲವು ವೇಳೆ ಸಲಹೆ ಸೂಚನೆಗಳನ್ನು ಕೊಟ್ಟುದೂ ಉಂಟು. ಇದರಿಂದ ಭಾರತದ ಬಗ್ಗೆ ಅವರುಗಳಿಗೆ ಒಂದು ವಿಧವಾದ ಸ್ನೇಹ ಬೆಳೆದಂತಾಯಿತು. ಪ್ರಪಂಚದ ರಾಜಕಾರಿಣಿಗಳು ಭಾರತದ ಕಡೆ ಗೌರವದಿಂದ ಕಾಣುವ ಹಾಗಾಯಿತು.

ನೆಹರೂರವರ ಮೊದಲ ಯೂರೋಪು ಪ್ರವಾಸವೆಂದರೆ ಅವರು ಓದುವುದಕ್ಕೆಂದು ಇಂಗ್ಲೆಂಡಿಗೆ ಹೋದುದೇ. ಇಂಗ್ಲೆಂಡಿನಲ್ಲಿನ ವಿದ್ಯಾಭ್ಯಾಸ ಕ್ರಮ ವಿದ್ಯಾರ್ಥಿಗಳ ಮನಸ್ಸನ್ನು ವಿಶಾಲಗೊಳಿಸುವುದರಲ್ಲಿ ನಿಸ್ಸೀಮವಾದುದು. ಪ್ರಪಂಚದ ಹೆಸರಾಂತ ಸಾಹಿತಿಗಳ, ರಾಜಕಾರಿಣಿಗಳ, ವೈಜ್ಞಾನಿಕರ ಮತ್ತು ಸಮಾಜಸುಧಾರಕರ ಉತ್ತಮ ಪುಸ್ತಕಗಳನ್ನೋದಿ

ಆ ಎಲ್ಲ ಶಾಸ್ತ್ರ, ಕಲೆಗಳ ಸಿದ್ಧಾಂತಗಳನ್ನೂ ಮನನಮಾಡಿಕೊಂಡು ಅವರ ಮನಸ್ಸು ಬುದ್ಧಿಗಳು ಒಳ್ಳೆ ದೃಢವಾದ ಅಸ್ತಿಭಾರದ ಮೇಲೆ ನಿಂತಿತು. ಆ ತತ್ತ್ವಗಳನ್ನು ದೇಶದ ಸನ್ನಿವೇಶಕ್ಕೆ ಹೊಂದಿಸಿನೋಡಿ ಯಾವುದು ಸರಿ ಯಾವುದು ತಪ್ಪು ಎಂದು ತಿಳಿದುಕೊಳ್ಳುವ ವಿಮರ್ಶಾದೃಷ್ಟಿಯೂ ಆಗಲೇ ಬೆಳೆದಿತ್ತು. ವ್ಯಾಸಂಗಮಾಡುತ್ತಿದ್ದಾಗ ನೆಹರೂರವರು ಬಿಡುವುಕಾಲಗಳಲ್ಲಿ ಯೂರೋಪಿನ ಬಹು ಭಾಗಗಳನ್ನು ನೋಡಿಬಂದರು. ಅದಾದಮೇಲೆ ಗಾಂಧಿಯವರ ಸೂಚನೆಯಂತೆ ಭಾರತದ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರವಾಸಮಾಡಿದರು. ಕರನಿರಾಕರಣೆಯ ಚಳುವಳಿಯನ್ನು ಶುರುಮಾಡಿ, ಕಾಂಗ್ರೆಸ್ಸಿನ ಧ್ಯೇಯಗಳನ್ನು ಅವರಿಗೆ ವಿವರಿಸಿದರು. ೧೯೨೬–೨೭ರಲ್ಲಿ ಹೆಂಡತಿಯ ಖಾಯಿಲೆಯ ಕಾರಣದಿಂದ ಒಂದು ವರ್ಷ ಒಂಭತ್ತುತಿಂಗಳುಗಳ ದೀರ್ಘವಾದ ಯೂರೋಪು ಪ್ರವಾಸವನ್ನು ಕೈಕೊಂಡರು. ಬ್ರಸಲ್ಸ್ ಸಮ್ಮೇಳನದಲ್ಲಿ ಭಾಗವಹಿಸಿ ರಷ್ಯಾಕ್ಕೂ ಭೇಟಿಕೊಟ್ಟರು. ೧೯೩೬ರಲ್ಲಿ ಕಾಂಗ್ರೆಸ್ ಪ್ರಚಾರಕಾರ್ಯವನ್ನು ತೆಗೆದುಕೊಂಡು ಇಡೀ ಭರತಖಂಡವನ್ನೇ ಸುತ್ತಿಬಂದರು; ಸ್ವಾತಂತ್ರ್ಯದಾಹವನ್ನು ಹುಟ್ಟಿಸಿದರು. ೧೯೩೧ರಲ್ಲಿ ಅವರ ಆರೋಗ್ಯ ಸ್ವಲ್ಪ ಕೆಟ್ಟು ವಿಶ್ರಾಂತಿ ಬೇಕಾಗಿದ್ದುದರಿಂದ ಸಿಂಹಳಕ್ಕೆ ಹೋದರು. ಅಲ್ಲಿ ನೋಡಬೇಕಾದ ಸ್ಥಳಗಳನ್ನೆಲ್ಲಾ ನೋಡಿಬಂದರು. ಅಲಹಾಬಾದಿಗೆ ವಾಪಸು ಬರುವಾಗ ದಾರಿಯಲ್ಲಿ ತಿರುವಾಂಕೂರು, ಕೊಚ್ಚಿ, ಮಲಬಾರು, ಮೈಸೂರು, ಹೈದರಾಬಾದು ಪ್ರಾಂತಗಳನ್ನು ಸುತ್ತಿಬಂದರು. ಹೀಗೆ ಸುತ್ತಾಡುವಾಗ ಆ ಜನರ ರಾಜಕೀಯ ಆರ್ಥಿಕ ಸ್ಥಿತಿಗತಿಗಳನ್ನು ಮಾತ್ರ ತಿಳಿದುಕೊಂಡುಬರಲಿಲ್ಲ. ಆ ದೇಶದ ಕಲೆಗಾರಿಕೆ, ವಾಸ್ತು, ಶಿಲ್ಪ, ಮಧುರೆ ಶ್ರೀರಂಗಗಳ ದೇವಸ್ಥಾನದ ಶಿಲ್ಪಗಳು, ಬೇಲೂರು ಹಳೇಬೀಡು ಶ್ರವಣಬೆಳಗೊಳಗಳ ಶಿಲ್ಪಗಳು, ಎಲ್ಲೋರ ಅಜೆಂತದ ಗುಹಾಲಯಗಳು, ಬಣ್ಣ ಚಿತ್ರಗಳು—ಇವುಗಳನ್ನು ನೋಡಿಬಂದರು. ಭಾರತದ ಪುನರ್ದರ್ಶನ ಮಾಡಿಕೊಂಡು ಬಂದರು. ಇದಾದಮೇಲೆ ಡಾ॥ ಹರ್ಡಿಕರರು ಕರ್ಣಾಟಕದ ವಿಶೇಷ ಪ್ರವಾಸಕ್ಕೆಂದು ಅವರನ್ನು ಕರೆದೊಯ್ದರು. ಕರ್ಣಾಟಕವೆಲ್ಲವನ್ನೂ ಸ್ವತಃ ನೋಡಿಬಂದದ್ದಾಯಿತು. ಆ ಹೊತ್ತಿಗೆ ಬೀಹಾರಿನ ಭೂಕಂಪ ನಡೆಯಿತು. ಅಲ್ಲಿಯ ಪ್ರವಾಸವಾಯಿತು. ಯಾವಾಗ ಭಾರತದ ಜನರಿಗೆ

ಕಾಂಗ್ರೆಸ್ಸಿನಲ್ಲಿ ಮತ್ತು ಅದರ ಸ್ವಾತಂತ್ರ್ಯ ಚಳುವಳಿಯಲ್ಲಿ ಉತ್ಸಾಹ ಕಡಿಮೆಯಾಯಿತೆಂದು ಕಂಡರೆ ಆಗ ದೇಶದಾದ್ಯಂತ ಸಂಚಾರ ಮಾಡಿ ಆ ಚಳುವಳಿ ಪ್ರವೃದ್ಧಮಾನವಾಗುವಂತೆ ಪ್ರಚಾರಕಾರ್ಯ ಕೈಗೊಂಡರು. ಆ ದೀವಿಗೆ ಆರಿಹೋಗದಹಾಗೆ ನೋಡಿಕೊಂಡರು. ಅಲ್ಲಿಂದ ಮುಂದೆ ಕಮಲಾ ನೆಹರೂರವರ ಚಿಕಿತ್ಸೆಗಾಗಿ ಪುನಃ ಯೂರೋಪಿಗೆ ಪ್ರಯಾಣ ಮಾಡಿದರು. ಫ್ರಾನ್ಸ್, ಜರ್ಮನಿ, ಇಂಗ್ಲೆಂಡುಗಳಲ್ಲಿ ಸಂಚರಿಸಿ ಯೂರೋಪಿನ ಇತ್ತೀಚಿನ ವಿದ್ಯಮಾನಗಳನ್ನು ತಿಳಿದುಕೊಂಡರು. ೧೯೩೬–೩೭ ರಲ್ಲಿ ರಾಷ್ಟ್ರಪತಿಯಾಗಿ ಪ್ರಾಂತಗಳಲ್ಲಿ ಕಾಂಗ್ರೆಸ್ ಸರ್ಕಾರ ಏರ್ಪಡಿಸಬೇಕೆಂದು ಗೊತ್ತುಮಾಡಿಕೊಂಡಾಗ ಅವರು ಪ್ರವಾಸಮಾಡಿದ ವಿಚಾರವನ್ನೂ, ಉತ್ಸಾಹವನ್ನೂ ಬೇರೆ ಕಡೆ ತಿಳಿಸಿದೆ. ೫೦,೦೦೦ ಮೈಲಿ ಗಳನ್ನು ಸುತ್ತಿ, ಭೂಮಿಯಲ್ಲಿ ಪ್ರಚಾರದಲ್ಲಿರುವ ಎಲ್ಲ ಬಗೆಯ ವಾಹನ ಗಳಲ್ಲಿಯೂ ಸುತ್ತಾಡಿ ದೇಶದಾದ್ಯಂತ ಪ್ರಚಾರಕಾರ್ಯವನ್ನು ಕೈಗೊಂಡು ಏಳು ಪ್ರಾಂತಗಳಲ್ಲಿ ಕಾಂಗ್ರೆಸ್ ಗೆಲ್ಲುವಂತೆ ಮಾಡಿದರು. ಯೂರೋಪಿನ ಪ್ರವಾಸದಲ್ಲಿ ಕಲಿತಿದ್ದ ಹೊಸ ವಿಷಯಗಳನ್ನೆಲ್ಲಾ ಜನತೆಯಲ್ಲಿ ಪ್ರಚಾರ ಮಾಡಿದರು. ಪ್ರಜಾಸತ್ತಾತ್ಮಕವಾದ ಸಮತಾವಾದಕ್ಕೆ ಜನರ ಮನಸ್ಸನ್ನು ತಿರುಗಿಸಿದರು. ಅಷ್ಟುಹೊತ್ತಿಗೆ ಬಾಬು ಸುಭಾಸರು ರಾಷ್ಟ್ರಾಧ್ಯಕ್ಷರಾಗಿ ನೆಹರೂರವರಿಗೆ ಬಿಡುವುಸಿಗಲು ಅಂತಃಕಲಹದಲ್ಲಿದ್ದ ಸ್ಪೆಯಿನನ್ನೂ, ಇಂಗ್ಲೆಂಡ್, ಫ್ರಾನ್ಸ್, ಜೆಕೋಸ್ಲೋವೇಕಿಯಾವನ್ನೂ ಸಂದರ್ಶಿಸಿ ಬಂದರು. ಬರ್ಮಾ ಮಲಯಗಳನ್ನು ನೋಡಿಬಂದರು. ಜಪಾನಿನ ಆಕ್ರಮಣದಲ್ಲಿ ನೊಂದಿದ್ದ ಚೈನಾವನ್ನೂ ನೋಡಿಬಂದರು. ಎಲ್ಲ ರಾಜಕಾರಣಿಗಳ ಸ್ನೇಹ ವನ್ನೂ ಸಂಪಾದಿಸಿದರು. ಸಿಂಹಳಕ್ಕೂ ಭೇಟಿಕೊಟ್ಟರು. ಮಹಾ ಯುದ್ಧ ಮುಗಿಯಿತು. ಭಾರತಕ್ಕೆ ಸ್ವಾತಂತ್ರ್ಯ ದೊರಕಿತು.

ಭಾರತಕ್ಕೆ ಸ್ವಾತಂತ್ರ್ಯ ಬರುವ ಮುನ್ನ ಈ ಪ್ರವಾಸ ಪರ್ಯಟನ ಗಳಾದರೆ ಸ್ವಾತಂತ್ರ್ಯ ಬಂದಮೇಲಿನ ಪ್ರವಾಸಗಳು ಇನ್ನೂ ಹೆಚ್ಚು ಪರಿಣಾಮಕಾರಿಯಾದುವುಗಳು. ಪ್ರಪಂಚದ ಪ್ರಮುಖ ರಾಷ್ಟ್ರಗಳು, ವಸಾಹತುಗಳ ಜನ-ಧನದ ಮದದಿಂದ ಇದುವರೆಗೆ ತಮ್ಮ ರಾಜಕಾರಣದಲ್ಲಿ ಏಷ್ಯಾಖಂಡದ ಇರುವಿಕೆಯನ್ನೇ ಅಲಕ್ಷಿಸಿದ್ದರು. ಏಷ್ಯದ ರಾಷ್ಟ್ರಗಳೆಂದರೆ

ಅವರಿಗೆ ತಾತ್ಸಾರ. ಸ್ವಾತಂತ್ರ್ಯರಾಷ್ಟ್ರದ ಮುಖಂಡರೆಂದು ಇವರನ್ನು ಇಂಗ್ಲೆಂಡ್, ಅಮೆರಿಕ, ಕೆನಡ— ದೇಶಗಳು ಮೊದಲು ಆಹ್ವಾನಿಸಿದುವು. ಅವರಿಗೆ ಇವರು ಮೊದಲು ಹೇಳಿದ ಎಚ್ಚರಿಕೆಯ ಮಾತು ಇದು; 'ಏಷ್ಯಾ ಜಾಗೃತವಾಗಿದೆ. ನಿಮ್ಮ ಪ್ರಪಂಚ ಯೂರೋಪು ಮಾತ್ರವೇ ಅಲ್ಲ. ಪ್ರಪಂಚದ ಮುಕ್ಕಾಲುಭಾಗದ ಜನ ಏಷ್ಯದಲ್ಲಿದ್ದಾರೆ. ನೀವು ಅವರನ್ನು ಉಪೇಕ್ಷೆಮಾಡಿದರೆ ತೊಂದರೆಪಡುತ್ತೀರಿ.' ಪಶ್ಚಿಮ ರಾಷ್ಟ್ರಗಳ ದೃಷ್ಟಿ ಏಷ್ಯದ ಕಡೆ ಹರಿಯುವಂತೆ ಮಾಡಿದವರು ನೆಹರೂರವರು. ಪ್ರಪಂಚ, ರಷ್ಯದ ಕಮ್ಯೂನಿಸಂ, ಅಮೆರಿಕದ ಕ್ಯಾಪಿಟಲಿಸಂ— ಈ ಎರಡು ಭಾಗ ಗಳಾಗಿಬಿಟ್ಟಿತ್ತು. ಒಬ್ಬರೊಡನೊಬ್ಬರಿಗೆ ಸಂಪರ್ಕವೇರ್ಪಡುವಹಾಗೇ ಇರಲಿಲ್ಲ. ನೆಹರೂರವರು ಭಾರತವು ಈ ಎರಡು ಗುಂಪಿಗೂ ಸೇರದಿರುವ ತಟಸ್ಥ ರಾಷ್ಟ್ರವಾಗಿರುವುದೆಂದು ಸಾರಿದರು. ತಟಸ್ಥ ರಾಷ್ಟ್ರದ ಕಲ್ಪನೆ ಪ್ರಪಂಚಕ್ಕೇ ಹೊಸದು. ಅದು ಅವರಿಗೆ ಈಚೀಚಿನವರೆಗೂ ಅರ್ಥ ವಾಗಿಯೇ ಇರಲಿಲ್ಲ. ಭಾರತದ ಮೇಲ್ಪಂಕ್ತಿಯಲ್ಲಿ ತಟಸ್ಥ ರಾಷ್ಟ್ರಗಳ ಗುಂಪೇ ಬೆಳೆಯುತ್ತಿರುವುದರಿಂದ ಈಚೀಚೆಗೆ ಅದು ಅವರಿಗೆ ಅರ್ಥವಾಗು ತ್ತಿದೆ. ಈ ಎರಡು ಬಗೆಯ ಪ್ರಬಲ ರಾಷ್ಟ್ರಗಳಿಂದಲೂ ಮಾನ್ಯತೆ ಪಡೆದ ಭಾರತ ಇಬ್ಬರಿಂದಲೂ ಕೈಗಾರಿಕಾ ಪ್ರಗತಿಯ ಬಗ್ಗೆ ಸಹಾಯವನ್ನು ದೊರಕಿಸಿಕೊಳ್ಳುತ್ತಿದೆ. ಈ ಇಬ್ಬರೂ ಈಗ ಭಾರತಕ್ಕೆ ಸಹಾಯಮಾಡಲು ಆತುರರಾಗಿದ್ದಾರೆ. ಆ ಸಹಾಯಕ್ಕೆ ಕಾರಣ ನೆಹರೂರವರೇ.

ಬರಬರುತ್ತಾ ರಾಜಕಾರಿಣಿಗಳ ಭೇಟಿಗಳು ಹೆಚ್ಚಾದುದರಿಂದ ನೆಹರೂ ರವರ ವಿದೇಶ ಪ್ರವಾಸಗಳೂ ಹೆಚ್ಚುತ್ತಿವೆ. ಕೊಲಂಬೋ ಪಂಚರಾಷ್ಟ್ರಗಳ ಸಮ್ಮೇಳನ ಸಿಂಹಳದಲ್ಲೊಂದು ಬಾರಿಯೂ, ಇಂಡೋನೇಷಿಯದಲ್ಲೊಂದು ಬಾರಿಯೂ ನಡೆಯಿತು. ಈ ಪಂಚರಾಷ್ಟ್ರಗಳು ಬಾಂಡುಂಗಿನಲ್ಲಿ ೨೯ ಏಷ್ಯಾ-ಆಫ್ರಿಕನ್ ರಾಷ್ಟ್ರಗಳ ಸಮ್ಮೇಳನವನ್ನು ನಡಸಿದುವು. ಈ ಎಲ್ಲ ಕಡೆ ನೆಹರೂರವರ ಪ್ರಭಾವವೇ ಪ್ರಭಾವ. ನೆಹರೂರವರಿಂದ ಘೋಷಿ ಸಲ್ಪಟ್ಟ ಪಂಚಶೀಲದ ಅನುಷ್ಠಾನವೇ ಅನುಷ್ಠಾನ. ಈ ಮಧ್ಯೆ ನೆಹರೂ ರವರು ಚೀನಾಕ್ಕೆ ಆಹ್ವಾನಿತರಾಗಿ ಹೋಗಿಬಂದರು. ಬರ್ಮಾಕ್ಕೆ ಹೋಗಿ ಬಂದರು. ಆ ದೇಶದ ರಾಜಕಾರಿಣಿಗಳೂ ಭಾರತಕ್ಕೆ ಭೇಟಿಕೊಟ್ಟರು.

ಯುಗೋಸ್ಲೋವಿಯದ ಮಾರ್ಷಲ್ ಟಿಟೋ ಹಾಗೇ ಭಾರತಕ್ಕೆ ಬಂದಿದ್ದರು. ಈ ಪ್ರತಿಯೊಬ್ಬರೂ ಪ್ರಪಂಚದ ನೆಮ್ಮದಿಗೊಂದು ಸೂತ್ರವಾಗಿ ಭಾರತ ಸೂಚಿಸಿರುವ ಪಂಚಶೀಲದ ತತ್ತ್ವಗಳಿಗೆ ಒಪ್ಪಿ ಸಹಿ ಹಾಕುತ್ತಾಬಂದಿದ್ದಾರೆ. ಯುದ್ಧವನ್ನು ವಿಸರ್ಜಿಸಿ ಶಾಂತಿಯಿಂದ ಬಾಳಬೇಕೆಂಬ ರಾಷ್ಟ್ರಗಳ ಭೌಗೋಳಿಕ ವಿಸ್ತೀರ್ಣ ದಿನದಿನಕ್ಕೆ ಹೆಚ್ಚಾಗುತ್ತಿದೆ. ಇದೂ ಕೂಡ ಪ್ರಪಂಚಕ್ಕೆ ನೆಹರೂರವರ ಕಾಣಿಕೆಯೇ. ಇಂತಹ ಕಾಣಿಕೆಯನ್ನು ನೀಡುತ್ತಿರುವ ನೆಹರೂರವರು ಪ್ರಪಂಚದ ಯಾವ ಭಾಗಕ್ಕೇ ಹೋಗಲಿ ಅವರನ್ನು ನೋಡಲು ಆತುರರಾಗಿರುವ ಜನಸಂದಣಿ ಹೇಳತೀರದು. ಸಾವಿರಗಟ್ಟಲೆ ಲಕ್ಷಗಟ್ಟಲೆಯಾಗಿ ಜನ ಸೇರುತ್ತಾರೆ. ಯುದ್ಧಭೀತರಾಗಿರುವ ರಾಷ್ಟ್ರಗಳಿಗೆ ಶಾಂತಿಯನ್ನು ಸಾರಲು ಬರುತ್ತಿರುವ ದೇವರ ಅವತಾರವೋ ಎನ್ನುವಂತೆ ಜನ ಅವರನ್ನು ಸ್ವಾಗತಿಸಿ ಆದರಿಸುತ್ತಿದ್ದಾರೆ. ಈ ಪ್ರಪಂಚ ಪರ್ಯಟನದಲ್ಲೆಲ್ಲಾ ಇತ್ತೀಚಿನದಾದ ರಷ್ಯಾ ಪ್ರವಾಸ ಅತ್ಯಂತ ಮಹತ್ವಪೂರಿತವಾದುದು. ೨೫,೦೦೦ ಮೈಲಿಗಳ ಪ್ರವಾಸದಲ್ಲಿ ನೆಹರೂರವರ ಜನಪ್ರಿಯತೆ, ಪ್ರೇಮಾಭಿಮಾನಿಗಳು ಉಕ್ಕಿದ ಸಮುದ್ರದಂತೆ ಮೇರೆಮರಿದಿದೆ. ಈಗ ಬೆಂಗಳೂರಿನ ಎಲ್ಲ ಚಿತ್ರಮಂದಿರಗಳಲ್ಲೂ ಪ್ರದರ್ಶಿತವಾಗುತ್ತಿರುವ ಆ ನೆಹರೂರವರ ರಷ್ಯಾ ಪ್ರವಾಸದ ಚಿತ್ರವನ್ನು ನೋಡಿದವರಿಗೆ ಆ ಅಭೂತಪೂರ್ವ ಸ್ವಾಗತದ ವೈಖರಿ, ನೆಹರೂರವರನ್ನು ನೋಡಬೇಕೆಂಬ ರಷ್ಯನ್ ಜನತೆಯ ಹಂಬಲ, ಪ್ರೇಮಸೂಚಕವಾಗಿ ಅವರು ಹಾಕಿದ ಹಾರಗಳು, ಹತ್ತಿರ ಬರಲಾರದೆ ದೂರದಿಂದಲೇ ಎಸೆದ ಹೂಗೊಂಚಲುಗಳು, ಮೈಲಿಗಟ್ಟಲೆಯಾಗಿ ಘಂಟೆಗಟ್ಟಲೆ ಕಾದುಕುಳಿತಿದ್ದ ಹೆಂಗಸರು, ಗಂಡಸರು, ಮಕ್ಕಳು; ಅಂತಹ ಉತ್ಸಾಹ ಯಾವ ದೇಶದಲ್ಲೂ ಯಾವ ರಾಜಕಾರಿಣಿಗೂ ಯಾವ ಕಾಲಕ್ಕೂ ಆದುದಿಲ್ಲ. ಅದು 'ನ ಭೂತೋ ನ ಭವಿಷ್ಯತಿ'. ಉಕ್ಕಿನ ತೆರೆಯ ರಾಷ್ಟ್ರವೆಂದು ಪ್ರಚಲಿತವಾಗಿರುವ ರಷ್ಯಾದಲ್ಲಂತೂ ಅದು ಕಂಡು ಕೇಳರಿಯದ ಅಚ್ಚರಿ. ನೆಹರೂರವರು ರಷ್ಯದ ಐವತ್ತು ವರ್ಷಗಳ ಉಕ್ಕಿನ ತೆರೆಯನ್ನು ತೆರೆಸಿದರು. ಆದರಿಂದ ಚತುರ್ಮಹಾರಾಷ್ಟ್ರ ನಾಯಕರ ಭೇಟಿ ಅಭಿನಂದನೀಯವಾಯಿತು. ನೆಹರೂರವರ ಹಿಂದೆಯೇ ಉಕ್ಕಿನ ತೆರೆಯ ನಾಯಕರೂ

ರಷ್ಯದಿಂದ ಹೊರಗೆ ಜಿನೀವಾಕ್ಕೆ ಬರುವ ಹಾಗಾಯಿತು. ನೆಹರೂರವರ ಬಗ್ಗೆ ರಷ್ಯದ ಜನರು ತೋರಿದ ಉತ್ಸಾಹ ಸಂಭ್ರಮಗಳನ್ನು ನೋಡಿದ ನಮಗೆ ಜವಾಹಿರಲಾಲರ ಹಿರಿಮೆಯನ್ನು ಭಾರತೀಯರಿಗಿಂತ ಹೆಚ್ಚಾಗಿ ರಷ್ಯನರು ಅರಿತಿದ್ದಾರೇನೋ, ಹೊರ ಪ್ರಪಂಚಕ್ಕೇ ಹಾಗೆ ತೋರುತ್ತಿದೆಯೋ ಎನಿಸುತ್ತಿದೆ. ಏಕೆಂದರೆ ಭಾರತೀಯರಿಗೆ 'ಹಿತ್ತಿಲ ಗಿಡ ಮದ್ದಲ್ಲ'.

ನೆಹರೂರವರು ರಷ್ಯಾ, ಆಸ್ಟ್ರಿಯಾ, ಯುಗೋಸ್ಲೋವಿಯ, ಇಟಲಿ, ಇಂಗ್ಲೆಂಡ್, ಈಜಿಪ್ಟ್— ಮೊದಲಾದ ದೇಶಗಳಲ್ಲಿ ಸಂಚಾರಮಾಡಿ ಮಹಾ ವೈಭವವನ್ನು ಮೆರೆದು, ಭಾರತದ ಪಂಚಶೀಲತತ್ತ್ವಕ್ಕೆ ಆ ರಾಷ್ಟ್ರಗಳ ಮನ್ನಣೆ ಪಡೆದು, ಶಾಂತಿದೌತ್ಯವನ್ನು ಮುಗಿಸಿಕೊಂಡು ಭಾರತಕ್ಕೆ ಹಿಂದಿರುಗಿದರು. ಆ ಮಹಾ ವ್ಯಕ್ತಿಗೆ ಮಣಿದು ಭಾರತ ತನ್ನ ಹೆಮ್ಮೆಯನ್ನೂ ಮೆಚ್ಚುಕೆಯನ್ನೂ ಸೂಚಿಸುತ್ತಾ, 'ಭಾರತರತ್ನ'ವೆಂಬ ಬಿರುದನ್ನು ಕೊಟ್ಟಿತು. ಇಂತಹ ಭಾರತರತ್ನ ಜವಾಹಿರ್ ಚಿರಕಾಲ ಬಾಳಿ, ಅವರ ಸೇವೆಯಿಂದ ಭಾರತವನ್ನು ಪ್ರಪಂಚದ ಮಹಾರಾಷ್ಟ್ರಗಳ ಗುಂಪಿಗೆ ಸೇರಿಸುವಂತೆ ಮಾಡಲಿ, ಪ್ರಪಂಚಕ್ಕೇ ಅದು ಬೆಳಕುತೋರುವಂತೆ ಆಗಲಿ, ಭಾರತದ ಪಂಚಶೀಲತತ್ತ್ವ ಪ್ರಪಂಚವನ್ನು ಸನ್ಮಾರ್ಗದಲ್ಲಿ ನಡೆಸಲಿ, ಪ್ರಪಂಚದ ಎಲ್ಲ ಪ್ರಜೆಗಳೂ ಶಾಂತಿ ಪುಷ್ಟಿ ತುಷ್ಟಿಗಳಿಂದ ನಗುತ್ತಾ ನಲಿಯುತ್ತಾ ಸೌಹಾರ್ದದಿಂದ ಬಾಳುವಂತಾಗಲಿ.

ಅಧ್ಯಕ್ಷ ರಾಜೇಂದ್ರ ಪ್ರಸಾದರು ರಷ್ಯಾ ಪ್ರವಾಸದಿಂದ ಹಿಂದಿರುಗಿಬಂದ ಜವಾಹಿರಲಾಲರಿಗೆ
**'ಭಾರತರತ್ನ'** ವೆಂಬ ಬಿರುದನ್ನು ಪ್ರಕಟಿಸುತ್ತಿರುವುದು

# ಅನುಬಂಧ ೧

## ಜವಾಹಿರಲಾಲ್ ನೆಹರು ಅವರ ಜೀವನದ ಮುಖ್ಯ ಇಸವಿಗಳು

೧೪ ನವೆಂಬರ್ ೧೮೮೯ = ಅಲಹಾಬಾದಿನಲ್ಲಿ ಜನನ.

ಮೇ ೧೯೦೫ = ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿಗೆ ಪ್ರಯಾಣ.

ಅಕ್ಟೋಬರ್ ೧೯೦೭ = ಕೇಂಬ್ರಿಡ್ಜಿನ ಟ್ರನಿಟಿ ಕಾಲೇಜಿಗೆ ಸೇರಿದುದು.

೧೯೧೦ = ಜೀವಶಾಸ್ತ್ರದಲ್ಲಿ ಎಂ.ಎ. ಪ್ರಶಸ್ತಿಯನ್ನು ಪಡೆದುದು.

೧೯೧೨ = ಬಾರ್-ಅಟ್-ಲಾ ಪ್ರಶಸ್ತಿಯನ್ನು ಪಡೆದುದು.

೧೯೧೬ = ಗಾಂಧಿಯವರನ್ನು ಪ್ರಥಮತಃ ಲಕ್ನೋ ಕಾಂಗ್ರೆಸ್ಸಿನಲ್ಲಿ ನೋಡಿದುದು.

೧೯೧೬ = ಶ್ರೀಮತಿ ಕಮಲಾದೇವಿಯೊಡನೆ ವಿವಾಹ.

೧೯೧೮ = ಅಖಿಲ ಭಾರತ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸದಸ್ಯರಾದ್ದು.

ಮೇ ೧೯೨೨ = ಪ್ರಿನ್ಸ್ ಆಫ್ ವೇಲ್ಸರ ಆಗಮನದ ಸಂದರ್ಭದಲ್ಲಿ ದಸ್ತಗಿರಿಯಾದುದು—ಕಾರಾಗೃಹವಾಸ. (i)

ಆಗಸ್ಟ್ ೧೯೨೨ = ಬಿಡುಗಡೆ.

ಅಕ್ಟೋಬರ್ ೧೯೨೨ = ಪರದೇಶೀ ವಸ್ತ್ರ ಬಹಿಷ್ಕಾರದ ಚಳುವಳಿಗೋಸ್ಕರ ಕಾರಾಗೃಹ ಪ್ರಾಪ್ತಿ. (ii)

ಜನವರಿ ೧೯೨೩ = ಬಿಡುಗಡೆ.

೧೯೨೩ = ಅಖಿಲ ಭಾರತ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಕಾರ್ಯದರ್ಶಿಯಾಗಿ ಆಯ್ಕೆಯಾದುದು.

೧೯೨೩ = ನಾಭಾ ಸಂಸ್ಥಾನದಲ್ಲಿ ಕಾರಾಗೃಹವಾಸ. (iii)

೧೯೨೬–೨೭ = ಯೂರೋಪಿನ ಪ್ರವಾಸ. ಬ್ರಸಲ್ಸಿನ ಸಮ್ಮೇಳನದಲ್ಲಿ ಭಾಗವಹಿಸಿದುದು.

ನವೆಂಬರ್ ೧೯೨೭ = ಮಾಸ್ಕೋವಿಗೆ ಭೇಟಿ.
ಡಿಸೆಂಬರ್ ೧೯೨೭ = ಮದ್ರಾಸ್‌ನಗರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದುದು.
೧೯೨೯ = ಭಾರತದ ರಾಷ್ಟ್ರೀಯ ಜನಪದ ಮಹಾಸಭೆಯ ಅಧ್ಯಕ್ಷರಾಗಿ ಆಯ್ಕೆಯಾದುದು. 'ಮಗಳಿಗೆ ತಂದೆ ಬರೆದ ಓಲೆಗಳು' ಪ್ರಕಟನೆ, ಸ್ವಾತಂತ್ರ್ಯ ನಿರ್ಣಯವನ್ನು ಕಾಂಗ್ರೆಸ್ ಅಂಗೀಕರಿಸುವಂತೆ ಪ್ರೇರಿಸಿದುದು.
ಏಪ್ರಿಲ್ ೧೯೩೦ = ಉಪ್ಪಿನ ಸತ್ಯಾಗ್ರಹಕ್ಕಾಗಿ ಆರುತಿಂಗಳ ಶಿಕ್ಷೆ, ಕಾರಾಗೃಹ ವಾಸ. (iv)
ಅಕ್ಟೋಬರ್ ೧೯೩೦ = ಬಿಡುಗಡೆ. ಅಲಹಾಬಾದಿನಲ್ಲಿ ರೈತ ಕೂಟದಲ್ಲಿ ಭಾಗವಹಿಸಿ ಮತ್ತೆ ಬಂಧಿತರಾದುದು—ಕಾರಾಗೃಹ ಪ್ರಾಪ್ತಿ. (v)
೨೬ ಜನವರಿ ೧೯೩೧ = ಬಿಡುಗಡೆ.
೬ ಫೆಬ್ರುವರಿ ೧೯೩೧ = ಮೋತೀಲಾಲರ ಅವಸಾನ.
೨೬ ಡಿಸೆಂಬರ್ ೧೯೩೧ = ಸಂಯುಕ್ತ ಪ್ರಾಂತ್ಯದ ಕರನಿರಾಕರಣೆಯಲ್ಲಿ ಭಾಗವಹಿಸಿದುದು. ಎರಡು ವರ್ಷಗಳ ಕಠಿಣ ಶಿಕ್ಷೆ—ಕಾರಾಗೃಹವಾಸ. (vi)
೩೦ ಆಗಸ್ಟ್ ೧೯೩೩ = ತಾಯಿಯವರ ಖಾಯಿಲೆ, ಅದಕ್ಕಾಗಿ ಬಿಡುಗಡೆ.
೧೯೩೪ = ಭೂಕಂಪವಾದ ಪ್ರದೇಶಗಳಲ್ಲಿ ಸಂಚಾರ.
೧೬ ಫೆಬ್ರುವರಿ ೧೯೩೪ = ಕಲ್ಕತ್ತಾದಲ್ಲಿ ರಾಜದ್ರೋಹಕರವಾದ ಭಾಷಣ ಮಾಡಿದುದಕ್ಕಾಗಿ ಎರಡು ವರ್ಷಗಳ ಕಠಿಣ ಶಿಕ್ಷೆ, ಕಾರಾಗೃಹವಾಸ. (vii)
೧೧ ಆಗಸ್ಟ್ ೧೯೩೪ = ಹನ್ನೊಂದು ದಿನಗಳ ಬಿಡುಗಡೆ, 'ಪ್ರಪಂಚದ ಚರಿತ್ರೆಯ ಕೆಲವು ನೋಟಗಳು' ಗ್ರಂಥ ಪ್ರಕಟನೆ.
೪ ಸೆಪ್ಟೆಂಬರ್ ೧೯೩೫ = ಕಮಲಾದೇವಿಯ ಕಠಿಣ ರುಗ್ಣಸ್ಥಿತಿಗಾಗಿ ಬಿಡುಗಡೆ.

೨೮ ಫೆಬ್ರುವರಿ ೧೯೩೬ = ಕಮಲಾದೇವಿಯವರ ನಿಧನ.
ಏಪ್ರಿಲ್ ೧೯೩೬ = 'ಆತ್ಮಕತೆ' ಗ್ರಂಥ ಪ್ರಕಟನೆ.
ಡಿಸೆಂಬರ್ ೧೯೩೬ = ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆ—ಎರಡನೆಯ ಬಾರಿಗೆ.
೧೯೩೭ = ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆ—ಮೂರನೆಯ ಬಾರಿಗೆ.
ಜುಲೈ ೧೯೩೮ = ಸ್ಪೈಯಿನಿನ ಅಂತಃಕಲಹಕಾಲದಲ್ಲಿ ಸ್ಪೈಯಿನಿಗೆ ಭೇಟಿ.
೧೯೩೯ = ಸಿಂಹಳಕ್ಕೆ ಮತ್ತು ಚೀನಾದೇಶಕ್ಕೆ ಭೇಟಿ.
೧೯೪೦ = ವೈಯಕ್ತಿಕ ಸತ್ಯಾಗ್ರಹದಲ್ಲಿ ದಸ್ತಗಿರಿಯಾದುದು. ಕಾರಾಗೃಹ ಪ್ರಾಪ್ತಿ. (viii)
೧೯೪೧ = ಬಿಡುಗಡೆ.
ಆಗಸ್ಟ್ ೧೯೪೨ = 'ಭಾರತ ಬಿಟ್ಟು ಹೊರಡಿ' ಚಳುವಳಿಗಾಗಿ ಒಂಬತ್ತನೆಯ ಬಾರಿಗೆ (ಕಡೆಯ ಬಾರಿಗೆ) ದಸ್ತಗಿರಿಯಾದುದು. ಕಾರಾಗೃಹವಾಸ. (ix)
ಜೂನ್ ೧೯೪೫ = ಬಿಡುಗಡೆ.
ಮಾರ್ಚಿ ೧೯೪೬ = 'ಭಾರತದ ಪುನರ್ದರ್ಶನ' ಗ್ರಂಥ ಪ್ರಕಟನೆ.
ಜುಲೈ ೧೯೪೬ = ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆ—ನಾಲ್ಕನೆಯ ಬಾರಿಗೆ.
ಸೆಪ್ಟೆಂಬರ್ ೧೯೪೬ = ತಾತ್ಕಾಲಿಕ ಮಂತ್ರಿಮಂಡಲದಲ್ಲಿ ವಿದೇಶಾಂಗ ಸಚಿವರಾದುದು.
ಮಾರ್ಚಿ ೧೯೪೭ = ಏಷ್ಯಾ ರಾಷ್ಟ್ರಗಳ ಸಮ್ಮೇಳನವನ್ನು ಏರ್ಪಡಿಸಿದುದು.
೧೫ ಆಗಸ್ಟ್ ೧೯೪೭ = ಭಾರತ ವಿಭಜನೆ, ಇಂಡಿಯಾ–ಪಾಕಿಸ್ತಾನ ರಾಷ್ಟ್ರಗಳ ಉದಯ. ಪ್ರಧಾನ ಮಂತ್ರಿಯ ಸ್ಥಾನವನ್ನು ವಹಿಸಿದುದು.

## ಅನುಬಂಧ ೨

### ಸೆರೆಯಲ್ಲಿ

೧೯೨೧ = ಲಕ್ನೋ ಜೈಲ್—೩ ತಿಂಗಳು.
೧೯೨೨ = ,, —೨೧ ತಿಂಗಳು.
೧೯೨೪ = ನಾಭ ಜೈಲ್ —ಮೂರು ವಾರಗಳು.
೧೯೩೦ = ನೈನಿ ಜೈಲ್ —೬ ತಿಂಗಳು
೧೯೩೦ = ,, —೨೯ ತಿಂಗಳು ಗೊತ್ತಾಗಿ ೩೨ ತಿಂಗಳು ಕಳೆದುದು.
೧೯೩೧, ೧೯೩೨, ೧೯೩೩ = ನೈನಿ, ಬರೈಲಿ = ಡೆಹರಾಡೂನ್ } ೩೦ ತಿಂಗಳು ಗೊತ್ತಾಗಿ ೨೦ ತಿಂಗಳು ಕಳೆದುದು.
೧೯೩೪, ೧೯೩೫ = ಆಲಿಪುರ, ಡೆಹರಾಡೂನ್ = ನೈನಿ, ಅಲ್ಮೋರ } ೨೪ ತಿಂಗಳು.
೧೯೪೦, ೧೯೪೧ = ಡೆಹರಾಡೂನ್—೪೮ ತಿಂಗಳು ಗೊತ್ತಾಗಿ ೧೩ ತಿಂಗಳು ಕಳೆದುದು.
೧೯೪೨ = ಅಹಮದ್‌ನಗರ—೩೫ ತಿಂಗಳು.

ಒಟ್ಟು ಕಾರಾಗೃಹವಾಸ ವಿಧಿತವಾದದ್ದು: ೧೪ ವರ್ಷ ೧೦ ತಿಂಗಳು.
ಅನುಭವಿಸಿದ್ದು: ೧೦ ವರ್ಷ ೭ ತಿಂಗಳು.

## ಅನುಬಂಧ ೩

### ಸ್ಮರಣೀಯ

೧೮೮೯ ನವೆಂಬರ್ ೧೪ – ವಿಕ್ರಮ ಸಂವತ್ಸರ ೧೯೪೬, ಮಾರ್ಗಶಿರ ಬಹುಳ ಸಪ್ತಮಿ ಜನನ.
೧೯೩೧ ಫೆಬ್ರುವರಿ ೯ = ಮೋತೀಲಾಲರ ಮರಣ.
೧೯೩೬ ಫೆಬ್ರುವರಿ ೨೮ = ಕಮಲಾದೇವಿಯವರ ಮರಣ.
೧೯೩೮ ಜನವರಿ ೧೦ = ಸ್ವರೂಪರಾಣಿ ದೇವಿಯವರ ಮರಣ.

931—55. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ
ಸಿ. ವಾಸುದೇವರಾಯರವರು ಮುದ್ರಿಸಿರುವರು.